ಶ್ರೀ ಶಿವಯೋಗಿ

# ಮಡಿವಾಳೇಶ್ವರ ಪುರಾಣ

*

ಪ್ರಕಾಶಕರು :

ಶ್ರೀ ನಿ. ಪ್ರ. ಸ್ವ. ಗುರುಸಿದ್ಧಮಹಾಸ್ವಾಮಿಗಳವರು

ಶ್ರೀ ಸಂಸ್ಥಾನ ಕಲ್ಮಠ,

ಚೆನ್ನಮ್ಮನ ಕಿತ್ತೂರು



ಪುರಾಣಕವಿ :

ಲಿಂ. ಶ್ರೀ ಸದಾಶಿವಶಾಸ್ತ್ರಿಗಳು, ಹುಕ್ಕೇರಿ

೧೯೬೮

ಶ್ರೀ ಕಲ್ಮಠ ಗುರುಸಿದ್ಧೇಶ್ವರ ಗ್ರಂಥಮಾಲೆ: ೧

ಶ್ರೀ ಶಿವಯೋಗಿ

# ಮಡಿವಾಳೇಶ್ವರ ಪುರಾಣ

ಪ್ರಕಾಶಕರು :

ಶ್ರೀ ನಿ. ಪ್ರ. ಸ್ವ. ಗುರುಸಿದ್ಧಮಹಾಸ್ವಾಮಿಗಳವರು

ಶ್ರೀ ಸಂಸ್ಥಾನ ಕಲ್ಮಠ,

ಚೆನ್ನಮ್ಮನ ಕಿತ್ತೂರು



ಪುರಾಣಕವಿ :

ಲಿಂ. ಶ್ರೀ ಸದಾಶಿವಶಾಸ್ತ್ರಿಗಳು, ಹುಕ್ಕೇರಿ

೧೯೬೮

ಪ್ರಕಾಶಕರು :

ಶ್ರೀ ನಿ. ಪ್ರ. ಸ್ವ. ಗುರುಸಿದ್ಧ ಮಹಾಸ್ವಾಮಿಗಳು
ಶ್ರೀ ಸಂಸ್ಥಾನ ಕಲ್ಮಠ, ಚೆನ್ನಮ್ಮನ ಕಿತ್ತೂರು

ಪ್ರಥಮ ಮುದ್ರಣ

೨೦೦೦ ಪ್ರತಿಗಳು



**ಬೆಲೆ: ೬-೦೦**

೧೯೬೮

ಭಾವಚಿತ್ರಗಳ ಮುದ್ರಕರು :

ಶ್ರೀ ರವೀಂದ್ರ ಮುದ್ರಣಾಲಯ
ಮಾಳಮಡ್ಡಿ, ಧಾರವಾಡ

ಮುದ್ರಕರು :

ಶ್ರೀ ಜಗದ್ಗುರು ಜಯವಿಭವ
ಶ್ರೀ ಮುರುಘರಾಜೇಂದ್ರ ಮುದ್ರಣಾಲಯ, ಶ್ರೀ ಮುರುಘಾಮಠ
ಮೃತ್ಯುಂಜಯನಗರ, ಧಾರವಾಡ ೬

ಕಿತ್ತೂರು ಸಂಸ್ಥಾನದ

ರಾಜಗುರುಗಳೂ ಪರಮ ಶಿವಯೋಗಿಗಳೂ

ಜ್ಞಾನದಾಸೋಹಿಗಳೂ ಭಕ್ತವೃಂದದ ಪರಮಪೂಜ್ಯರೂ ಆಗಿದ್ದ

ಕರ್ತೃ ಶ್ರೀ ನಿ. ಪ್ರ. ಸ್ವ. ಗುರುಸಿದ್ಧಸ್ವಾಮಿಗಳು

ಶ್ರೀ ಸಂಸ್ಥಾನ ಕಲ್ಮಠ, ಕಿತ್ತೂರ ಇವರ

ದಿವ್ಯ ಚರಣಕಮಲಗಳಿಗೆ

ಈ ಪುರಾಣಕೃತಿ ಎಡೆ.



ಶ್ರೀಮನ್ನಿರಂಜನ ಪ್ರಣವಸ್ವರೂಪಿ
ಶ್ರೀ ಗುರುಸಿದ್ಧ ಮಹಾಸ್ವಾಮಿಗಳು
ಕಲ್ಮಠ ಸಂಸ್ಥಾನ, ಕಿತ್ತೂರು.



ಶ್ರೀಮನ್ನಿರಂಜನ ಪ್ರಣವಸ್ವರೂಪಿ

**ಶ್ರೀ ಗುರುಸಿದ್ಧಮಹಾಸ್ವಾಮಿಗಳು**

ಕಲ್ಮಠ ಸಂಸ್ಥಾನ, ಕಿತ್ತೂರು.

# ಹಾರೈಕೆ

ಭಾರತ ಸ್ವಾತಂತ್ರ್ಯಹೋರಾಟದ ಬೆಳ್ಳಿಚುಕ್ಕೆ ಎಂದು ಪ್ರಸಿದ್ಧಳಾಗಿರುವ ವೀರಶಿರೋಮಣಿ ಕಿತ್ತೂರ ಚೆನ್ನಮ್ಮನ ಹೆಸರು ಇಂದು ಮನೆಮನೆಗಳಲ್ಲಿ ಸ್ಮರಣೀಯವಾಗಿದೆ. ಕಿತ್ತೂರು ಸಂಸ್ಥಾನ ಮೊದಲಿನಿಂದಲೂ ವೀರತನಕ್ಕೆ, ಪ್ರಜಾಕ್ಷೇಮಕ್ಕೆ ಪ್ರಸಿದ್ಧವಾಗಿತ್ತು. ಈ ಮನೆತನದ ಸರ್ವಕಾರ್ಯಗಳ ಪ್ರೇರಕ ಶಕ್ತಿಗಳಾಗಿದ್ದುದು ಅವರ ರಾಜಗುರು ಪರಂಪರೆ. ಶ್ರೀ ಮಡಿವಾಳ ಶಿವಯೋಗಿಗಳು, ಶ್ರೀ ಗುರುಸಿದ್ಧ ಶಿವಯೋಗಿಗಳು, ಶ್ರೀ ಕಲ್ಮಠ ಪ್ರಭುದೇಸಿಕರು, ಶ್ರೀ ಇಮ್ಮಡಿ ಮಡಿವಾಳ ಶಿವಯೋಗಿಗಳು (ಈ ಪುರಾಣ ಪುರುಷ), ಶ್ರೀ ಇಮ್ಮಡಿ ಗುರುಸಿದ್ಧ ಮಹಾಸ್ವಾಮಿಗಳು ಮುಂತಾದ ಮಹಾಮಹಿಮರಿಂದ ಬೆಳೆದುಬಂದು, ಇಂದಿನ ಶ್ರೀ ಸಂಸ್ಥಾನ ಕಲ್ಮಠದ ಅಧಿಕಾರಿಗಳಾಗಿರುವ ಶ್ರೀ ಮುಮ್ಮಡಿ ಗುರುಸಿದ್ಧ ಮಹಾಸ್ವಾಮಿಗಳವರ ನೇತೃತ್ವದಲ್ಲಿ ಶ್ರೀಮಠದ ಸರ್ವಕಾರ್ಯಭಾರಗಳು ಮುಂದುವರಿಯುತ್ತಿವೆ. ಕಿತ್ತೂರು ರಾಜಸತ್ತೆ ಅಳಿದುಹೋದರೂ ಕಿತ್ತೂರು ನಾಡಿನ ಭಕ್ತಮಹನೀಯರೆಲ್ಲರ ಸೇವೆ-ತ್ಯಾಗಗಳಿಂದ ಈ ಸಂಸ್ಥಾನಮಠ ಅನೂಚೀನವಾಗಿ ಬೆಳೆದು ಬರುತ್ತಿರುವುದು ಹೆಮ್ಮೆಯ ವಿಷಯ. ಪ್ರಕೃತ ಶ್ರೀ ಗುರುಸಿದ್ಧ ಸ್ವಾಮಿಗಳ ಉದಾರಾಶ್ರಯದಲ್ಲಿ ಕಿತ್ತೂರಿನ ಶ್ರೀ ಗುರುಸಿದ್ಧೇಶ್ವರ ಹೈಯರ ಸೆಕೆಂಡರಿ ಶಾಲೆ, ಶ್ರೀ ಮಡಿವಾಳೇಶ್ವರ ಉಚಿತ ಪ್ರಸಾದನಿಲಯ, ಮ ಹಿ ಳಾ ಮಂ ಡ ಲ ಹಾಗು ಶಿಶುವಿಹಾರಗಳು ಸ್ಥಾಪಿತವಾಗಿ ಮುನ್ನಡೆಯುತ್ತ ಬಂದಿವೆ. ಈಚೆಗೆ ಕಲ್ಮಠದ ಜೀರ್ಣೋದ್ಧಾರ ಕಾರ್ಯವೂ ನಡೆದು, ಗೋಪುರ ನಿರ್ಮಾಣವಾಗಿ, ಹರಗುರು ಚರಮೂರ್ತಿಗಳ ಲಿಂಗಪೂಜೆ ಹಾಗು ಪ್ರಸಾದದ ವ್ಯವಸ್ಥೆ ಮತ್ತು ಭಕ್ತಸಮೂಹಕ್ಕೆ ನಿತ್ಯ ದಾಸೋಹ ಕಾರ್ಯಗಳು ಶ್ರೀ ಮಡಿವಾಳೇಶ್ವರರ ಕೃಪೆಯಿಂದ ಸಾಗುತ್ತ ಬಂದಿವೆ. ಇಷ್ಟಲ್ಲದೆ ಶ್ರೀ ಇಮ್ಮಡಿ ಗುರುಸಿದ್ಧ ಮಹಾಸ್ವಾಮಿಗಳವರ ಪುಣ್ಯತಿಥಿ ಹಾಗು ಶ್ರಾವಣಮಾಸದ ಉತ್ಸವಗಳಲ್ಲಿ ಪುರಾಣ-ಪ್ರವಚನ-ಸಂಗೀತ ಮುಂತಾದ ಸಾಂಸ್ಕೃತಿಕ ಕಾರ್ಯಕ್ರಮಗಳು ಅವ್ಯಾಹತವಾಗಿ ನಡೆಯುತ್ತ ಬಂದಿವೆ. ಭಕ್ತಮಹನೀಯರ ಉದಾರ ದಾನ-ದೇಣಿಗೆಗಳಿಂದ ಈ ಎಲ್ಲ ಕಾರ್ಯಗಳು ಸುಗಮವಾಗಿ ನಡೆಯುತ್ತಿರುವುದು ಸಂತೋಷದ ಸಂಗತಿಯಾಗಿದೆ. ಮುಖ್ಯವಾಗಿ ಪುಣ್ಯಾರಣ್ಯದ ಮಹಾತಪಸ್ವಿಗಳೂ ಶ್ರೀ ಮುರುಗೋಡ ಮಠಾಧ್ಯಕ್ಷರೂ ಆದ ಶ್ರೀ ನಿ. ಪ್ರ. ಮಹಾಂತ ಶಿವಯೋಗಿಗಳ ಮತ್ತು ಧಾರವಾಡದ ಲಿಂ. ಮೃತ್ಯುಂಜಯ ಮಹಾಸ್ವಾಮಿಗಳ ಮತ್ತು ಅವರ ಕರಸಂಜಾತರೂ ಪ್ರಕೃತ ಶ್ರೀ ಮುರುಘಾಮಠಾಧ್ಯಕ್ಷರೂ ಆಗಿರುವ ಶ್ರೀ ನಿ. ಪ್ರ. ಸ್ವ. ಮಹಾಂತ ಸ್ವಾಮಿಗಳು ಮುಂತಾದ ಹರ-ಗುರು-ಚರಮೂರ್ತಿಗಳ ಕೃಪಾಶೀರ್ವಾದ

ದಿಂದ ಶ್ರೀ ಸಂಸ್ಥಾನ ಕಲ್ಮಠದ ಎಲ್ಲ ಕಾರ್ಯಭಾರಗಳು ಸುಸೂತ್ರವಾಗಿ ನೆರವೇರುತ್ತಿರು ವುದು ಅಭಿಮಾನದ ಸಂಗತಿಯಾಗಿದೆ.

ಭಕ್ತಜನರಲ್ಲಿ ಧರ್ಮಭಾವನೆಯನ್ನು ಬಿತ್ತಿ, ಸಾಂಸ್ಕೃತಿಕ ಅಭಿರುಚಿಯನ್ನು ಬೆಳೆಯಿಸಿ, ಅವರು ನೀತಿ-ಭಕ್ತಿಪರರಾಗುವಂತೆ ಮಾಡುವುದು ಮಠಮಾನ್ಯಗಳ ಹಾಗು ಗುರು-ಸ್ವಾಮಿಗಳ ಆದ್ಯಕರ್ತವ್ಯವೆಂದು ನಂಬಿದ್ದೇವೆ. ಕಿತ್ತೂರಿನ ರಾಜ-ಗುರು ಪರಂಪರೆಯಲ್ಲಿ ಅತ್ಯಂತ ಮಹಿಮಾನ್ವಿತರೂ ಅಸಮಾನ ಪವಾಡಪುರುಷರೂ ಜನಸಾಮಾನ್ಯರ ಪರಮಪೂಜ್ಯರೂ ಆಗಿ ಮೆರೆಯುತ್ತಿರುವ ಶ್ರೀ ಮಡಿವಾಳ ಶಿವ-ಯೋಗಿಗಳ ಪುಣ್ಯ ಚರಿತೆಯು ಇಡಿಯಾಗಿ ಒಂದು ಕಡೆ ದೊರೆಯುತ್ತಿರಲಿಲ್ಲ. ಜನರಲ್ಲಿ ಚದುರಿಹೋಗಿದ್ದ ಅವರ ಪವಾಡ ಮಹಿಮೆಗಳೂ ಸಕ್ರಮವಾಗಿ ದೊರೆಯುತ್ತಿರಲಿಲ್ಲ. ಅಲ್ಲದೆ ಶ್ರೀ ಮಡಿವಾಳೇಶ್ವರರ ಅಧಿಕೃತವಾದ ಚಾರಿತ್ರ್ಯಗ್ರಂಥವಿಲ್ಲದ್ದರಿಂದ ಭಾವುಕ ರಾದ ಭಕ್ತರು ಅನೇಕ ಕಥೆಗಳನ್ನು ಕಟ್ಟಿ ಮೆರೆಯಿಸಿದ್ದಾರೆ. ಆದರೆ ಆ ಮಹಾ ಶಿವಯೋಗಿಗಳ ಮಹಿಮೆಗೆ ಕುಂದುಂಟಾಗದಂತೆ ಅವರ ಜೀವನದ ಸಾಧನೆಗಳನ್ನೂ ಭಕ್ತರಿಗೆ ನೀಡಿದ ಶಾಪ-ಕ್ಷಮೆಗಳನ್ನೂ ಅವರ ಮಹಿಮೆ ಪವಾಡಗಳನ್ನೂ ಕಂಡುಂಡವ ರಿಂದ ಕೇಳಿ ತಿಳಿದು ಶ್ರೀ ಸದಾಶಿವ ಶಾಸ್ತ್ರಿಗಳು ಹುಕ್ಕೇರಿಯವರು ಭಕ್ತಿಯಿಂದ ರಚಿಸಿರುವ ಈ ಪುರಾಣವನ್ನು ಮುದ್ರಿಸಿ, ಪ್ರಕಟಿಸಿ,ಭಕ್ತಜನಾನಂದವನ್ನುಂಟುಮಾಡ ಬೇಕೆಂಬುದು ನಮ್ಮ ಅಭಿಲಾಷೆ. ಶ್ರೀ ಮಡಿವಾಳೇಶ್ವರರ ಹೆಸರಿನಲ್ಲಿ ವಿವಿಧ ಮಠಗಳಲ್ಲಿ ನಡೆಯುವ ಉತ್ಸವ, ಜಾತ್ರೆಗಳಲ್ಲಿ ಈ ಪುರಾಣಪ್ರವಚನದಿಂದ ಭಕ್ತಸಮೂಹಕ್ಕೆಲ್ಲ ಅತ್ಯಂತ ಸಂತೋಷವಾಗುವುದೆಂದು ನಂಬಿದ್ದೇವೆ

ಪ್ರಕೃತ ಶ್ರೀ ಮಡಿವಾಳೇಶ್ವರ ಪುರಾಣವನ್ನು ಬರೆದುಕೊಟ್ಟ ಲಿಂ. ಶ್ರೀ ಸದಾಶಿವಶಾಸ್ತ್ರಿಗಳಿಗೂ ಈ ಪುಣ್ಯಕೃತಿಗೆ "ಪುರಾಣ ಪ್ರವೇಶ"ವನ್ನು ಬರೆದುಕೊಟ್ಟ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಪ್ರಾಧ್ಯಾಪಕರಾಗಿರುವ ಪ್ರೊ. ಎಸ್. ಎಂ. ವೃಷಭೇಂದ್ರಸ್ವಾಮಿ ಎಂ. ಎ. ಅವರಿಗೂ ; "ಕಥಾಸಾರ"ವನ್ನು ಬರೆದುಕೊಟ್ಟ ಶ್ರೀ ಕಲ್ಯಾಣಪ್ಪ ಬ್ಯಾಳಿ ಹುನಗುಂದ ಅವರಿಗೂ ಶ್ರೀ ಮಡಿವಾಳೇಶ್ವರರ ಕೃಪಾಶೀರ್ವಾದ ದೊರೆಯಲೆಂದು ಹಾರೈಸುತ್ತೇವೆ.

ಈ ಗ್ರಂಥವನ್ನು ಪರಿಶ್ರಮವಹಿಸಿ ಮುದ್ರಿಸಿದ ಧಾರವಾಡ ಮುರುಘಾಮಠದ ಶ್ರೀ ಮುರುಘರಾಜೇಂದ್ರ ಮುದ್ರಣಾಲಯದವರಿಗೂ ಭಾವಚಿತ್ರಗಳನ್ನು ಅಂದವಾಗಿ ಮುದ್ರಿಸಿಕೊಟ್ಟ ಧಾರವಾಡ ಶ್ರೀ ರವೀಂದ್ರ ಮುದ್ರಣಾಲಯದವರಿಗೂ ಶ್ರೀ ಮಡಿ ವಾಳೇಶ್ವರರು ಸನ್ಮಂಗಲವನ್ನು ಉಂಟುಮಾಡಲೆಂದು ಹಾರೈಸುತ್ತೇವೆ.

ಶುಭಂ...ಮಂಗಳಂ

—**ಪ್ರಕಾಶಕರು**

# ಪುರಾಣ ಪ್ರವೇಶ

ಪುರಾಣದ ನೆಲಗಟ್ಟು ಭಕ್ತಿ; ಪವಾಡ ಅದರ ಮೇಲ್ಮಟ್ಟು. ಮಹಾಪುರುಷರ ಜೀವನ-ಸಾಧನೆ-ಸಿದ್ಧಿಗಳನ್ನು ಭಕ್ತಿಯಿಂದ ಸ್ಮರಿಸುವ ಹಾಗೂ ಅವರ ಕೃಪೆಯನ್ನು ಹಾರೈಸುವ ಭಕ್ತ ಸಮೂಹ ಈ ಪುರಾಣ ಕಾರಣರು ಹಾಗೂ ಪ್ರೇರಣರು. ದಿವ್ಯ ಶಕ್ತಿಯನ್ನು ಪಡೆದ ಮಹಾತ್ಮರ ಚರಿತೆ ಕಾಲಾನುಕ್ರಮದಲ್ಲಿ ತನ್ನ ಲೌಕಿಕ ಭೂಮಿಕೆಯನ್ನು ದಾಟಿ, ಅಲೌಕಿಕ ಲೋಕದಲ್ಲಿಯೇ ವಿಹರಿಸುವಂತಾಗುವುದು ಇಂಥ ವಿನೀತ ಹಾಗೂ ವಿಲೋಲಿತ ಭಕ್ತರ ಭಾವನೆಗಳಿಂದ. ಪುಣ್ಯಪುರುಷರ ಬದುಕೆಲ್ಲ ಪಾವನವಾಗಿ, ಕೃತಿಯೆಲ್ಲ ಪವಾಡವಾಗಿ, ನುಡಿಯೆಲ್ಲ ಪರುಷವಾಗಿ, ನಾಮಸ್ಮರಣೆಯೆಲ್ಲ ಮಂತ್ರವಾಗಿ ಮಾರ್ಪಟ್ಟು, ಅನುಯಾಯಿಗಳಿಗೆ ಅಭಯದಾಯಕವಾಗುತ್ತದೆ. ಅಂಥ ಶರಣನ ಸ್ಮಾರಕವಾಗಿ ಗದ್ದುಗೆಗಳೂ, ಪೂಜೆ-ಉತ್ಸವಗಳೂ, ಜನತೆಯ ಭಕ್ತಿದ್ಯೋತಕವಾಗಿ ಭಜನೆ-ಕೀರ್ತನೆ-ಪುರಾಣ-ಪ್ರವಚನಗಳೂ ನಿರಂತರವಾಗಿ ಸಾಗುತ್ತವೆ. ಆಗ ಮಾನವನಾಗಿ ಬಾಳಿ-ಬೆಳಗಿದ ಪುಣ್ಯಪುರುಷ, ಅತಿಮಾನವನಾಗಿ ಪೂಜೆಗೊಳ್ಳುತ್ತಾನೆ; ವರದಾಯಕನೆಂದು ಪ್ರಾರ್ಥಿತನಾಗುತ್ತಾನೆ. ಕೊನೆಗೆ, ಆತ ದೇವನೇ ಆಗುತ್ತಾನೆ! ಆತನ ಮಹಿಮೆಗಳ ಕಥನವಾಗಿ 'ಪುರಾಣ' ಮೂಡುತ್ತದೆ. ಅದು ಭಕ್ತಿಯ ಬಿತ್ತು; ಪವಾಡಗಳ ಬೆಳೆ; ನೀತಿಯ ತೆನೆ; ಮುಕ್ತಿಯ ಫಲ!

ಭರತಖಂಡ ಧರ್ಮವೀರರ ಹಾಗೂ ಧರ್ಮಭೀರುಗಳ ನಾಡು. ಧರ್ಮ ಸ್ಥಾಪಕರು-ವ್ಯಾಪಕರು, ಆತ್ಮಜ್ಞಾನದ್ರಷ್ಟರು—ದಾತರು, ನೀತಿ ವಿಧಾತರು-ವಿಧೇಯರು ಭಾರತ ಸಂಸ್ಕೃತಿಯ ಬೆನ್ನೆಲುಬಾಗಿದ್ದಾರೆ. ಅಂತೆಯೇ ಧರ್ಮಪರಾಯಣರು, ಆತ್ಮಜ್ಞಾನ ಸಾಧಕರು, ನೀತಿನಯಾನ್ವಿತರು ಈ ನಾಡಿನ ಸ್ನಾಯು-ಶಕ್ತಿಗಳಾಗಿದ್ದಾರೆ. ಭಾರತಖಂಡದಲ್ಲಿ ಋಷಿ-ಮುನಿಗಳ, ಸಾಧು-ಸಂತರ ಪರಂಪರೆ ಅವ್ಯಾಹತವಾಗಿ ನಡೆದು ಬಂದಿದೆ. ಅವರ ಸಾಧನೆ-ಬೋಧನೆಗಳು ಜನತೆಯ ಮಾರ್ಗದರ್ಶಕ ದಾರಿದೀಪಗಳಾಗಿವೆ. ಭರತಖಂಡದ ಗರ್ಭಗುಡಿಯಂತಿರುವ ದಕ್ಷಿಣ ಭಾರತ ಒಂದು ಅಪೂರ್ವ ಧರ್ಮಕ್ಷೇತ್ರ. ಋಷಿಗಳು, 'ಭಿಕ್ಕು'ಗಳು, ತೀರ್ಥಂಕರರು, ಆಳ್ವಾರುಗಳು, ನಾಯನಾರುಗಳು, ಶರಣರು, ದಾಸರು, ಅನುಭಾವಿಗಳು, ಆರೂಢರು, ಫಕೀರರು, ಪಾದ್ರಿಗಳು ಈ ಧರ್ಮಕ್ಷೇತ್ರದ ಕೃಷೀವಲರು. ಇವರೆಲ್ಲರ ಜೀವನ-ಸಾಧನೆ-ಸಿದ್ಧಿಗಳು ಜನತೆಯ 'ಜೀವನದಿ'ಯಲ್ಲಿ ಒಡಬೆರೆತು, ಅವರ ಬದುಕಿನ ಆದರ್ಶಗಳನ್ನು ರೂಪಿಸಿವೆ. ಅಷ್ಟೇ ಅಲ್ಲದೆ, ಇವರೆಲ್ಲರೂ ಚಿರಂತನಾರಾಧ್ಯರಾಗಿದ್ದಾರೆ. ಈ ಮಹಾಪುರುಷರನ್ನು ಕುರಿತ 'ಪ್ರಬಂಧ', ಹಾಡು, ಕೀರ್ತನೆ, ಪದ, ಕಾವ್ಯ, ಪುರಾಣಗಳು ಈ ನಾಡಿನ ಜನ

ಮನೋಮಂದಿರದ ನಂದಾದೀಪಗಳಾಗಿವೆ. ಅವುಗಳ ದಿವ್ಯ ಪ್ರಕಾಶದಲ್ಲಿ ಜನತೆಯ ಜೀವನ ಮುನ್ನಡೆದಿದೆ.

ಕನ್ನಡ ನಾಡಿನಲ್ಲಿ ಮನೆಮನೆಗೊಬ್ಬ ಶರಣ, ಓಣಿ, ಓಣಿಗೊಂದು ದೇವಾಲಯ, ಊರೂರಿಗೊಂದು ಮಠ, ಮಠಮಠಕ್ಕೊಬ್ಬ 'ಗುರು', ಅಲ್ಲೊಂದು 'ಪುರಾಣ'! ಅಲ್ಲಿ ಪುರಾಣಿಕರು, ಪಂಡಿತರು, ಪಾಠಕರು, ಕವಿಗಳು! ಹಬ್ಬ-ಹರಿದಿನಗಳಲ್ಲಿ, ಪುಣ್ಯ-ತಿಥಿ ಜಾತ್ರೆಗಳಲ್ಲಿ ದೇವಾಲಯಗಳಲ್ಲಿ ನೆರೆದು ಪುರಾಣ-ಪುಣ್ಯಕಥೆಗಳನ್ನು ಕೇಳುವುದರಲ್ಲಿ ಮಗ್ನರಾಗಿರುವ ಭಕ್ತ-ಭಕ್ತೆಯರ ವೃಂದ!! 'ಪುರಾಣ ಶ್ರವಣ' ಅತ್ಯಂತ ಪುಣ್ಯಪ್ರದ ವೆಂದು ನಂಬಿರುವ ಜನಸಮುದಾಯ. ಪುರಾಣಪುರುಷನ ಮಹಿಮೆಯನ್ನು ಕೇಳಿ, ತಲೆದೂಗಿ, ಆತನ ಕೃಪೆಯನ್ನು ಹಾರೈಸಿ, ಆತನ ಜೀವನದ ಘಟನೆಗಳನ್ನು ಬೆಳೆಯಿಸಿ, ಸೇರಿಸಿ, ಕಥೆ-ಸನ್ನಿವೇಶಗಳನ್ನು ಹೊಸತಾಗಿ ಪೋಣಿಸಿ ಆ ಪುಣ್ಯಾತ್ಮನ ನೆನಪು ಹೃದಯಗಳಲ್ಲಿ ಸದಾ ಹಸುರಾಗಿರುವಂತೆ ಮಾಡುವ ಭಾವುಕವೃಂದ ಈ 'ಪುರಾಣ'ಗಳನ್ನು ಮುನ್ನಡೆಯಿಸಿದ್ದಾರೆ. ಪುರಾಣಗಳ ವೈಪುಲ್ಯಕ್ಕೆ ಹಾಗೂ ವೈವಿಧ್ಯತೆಗೆ ಜನತೆಯ ಭಕ್ತಿಯೇ ಸ್ಥಾಯಿ. ಕನ್ನಡ ನಾಡಿನಲ್ಲಿ ಈ ಭಕ್ತಿಯ ಬೆಳೆ ಹುಲುಸಾಗಿರುವುದರಿಂದ, ಪುಣ್ಯಚೇತನಗಳ ಅವತಾರ ನಿರಂತರ ವಾಗಿರುವುದರಿಂದ, ಕನ್ನಡ ಸಾಹಿತ್ಯದಲ್ಲಿ ಈ ಪುರಾಣಗಳ ಪರಂಪರೆಯೂ ಅಕುಂಠಿತ. ತೀರ್ಥಂಕರ ಪುರಾಣಗಳು, ಬಸವಾದಿಪ್ರಮಥರ ಪುರಾಣಗಳು, ತೋಂಟದ ಸಿದ್ಧ-ಲಿಂಗೇಶ್ವರಾದಿಯಾದ ವಿರತಿಶ್ರೇಷ್ಠರ ಪುರಾಣಗಳು, ಕೊಟ್ಟೂರು ಬಸವೇಶ್ವರ, ಮುರುಳಸಿದ್ಧೇಶ್ವರ, ಶರಣಬಸವೇಶ್ವರ ಮುಂತಾದ ಗುರುಮಹಾಂತರ ಪುರಾಣಗಳು ಪ್ರಸಿದ್ಧವಾಗಿವೆ. ಇತ್ತೀಚೆಗೆ ಫಲಹಾರೇಶ್ವರ ಪುರಾಣ, ಸಾವಳಗಿ ಸಿದ್ಧರಾಮೇಶ್ವರ ಪುರಾಣ, ಅಥಣಿ ಮುರಘೇಂದ್ರ ಶಿವಯೋಗೀಶ್ವರ ಪುರಾಣ, ಜಯದೇವಲೀಲೆ ಮತ್ತು ಮೃತ್ಯುಂಜಯ ಪುರಾಣ ಮುಂತಾದ ಅನೇಕ ಆಧುನಿಕ ಮಹಿಮರ ಪುರಾಣ ಗಳೂ ಪ್ರಕಟವಾಗಿವೆ. ಈ ಪುರಾಣ ಪರಂಪರೆಯಲ್ಲಿ ಅತ್ಯಂತ ಮಹಿಮಾನ್ವಿ-ತರೆಂದೂ ಪವಾಡಪುರುಷರೆಂದೂ ಜನಮನದ ಆರಾಧ್ಯಮೂರ್ತಿಯೆಂದೂ ಜನಜನಿತ ಕೀರ್ತಿಶಾಲಿಗಳಾದ ಶ್ರೀ (ಗರಗದ) ಮಡಿವಾಳೇಶ್ವರ ಪುರಾಣವು ಪ್ರಕಟವಾಗುತ್ತಿರು ವುದು ಹರ್ಷದ ಸಂಗತಿಯಾಗಿದೆ. ಕಿತ್ತೂರಿನ ರಾಜಗುರು ಪರಂಪರೆಯಲ್ಲಿ ಒಬ್ಬ ರಾಗಿದ್ದು, ಅನೇಕ ಪವಾಡಗಳನ್ನು ಮೆರೆದು, ನೇಪಾಳ, ಹೈದರಾಬಾದು, ಮೈಸೂರ ರಾಜರುಗಳಿಂದ ಪೂಜಿತರಾದ ಶ್ರೀ ಮಡಿವಾಳೇಶ್ವರರ ಸಮಗ್ರವಾದ ಜೀವನ-ಪವಾಡ ಗಳನ್ನೊಳಗೊಂಡ ಈ ಪುರಾಣ ಕಿತ್ತೂರು ಸಂಸ್ಥಾನ ಕಲ್ಮಠದಿಂದ ಪ್ರಕಟವಾಗುತ್ತಿರು ವುದು ಇನ್ನೂ ಹೆಚ್ಚಿನ ಸಂತೋಷದ ಸಂಗತಿಯಾಗಿದೆ. ಈ ಪುರಾಣವನ್ನು ರಚಿಸಿದ ಲಿಂ. ಶ್ರೀ ಸದಾಶಿವ ಶಾಸ್ತ್ರಿಗಳು ಹುಕ್ಕೇರಿ ಅವರಿಗೆ ಕನ್ನಡ ನಾಡು ಋಣಿಯಾಗಿದೆ.

## ಶ್ರೀ ಮಡಿವಾಳೇಶ್ವರರ ದಿವ್ಯಜೀವನ

ಕಿತ್ತೂರು ಸಂಸ್ಥಾನದ ರಾಜಗುರುಗಳಾಗಿದ್ದ ಶಿವಯೋಗಿ ಮಡಿವಾಳೇಶ್ವರರ ಲೌಕಿಕ ಜೀವನದ ಘಟನೆಗಳು ಅವರ ಮುಂದಿನ ಜೀವನದ ಭವ್ಯ ಬೆಳಕಿನಲ್ಲಿ ಮರೆ ಮಾಜಿಹೋಗಿವೆ. ಕಿತ್ತೂರ ಕಲ್ಮಠ ಸಂಸ್ಥಾನದ ರಾಜಗುರು ಪರಂಪರೆಯ ಇತಿಹಾಸವೂ ನಿರ್ದಿಷ್ಟವಾಗಿ ತಿಳಿದು ಬಂದಿಲ್ಲ. ಈಚೆಗೆ ರಾಜಕೀಯ ಪ್ರಾಮುಖ್ಯತೆಯನ್ನು ಗಳಿಸಿರುವ ಕಿತ್ತೂರಿನ ರಾಜಮನೆತನದ ಇತಿಹಾಸ ಬೆಳಕಿಗೆ ಬಂದಿರುವುದರಿಂದ, ಆ ಬಗ್ಗೆ ಇನ್ನೂ ಹೆಚ್ಚಿನ ಅಂಶಗಳು ಬೆಳಕು ಕಾಣುವ ಸೂಚನೆಗಳಿರುವುದರಿಂದ, ಈ ರಾಜಗುರು ಪರಂಪರೆಯ ಇತಿಹಾಸವನ್ನು ಸಂಶೋಧನೆ ಮಾಡಬೇಕಾಗಿದೆ. ಕಿತ್ತೂರು ಸಂಸ್ಥಾನದ ಪ್ರಸಿದ್ಧ ದೊರೆಯಾದ ಮಲ್ಲಸರ್ಜನ ಕಾಲದಲ್ಲಿ ಶ್ರೀ ಮಡಿವಳ ಶಿವಯೋಗಿಗಳು ಪ್ರಸಿದ್ಧರಾಗಿದ್ದರು ಅವರಿಗೆ ಒಂದು ಅನಾಥ ಶಿಶು ದೊರೆಯಿತು. ಶ್ರೀ ಗುರುಗಳು ಮಲ್ಲಸರ್ಜನ ಹಿರಿಯ ರಾಣಿ ರುದ್ರಮ್ಮನಿಗೆ ಆ ಮಗುವನ್ನೊಪ್ಪಿಸಿ-ದರು. ಈ ಮಗುವಿಗೆ 'ಮಡಿವಾಳ'ನೆಂದು ಹೆಸರಿಟ್ಟರು. ಈತನೇ ಈ ಪುರಾಣದ ಕಥಾನಾಯಕ. (ಈತನನ್ನು ಇಮ್ಮಡಿ ಮಡಿವಾಳೇಶ್ವರರೆಂದು ಇನ್ನು ಮುಂದೆ ಕರೆಯಲಾಗುವದು ) 'ದಿವ್ಯಪಿಂಡ'ವಾದುದರಿಂದ ಬಾಲ್ಯದಲ್ಲಿಯೇ ಅನೇಕ ಲೀಲೆ ಗಳನ್ನು ತೋರಿಸಿತು. ಆ ವೇಳೆಗೆ (ಪ್ರಥಮ) ಮಡಿವಾಳೇಶ್ವರರು ಲಿಂಗೈಕ್ಯ ರಾದರು. ಆಗ ಶ್ರೀ ಪ್ರಭುಸ್ವಾಮಿಗಳು ಸಂಸ್ಥಾನ ಕಲ್ಮಠದ ಅಧಿಕಾರಿಗಳಾದರು. ಮಲ್ಲಸರ್ಜ ಹಾಗು ಪ್ರಭುಸ್ವಾಮಿಗಳು ಬಾಲಕ ಮಡಿವಾಳನ ಪೋಷಣೆ ಮಾಡಿದರು. ಶ್ರೀ ವೆಂಗಿ ಚನ್ನಬಸಪ್ಪಶಾಸ್ತ್ರಿ ಹಾಗು ಕೊಳ್ಳಿ ರಂಗಾಚಾರ್ಯರೆಂಬ ಗುರು ಗಳಿಂದ ಶಿಕ್ಷಣ ಕೊಡಿಸಿದರು. ಆದರೂ ಬಾಲಕ ಮಡಿವಾಳ ಯಾರ ಕಟ್ಟಿಗೂ ನಿಲುಕದವನಾಗಿ ಬೆಳೆದ. ಅಲ್ಲದೆ ಯುವರಾಜನಾದ ಶಿವಲಿಂಗ ರುದ್ರಸರ್ಜ (ಬಾಪೂ ಸಾಹೇಬ) ನಿಗೂ ಮರಿಮಡಿವಾಳರಿಗೂ ವೈಷಮ್ಯ ಬೆಳೆಯಿತು. ಬಾಪೂ ಸಾಹೇಬ ಇಮ್ಮಡಿ ಮಡಿವಾಳ ಶಿವಯೋಗಿಗಳಿಗೆ ಅಪಮಾನ ಮಾಡಿದ. ಅವರು ಕೋಪದಿಂದ ನಿನ್ನ ಕಿತ್ತೂರು ನಾಶವಾಗಲೆಂದು ಶಾಪವಿತ್ತು, ದೇಶಾಂತರ ಹೊರಟುಹೋದರು. ಮುಂದೆ ಇಂಗ್ಲಿಷರ ಮುತ್ತಿಗೆಯಿಂದ ಕಿತ್ತೂರು ನಾಶವಾಯಿತು.

ಈ ವೇಳೆಗೆ ಇಮ್ಮಡಿ ಮಡಿವಾಳೇಶ್ವರರಿಗೆ ಯೌವನ ಪ್ರಾಪ್ತಿಯಾಗಿತ್ತು. ಅವರು ಕಿತ್ತೂರಿನಲ್ಲಿರದೆ, ಉಳವಿ, ಕಾಶಿಗಳತ್ತ ಹೊರಟು ಹೋದರು. ಕಾಶಿಯಲ್ಲಿ ಮಹಾಪಂಡಿತರೆಂದು ಮಾನ್ಯತೆ ಪಡೆದರು. ಅನಂತರ ನೇಪಾಳಕ್ಕೆ ಹೋಗಿ, ಅಲ್ಲಿನ ದೊರೆಯಿಂದ ಸತ್ಕಾರಪಡೆದರು. ಆತನು ಕೊಟ್ಟ ಬಂಗಾರದ ಸಿಂಹಾಸನವನ್ನು ಚೂರುಚೂರು ಮಾಡಿಸಿ, ಬಡಬಗ್ಗರಿಗೆ ಹಂಚಿದರು. ಅಲ್ಲಿಂದ ಕಾಶ್ಮೀರ, ಕಾಬೂಲ,

ಘಜನಿಗಳನ್ನು ದಾಟಿ ಮಕ್ಕಾ ಪಟ್ಟಣವನ್ನೂ ಸಂಪರ್ಶಿಸಿದರಂತೆ! ಅಲ್ಲಿಂದ ಹಿಂತಿರುಗಿ ಬಂದು, ಹೈದರಾಬಾದಿನ ನವಾಬನಿಂದ ಮಾನಿತರಾಗಿ, ಅಲ್ಲಿಯೂ ಪವಾಡಗಳನ್ನು ಮೆರೆದರಂತೆ. ಅನಂತರ ಆಸೇತು ಹಿಮಾಚಲದ ಎಲ್ಲ ಪುಣ್ಯ ಕ್ಷೇತ್ರಗಳನ್ನು ಸಂದರ್ಶಿಸಿ, ಕೊನೆಗೆ ಸೊಗಲ ಕ್ಷೇತ್ರಕ್ಕೆ ಬಂದರಂತೆ! ಸೊಗಲದ ಸಿದ್ಧನಗವಿಯಲ್ಲಿ ಸಿದ್ಧಮಲ್ಲಾರ್ಯರೆಂಬ ಯೋಗಿಗಳೊಡನೆ ವಾಸಮಾಡುತ್ತಿದ್ದರು. ಹುಲಿಗಳನ್ನು ಪಳಗಿಸಿ, ಭಕ್ತರ ಬಾಧೆಗಳನ್ನು ಹೋಗಲಾಡಿಸಿ, ಶಿವಯೋಗಸ್ಥಿತಿಯಲ್ಲಿ ಉಳಿದರು ಶ್ರೀ ಮಡಿವಾಳೇಶ್ವರರು. ಅನಂತರ ಮುರುಗೋಡ, ಹೊಸೂರ, ತಡಕೋಡ, ನೇಗಿನಹಾಳ, ನಿಚ್ಚಣಿ, ದೇವಲೊಳ್ಳಿ ಮುಂತಾದ ಗ್ರಾಮಗಳಲ್ಲಿ ಸಂಚರಿಸಿ, ಅನೇಕ ಪವಾಡಗಳನ್ನು ಮೆರೆದು, ಕೊನೆಗೆ ಗರಗ ಗ್ರಾಮದಲ್ಲಿ ನೆಲಸಿದರು. ಭಕ್ತರು ಅವರಿಗಾಗಿ ಒಂದು ಮಠ ಕಟ್ಟಿಕೊಟ್ಟರು. ಅಲ್ಲಿ ನಿತ್ಯ ದಾಸೋಹ, ಭಜನೆ ನಡೆಯಿಸಿ ಭಕ್ತರ ಇಷ್ಟಾರ್ಥಸಿದ್ಧಿಯನ್ನಿತ್ತು, ಅನೇಕ ಪವಾಡಗಳನ್ನು ಮೆರೆದರು. ಶ್ರೀ ಮಡಿವಾಳಪ್ಪನವರನ್ನೂ, ಶ್ರೀ ನೀಲಕಂಠದೀಕ್ಷಿತರನ್ನೂ, ನವಿಲುಗುಂದದ ನಾಗಲಿಂಗಪ್ಪನವರನ್ನೂ, ಹೊಸಳ್ಳಿ ಬೂದಿಸ್ವಾಮಿಗಳನ್ನೂ, ಅಗಡಿಯ ಶೇಷಾಚಲ ಸ್ವಾಮಿಗಳನ್ನೂ ಸಂದರ್ಶಿಸಿ, ತತ್ವಾನುಸಂಧಾನದಲ್ಲಿದ್ದು, ಮಹಿಮೆಯನ್ನು ಮೆರೆದರಂತೆ. ಕೊನೆಕೊನೆಗೆ, ಶ್ರೀ ಮಡಿವಾಳಶಿವಯೋಗಿಗಳು ಆರೂಢಸ್ಥಿತಿಯಲ್ಲಿರುತ್ತಿದ್ದರಂತೆ ಸಾವಿರಾರು ಮಂದಿ ಭಕ್ತರೂ, ದೀಕ್ಷಿತರೂ, ಬಾವಾಗಳೂ ಅವರ ಶಿಷ್ಯರಾಗಿದ್ದರಂತೆ. ಅವರಿಗೆಲ್ಲ ಧರ್ಮಬೋಧನೆ ಮಾಡುತ್ತಿದ್ದು, ಅವರನ್ನು ಸನ್ಮಾರ್ಗಕ್ಕೆ ಹಚ್ಚಿದರೆಂದು ತಿಳಿದು ಬರುತ್ತದೆ. ಕೊನೆಗೆ ಶ್ರೀ ಮಡಿವಾಳೇಶ್ವರರು, ಗರಗದ ಭಕ್ತರಿಗೆ ಅಪ್ಪಣೆ ಮಾಡಿ, ಅಲ್ಲಿಯೇ ತಮ್ಮ ಸಮಾಧಿಯ ಏರ್ಪಾಟುಗಳನ್ನು ಮಾಡಿಸಿಕೊಂಡು, 'ಪದಿನೆಂಟು-ನೂರೆರಡು ಶಕದವಧಿಯುತ ಸಂವತ್ಸರದ ಮಾಘಮಾಸ ದುರುಧವಳೇತರದ ಪಕ್ಷದಾ ತದಿಗೆಯಲ್ಲಿ' ಶಿವಲಿಂಗದಲ್ಲಿ ಬಯಲಾದರು! ಶ್ರೀ ಮಡಿವಾಳೇಶ್ವರ ಸಮಾಧಿ ಹಾಗೂ ಬೇರೆ ಬೇರೆ ಗ್ರಾಮಗಳಲ್ಲಿರುವ ಅವರ ಸ್ಮಾರಕಗದ್ದುಗೆ, ಮಠಗಳಲ್ಲಿ ಇಂದಿಗೂ ಅವರ ಪವಾಡ-ಮಹಿಮೆಗಳನ್ನು ಕಾಣುವ ಭಕ್ತರು ತಂಡೋಪತಂಡವಾಗಿ ಹೋಗಿಬರುತ್ತಾರೆ ಗರಗದಲ್ಲಿ ವರ್ಷಕ್ಕೊಮ್ಮೆ ಶ್ರೀ ಮಡಿವಾಳೇಶ್ವರರ ಜಾತ್ರೆ-ಉತ್ಸವವೂ ಅತ್ಯಂತ ವೈಭವದಿಂದ ನಡೆಯುತ್ತಿರುವುದು ಅವರ ಮಹಿಮೆಗೆ ಸಾಕ್ಷಿ.

ಶ್ರೀ ಮಡಿವಾಳೇಶ್ವರ ಪುರಾಣದಲ್ಲಿ ಚಿತ್ರಿತವಾಗಿರುವ ಶ್ರೀಮಡಿವಾಳೇಶ್ವರರ ಜೀವನಚಿತ್ರ ಅಸಂದಿಗ್ಧವಾಗಿಲ್ಲ. ಅಲ್ಲದೆ ಅವರ ಸಂಪರ್ಕಹೊಂದಿದ್ದ ಹಲವು ವ್ಯಕ್ತಿಗಳ ವಿಷಯವೂ ಖಚಿತವಾಗಿ ದೊರೆಯುವುದಿಲ್ಲ. ಕಾಲಕಾಲಕ್ಕೆ ಬೆಳೆದು ನಿಂತಿರುವ ಪವಾಡಗಳ ಕಾಡಿನಲ್ಲಿ ಅವರ ನಿಜ ಜೀವನದ ಅನೇಕ ಸಂಗತಿಗಳು ಮಾಜಿ ಹೋಗಿರುವುದೊ ಕಂಡುಬರುತ್ತದೆ. ಶ್ರೀಮಡಿವಾಳೇಶ್ವರರ 'ಜೀವನ ಚರಿತ್ರೆ'ಯನ್ನು

ಬರೆಯುವ ಲೇಖಕ. ಈ ಎಲ್ಲ ಸಂಗತಿಗಳ ಕೂಲಂಕಷ ಸಂಶೋಧನೆಯನ್ನು ಮಾಡಬೇಕಾಗುವುದು. ಆದರೂ, ಮಹಿಮಾಶಾಲಿಗಳಾಗಿ ಮೆರೆದ ಶ್ರೀ ಮಡಿವಾಳೇಶ್ವರರು ಅಸದೃಶ ವ್ಯಕ್ತಿಗಳಾಗಿದ್ದರೆಂಬುದರಲ್ಲಿ ಸಂಶಯವಿಲ್ಲ. ಭಾವುಕತೆ, ಕಲ್ಪಕತೆ, ಸ್ವಕಪೋಲಸೃಷ್ಟಿ ಹಾಗೂ ಕಾಲಕಾಲಕ್ಕೆ ಕೈಕಾಲಿಲ್ಲದೆ ಬೆಳೆದ ಪವಾಡಕತೆಗಳ ಹೆಬ್ಬಂಡೆಯಲ್ಲಿಯೂ, ಮಹಿಮಾಶಾಲಿಗಳಾದ ಶ್ರೀ ಮಡಿವಾಳೇಶ್ವರರ ನಿಜ ಜೀವನದ ಚಿನ್ನದ ಎಳೆಗಳನ್ನು ಕಾಣುವುದು ಅಸಾಧ್ಯವೇನಲ್ಲ. ಶ್ರೀ ಮಡಿವಾಳೇಶ್ವರರ ವ್ಯಕ್ತಿತ್ವದ ಔನ್ನತ್ಯವನ್ನು ಪುರಾಣ ಹೀಗೆ ವರ್ಣಿಸಿದೆ.

ಸಚ್ಚಿದಾನಂದಾಢ್ಯಯಾತ್ಮರೂಪನು ತಾನು
ಉಚ್ಚತರದುಪರತಿಯು ದಮ ದಯಾ ಶಮ ಸದ್ಗು
ಣೋಚ್ಚಯವದನ್ಯರಂ ತನ್ನಂತೆ ಭಾವಿಸುವ ಬಗೆಯು ಪರಮೋಪ ಕೃತಿಯು ||
ಅಚ್ಚಳಿಯದಿರ್ಪ ಲಿಂಗಾಂಗ ಸಮರಸ ಸುಖವು
ನೆಚ್ಚಿರ್ಪವರಿಗೆ ಮೆಚ್ಚಿ ಇಷ್ಟಾರ್ಥಗಳಡುವಿಕೆಯು
ಬಿಚ್ಚಿ ತೋರುವ ಸರಳ ಹೃದಯತ್ವಮೆಲ್ಲವುಂ ಶಿವಯೋಗಿಯೊಳು ಮೆರೆವುವು ||

(ಅ. ೧೪-ಪದ್ಯ ೨೪)

ಒಟ್ಟಿನಲ್ಲಿ, ಶ್ರೀ ಮಡಿವಾಳೇಶ್ವರರು ಮಹಾಶಿವಯೋಗಿಗಳಾಗಿ ಬಾಳಿ, ಭಾರತದ ಪುಣ್ಯಕ್ಷೇತ್ರಗಳನ್ನೆಲ್ಲ ಸಂದರ್ಶಿಸಿ, ಸಿದ್ಧ-ಸಾಧು-ಸಂತ-ಜ್ಞಾನಿಗಳೆಲ್ಲರ ಸಂಪರ್ಕ ಪಡೆದು, ಎಲ್ಲ ಧರ್ಮದ ಭಕ್ತರನ್ನು ಸಮಾನವಾಗಿ ಕಂಡು, ಎಲ್ಲ ಧರ್ಮಗ್ರಂಥಗಳ ಸಾರವನ್ನು ಅರಿತು, ಆಚರಿಸಿ, ಶಾಪಾನುಗ್ರಹ ಸಾಮರ್ಥ್ಯವನ್ನು ಸಂಪಾದಿಸಿ, ಭಕ್ತರ ಇಷ್ಟಾರ್ಥವನ್ನು ಸಲ್ಲಿಸಿ, ಲಿಂಗಾಂಗ ಸಾಮರಸ್ಯ ಸ್ಥಿತಿಯಲ್ಲಿದ್ದು, ಲಿಂಗೈಕ್ಯರಾದರು. ಅವರ ಜೀವನ ಪಾವನವಾಗಿದೆ; ಕೃತ ಕಾರ್ಯಗಳೆಲ್ಲ ಪವಾಡವಾಗಿವೆ; ಆ ಮಹಿಮನ ನಾಮಸ್ಮರಣೆಯೇ ಮಂತ್ರವಾಗಿದೆ. ಮಾನವರಾಗಿಯೇ ಬಂದು ಬಾಳಿದರೂ, ದೇವಮಾನವರಾಗಿ ಉಳಿದಿದ್ದಾರೆ. ಅವ್ಯಾಹತವಾಗಿ ನಡೆದು ಬಂದಿರುವ ಭರತಖಂಡದ ಸಂತ-ಶರಣ ಪರಂಪರೆಯಲ್ಲಿ ಮಾನ್ಯವಾದ ಸಂಸ್ಕೃತಿಯ ನಂದಾದೀಪ ಶ್ರೀಮಡಿವಾಳೇಶ್ವರರು.

## ಶ್ರೀ ಶಿವಯೋಗಿಗಳ ಪವಾಡಗಳು.

ಮಹಿಮರು ಅಘಟನ ಘಟನ ಸಮರ್ಥರು. ಅಸಮಾನ ಶಕ್ತಿಶಾಲಿಗಳಾಗಿರುವುದರಿಂದ, ಶುದ್ಧಾಂತಃಕರಣವುಳ್ಳವರಾಗಿರುವುದರಿಂದ, 'ಲೋಕವೇ ತಾನೆ, ಲೋಕವೇ ತಾನು' ಎಂಬ ವಿಶಾಲ ಹೃದಯಿಗಳಾಗಿರುವುದರಿಂದ, ಇದೆಲ್ಲದಕ್ಕಿಂತ ಮುಖ್ಯವಾಗಿ ಅವರು ಯೋಗಸಿದ್ಧರಾಗಿರುವುದರಿಂದ, ಅವರು ಮಾಡಿ ತೋರಿಸುವ

ಘಟನೆಗಳು, ಸಾಮಾನ್ಯರಿಗೆ ಅಸಾಮಾನ್ಯವೂ, ಅದ್ಭುತವೂ, ಅತೀಂದ್ರಿಯವೂ ಆಗಿ ತೋರುವುದು ಸಹಜ. ಯಂತ್ರವಿಜ್ಞಾನವೇನನ್ನೂ ತಿಳಿಯದ ಸಾಮಾನ್ಯ ವ್ಯಕ್ತಿಗೆ, ವಿಮಾನ, ಟೆಲಿಫೋನ್, ರೇಡಿಯೋ ಮುಂತಾದ ಜನಸಾಮಾನ್ಯ ಪರಿಚಿತ ವಸ್ತುಗಳೂ ಅತ್ಯದ್ಭುತಗಳಾಗಿ ಕಾಣುವುದು ಸಹಜ ಅವನ ಮತಿಗೆ ಅದೇ ಸಹಜ. ಆದರೆ, ಆ ಯಂತ್ರಗಳ ರಹಸ್ಯ ತಿಳಿದ ತಂತ್ರಜ್ಞನಿಗೆ ಏನೊಂದಾಶ್ಚರ್ಯವೂ ಅಲ್ಲ ! ಭೌತಿಕ ಸಂಗತಿಗಳ ಬಗ್ಗೆಯೇ ಹೀಗನಿಸುವಾಗ, ಇನ್ನು ಯೌಗಿಕ ಶಕ್ತಿ ಸಾಮರ್ಥ್ಯಗಳ ಬಗ್ಗೆ ಏನೆನ್ನೋಣ ? ಶಿವಯೋಗಿಗಳಿಗೆ ಸಹಜವಾದುದು, ಸಾಮಾನ್ಯರಿಗೆ ಪವಾಡ. ಕಾರಣ, ಶರಣರನ್ನು ಕುರಿತು ಬಂದಿರುವ ಪವಾಡಗಳು, ಸಾಮಾನ್ಯದೃಷ್ಟಿಗೆ ಅಸಹಜವೆಂದು ಕಾಣಿಸಿದರೂ, ಅವು ಅಸಾಧ್ಯವೆಂದು ಮಾತ್ರ ಖಂಡಿತವಾಗಿ ಹೇಳಲು ಹೇಗೆ ಸಾಧ್ಯ ?

ಶ್ರೀ ಮಡಿವಾಳೇಶ್ವರರು ನೂರಾರು ಪವಾಡಗಳನ್ನು ಮೆರೆದಂತೆ ಈ ಪುರಾಣದಲ್ಲಿ ವರ್ಣಿತವಾಗಿದೆ. ಈ ಪುರಾಣವನ್ನು ರಚಿಸಿದ ಲಿಂ. ಸದಾಶಿವಶಾಸ್ತ್ರಿಗಳಾದರೂ, ಶಿವಯೋಗಿಗಳ ಜೀವನ-ಸಾಧನೆಗಳನ್ನು ಸಂಗ್ರಹಿಸುವಾಗ

‘ ಇಲ್ಲದುದನಿನಿಸಾನುಮಾನಿಲ್ಲಿ ಬರೆದಿಲ್ಲ |
ಬಲ್ಲತನವೆಸೆಯಲೆಂದಾಂ ಸೊಲ್ಲಿಸಿಲ್ಲಿಲ್ಲ |
ಮಿಲ್ಲಿ ಬೀಡಿಯಮಠದ ರಾಮಲಿಂಗಯ್ಯನವರೊರೆದ ಚರಿತಾಧಾರದಿ
ಸೊಲ್ಲಿಸಿದೆನಂತಲ್ಲದೆಳ್ಳನಿತು ಬೇರಿಲ್ಲ
... .... .... .... ....

(ಪೀ. ಸಂಧಿ–ಪ. ೨೫)

ಎಂದು ಹೇಳಿಕೊಂಡಿದ್ದಾರೆ. ನಿಜ, ಭಕ್ತಿಯು ಕಣ್ಣಿಗೆ ಕಡ್ಡಿಯೂ ಗುಡ್ಡವಾಗಿ ಕಾಣುತ್ತದೆ ! ಆದರೂ ಈ ಪವಾಡಗಳೆಲ್ಲ ಸತ್ಯವೆಂದು ನಂಬುವದಕ್ಕಿಂತ ಅವುಗಳ ಹಿಂದಿರುವ ‘ಸತ್ಯ’ ಹಾಗು ಅವುಗಳನ್ನು ನೆರವೇರಿಸಬಲ್ಲ ವ್ಯಕ್ತಿಯ ‘ಸಾಮರ್ಥ್ಯ’ ಗಳನ್ನು ಗಣಿಸುವುದು ಅಸಾಧ್ಯವಲ್ಲ. ಈ ಹಿನ್ನೆಲೆಯಲ್ಲಿ ಪುರಾಣದಲ್ಲಿ ಬಂದಿರುವ ಬ್ರಹ್ಮಚರ್ಯದ ಪವಾಡಗಳು, ಮಕ್ಕಳ ಫಲ ನೀಡಿದ ಪವಾಡಗಳು, ಕಾಡುಪ್ರಾಣಿಗಳನ್ನು ಸಾಧುಗೊಳಿಸಿದ ಪವಾಡಗಳು, ಬೆಂಕಿಯನ್ನು ಮಾಡಿದ ಹಾಗು ಆರಿಸಿದ ಪವಾಡಗಳು, ಇದ್ದ ಸ್ಥಳದಿಂದ ಮಾಯವಾದ ಪವಾಡಗಳು, ವಸ್ತುಗಳನ್ನು ಮಾಯವಾಗಿಸಿದ ಪವಾಡಗಳು, ಪಿಶಾಚಿ-ಭೂತಗಳನ್ನು ಓಡಿಸಿದ್ದು, ಕಡಿಮೆ ಬಿದ್ದ ಪಾಕ–ತುಪ್ಪಗಳನ್ನು ಊರ್ಜಿತಗೊಳಿಸಿದ್ದು ಮುಂತಾದ ಅನೇಕ ಪವಾಡಗಳನ್ನು ಗಣಿಸಬೇಕಾಗುವದು. ಅಲ್ಲದೆ ಎಲ್ಲ ಶರಣಮಹಾತ್ಮರೂ ಇದೇ ಬಗೆಯ ಪವಾಡಗಳನ್ನು ಮಾಡಿರುವರೆಂಬುದನ್ನೂ ನಾವಿಲ್ಲಿ ಸ್ಮರಿಸಿಕೊಳ್ಳಬಹುದಾಗಿದೆ. ಪುರಾಣದ ನೆಲಗಟ್ಟು ಭಕ್ತಿ, ಅದರ ಮೇಲ್ಕಟ್ಟೆಲ್ಲ ಇಂಥ ಪವಾಡಗಳು ಎಂಬ ನುಡಿ ಸತ್ಯ.

## ಪುರಾಣ ಕವಿಯ ಚರಿತ್ರೆ

ಲಿಂ ಶ್ರೀ ಹುಕ್ಕೇರಿ ಸದಾಶಿವ ಶಾಸ್ತ್ರಿಗಳು ಹುಕ್ಕೇರಿಯವರು. ರೇಣುಕ ಶಾಖೆಯ ವೀರಗೋತ್ರದ ಪಡಿವಿಡಿ ಸೂತ್ರ ವಂಶಸ್ಥರಾದ ಶ್ರೀ ಪಂಚಾಕ್ಷರ ಶಾಸ್ತ್ರಿಗಳು ಈ ಕವಿಯ ತಂದೆ. ದಡ್ಡಿಯೂರಿನ ಮಾಸ್ತಿಹೊಳೆಯ ಹಿರಿಯಮಠದ ಅಧಿಕಾರಿಗಳಾಗಿದ್ದ ಶ್ರೀ ಮಹಾಲಿಂಗ ಮೂರ್ತಿಗಳು ಈ ಕವಿಯ ಉಪದೇಶಗುರು. ಹಾಗೆಯೇ ಷಟ್‌ಶಾಸ್ತ್ರಕೋವಿದರೂ ಚಾರುಕವಿತಾಸಮರ್ಥರೂ ಆದ ದಾವಣಗೆರೆ ತೆಲಗಿಮಠದ ಚಂದ್ರಶೇಖರ ಶಾಸ್ತ್ರಿಗಳು ಇವರ ವಿದ್ಯಾಗುರುಗಳು. ಅಲ್ಲದೆ ಶ್ರೀ ಮಡಿವಾಳೇಶ್ವರರ ಪುರಾಣವನ್ನು ಬರೆಯಲು ಆಶೀರ್ವದಿಸಿದವರು 'ಸವದತ್ತಿಯಕ್ಕುಂಡಿ ಮಠದೊಡೆಯರುಭಯರಿವರು ಪರ ಮಹಾಲಿಂಗೇಶ ಸಿದ್ಧರಾಮೇಶ್ವರರು' ಎಂದು ಪುರಾಣದ ಪೀಠಿಕಾಸಂಧಿಯಲ್ಲಿ ಸ್ಮರಿಸಿಕೊಂಡಿದ್ದಾರೆ ಇಂಥ ಪುಣ್ಯಾತ್ಮರ ಕರುಣೆಯ ಕಂದನಾಗಿ ಬೆಳೆದ ಶ್ರೀ ಸದಾಶಿವಶಾಸ್ತ್ರಿಗಳು ಲಿಂಗಭಕ್ತಿ ನಿಷ್ಠಾಪರರೂ ಸಕಲ ಶಾಸ್ತ್ರಕೋವಿದರೂ ಅನೇಕ ಕಾವ್ಯಪರಿಣತರೂ ಅಲ್ಲದೆ ಸರಸಕವಿತಾಸಾಮರ್ಥ್ಯ ಪಡೆದವರೂ ಆಗಿದ್ದಾರೆ. ಅವರ ಹೆಸರು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ—ಮುಖ್ಯವಾಗಿ ವೀರಶೈವ ಸಾಹಿತ್ಯ ಚರಿತ್ರೆಯಲ್ಲಿ ಉಳಿಯುತ್ತದೆ. ಆದರೂ ಶ್ರೀ ಶಾಸ್ತ್ರಿಗಳ ಜೀವನ, ಕಲ್ಕೆ ಹಾಗೂ ಇತರ ಕೃತಿಗಳ ಬಗ್ಗೆ ವಿವರಗಳನ್ನು ಸಂಗ್ರಹಿಸಬೇಕಾಗಿದೆ. ಅವರ ಹೆಸರು ಸ್ಮರಣೀಯವಾಗುವಂಥ ಒಂದು ಸೂಕ್ತ ಸ್ಮಾರಕವನ್ನು ಏರ್ಪಡಿಸಬೇಕಾದುದೂ ಧರ್ಮ.

## ಪುರಾಣದ ವಿಮರ್ಶೆ

ಸಾಮಾನ್ಯವಾಗಿ ಕನ್ನಡದ ಜೈನ ಪುರಾಣಗಳಲ್ಲಿ 'ಜನ್ಮಜನ್ಮಾಂತರ'ದ ಪಿಡುಗು ಹಾಗು ವೀರಶೈವ ಪುರಾಣಗಳಲ್ಲಿ 'ಕಥೋಪಕಥೆಗಳ' ಪಿಡುಗು ಹಬ್ಬಿರುವುದು ಕಾಣುತ್ತದೆ. ಕೆಲವೇ ಆದರ್ಶ ಪುರಾಣಗಳನ್ನು ಬಿಟ್ಟರೆ ಇದು ಎಲ್ಲ ಪುರಾಣಗಳಿಗೂ ಅನ್ವಯಿಸುವ ನುಡಿ ಅಲ್ಲದೆ ಅವುಗಳಲ್ಲಿ ಚರ್ವಿತ-ಚರ್ವಣ, ನೂತನತೆ ಇಲ್ಲದೆ ಪರಂಪರೆಯ ನಡಿ-ರೀತಿ ಅಲ್ಲಿನ ಸಾಮಾನ್ಯದೋಷಗಳು. ಭಾಷಾಶೈಲಿ, ಕಾವ್ಯ-ತಂತ್ರ, ವಸ್ತುವಿಸ್ತಾರದಲ್ಲಿಯೂ ಈ ಏಕತಾನತೆ ಅಪಸ್ವರವಾಗಿಯೇ ಮೂಡಿಬಂದಿದೆ. ಅಲ್ಲಲ್ಲಿ ಬರುವ ಕವಿಸಮಯಗಳ ಪರಂಪರೆಯ ಕಾವ್ಯಾಂಶಗಳ ವರ್ಣನೆಯ ಕಗ್ಗಾಡು. (ಕಾವ್ಯಕ್ಕೆ ನೇರ ಸಂಬಂಧವಿಲ್ಲದಿದ್ದರೂ) ಹಬ್ಬಿ ಬೆಳೆದುದನ್ನೂ ಕಾಣುತ್ತೇವೆ. ಒಮ್ಮೊಮ್ಮೆ ಕಾಣುವ ನೀತಿನುಡಿ ಅತಿ ವಿಲಂಬಿತವಾಗಿ ಕಥೆಯ ಓಘವನ್ನು ಅಡ್ಡಗಟ್ಟಿ ಬಿಡುತ್ತದೆ. ಹೀಗಾಗಿ ಕನ್ನಡದ ಹೆಚ್ಚಿನ ಪುರಾಣಗಳು 'ಪಿಷ್ಟಪೇಷಣ'. ಅವುಗಳಲ್ಲಿ ಸಿದ್ಧರಾಮಚರಿತ್ರ, ಪ್ರಭುಲಿಂಗಲೀಲೆ ಮುಂತಾದ ಕೆಲವೇ ಕೃತಿಗಳನ್ನು ಈ ಸಾಮಾನ್ಯ ನುಡಿಗೆ ಅಪವಾದಗಳೆಂದು ಗಣಿಸಬೇಕು.

ಶ್ರೀ ಮಡಿವಾಳೇಶ್ವರ ಪುರಾಣ, ವೀರಶೈವ ಪುರಾಣಗಳ ಸಾಮಾನ್ಯ ಲಕ್ಷಣ ಗಳನ್ನೊಳಗೊಂಡ ಒಂದು ಸಾಮಾನ್ಯ ಪುರಾಣ. ವಸ್ತುನೂತನವಾದ ದು. ಆದರೆ, ನಿರ್ವಹಣೆಯಲ್ಲಿ ನೂತನತೆ ಸಾಲದು. ಕಥಾನಾಯಕನ ಜೀವನವನ್ನು ಆಚೀಚೆ ಅಲು ಗದೆ ನೇರವಿಧಾನದಿಂದ ಚಿತ್ರಿಸಿಕೊಂಡು ಹೋಗಿರುವುದು ಇಲ್ಲಿನ ಮೆಚ್ಚುಗೆಯ ಅಂಶ. ಇಲ್ಲಿ ವರ್ಣನೆ ಅತ್ಯಂತ ಮಿತವಾಗಿ ಬಂದಿರುವುದು ಕಾಣುತ್ತದೆ. ಕಿತ್ತೂರುನಗರ ನಾಶವಾಗಲೆಂದು ಶಾಪವಿತ್ತ ಸನ್ನಿವೇಶವನ್ನು ಕವಿ ಎರಡೇ ಪದ್ಯಗಳಲ್ಲಿಯೂ ಶ್ರೀ ಮಡಿವಾಳೇಶ್ವರರು ಲಿಂಗೈಕ್ಯರಾದ ಸನ್ನಿವೇಶವನ್ನು ೬-೮ ಪದ್ಯಗಳಲ್ಲಿಯೂ, ಗಣಿಕೆಯರ ವರ್ಣನೆಯನ್ನು ಎರಡೇ ಪದ್ಯಗಳಲ್ಲಿಯೂ ವರ್ಣಿಸಿರುವ ಔಚಿತ್ಯವನ್ನು ಗಮನಿಸಬಹುದು. ಈ ಪುರಾಣದಲ್ಲಿ ಕಥೋಪಕಥೆಗಳ ಜಾಲ ಬಹಳ ಇಲ್ಲವೆಂದೇ ಹೇಳಬೇಕು. ಪುರಾತನ ಶರಣರು ಮೆರೆದ ಭಕ್ತಿ, ಪವಾಡಗಳ ಸ್ಮರಣೆಯಿದೆ; ವಿಸ್ತ ರಣೆ ಇಲ್ಲ. ಹರಿಶ್ಚಂದ್ರ, ಬಲಿ, ಶಿಬಿ ರಾವಣ, ಮುಂತಾದವರ ಕಥೆ ಬಂದರೂ, ಸೂಚನೆಯಾಗಿ ಮಾತ್ರ. ಪುರಾಣಪ್ರಾರಂಭದಲ್ಲಿ ಪೂರ್ವದ ಶರಣರ, ಕವಿಗಳ ಸ್ತೋತ್ರ ಮಾಡುವಲ್ಲಿ ಕವಿಗಳು ಪರಂಪರೆಯ ವಿಧಾನವನ್ನೇ ಅನುಸರಿಸಿದ್ದರೂ, ಈ ಆಧುನಿಕ ಪುರಾಣಕವಿ ರನ್ನ, ಜನ್ನ, ಪೊನ್ನ, ಪಂಪ, ಲಕ್ಷ್ಮೀಶ ಮುಂತಾದ ಕವಿಗಳನ್ನೂ ಸ್ಮರಿಸಿ ರುವುದು ಸ್ಮರಣೀಯ ಸಂಗತಿ. ಪ್ರತಿಯೊಂದು ಸಂಧಿಯ ಪ್ರಾರಂಭದಲ್ಲಿ ಶಿವನನ್ನು ಸ್ಮರಿಸುವ ಒಂದು ಪದ್ಯ, ಹಾಗೂ ಸಂಧಿಯ ಅಂತ್ಯ ಪದ್ಯದಲ್ಲಿ ಪಾರ್ವತಿಯ ಸ್ತೋತ್ರ ಮಾಡಿರುವುದು ಗಮನೀಯ ಅಂಶ. ಆ ಪದ್ಯಗಳನ್ನೆಲ್ಲ ಒಂದೆಡೆ ಸೇರಿಸಿದರೆ 'ಶಿವ-ಪಾರ್ವತಿಸ್ತವ'ವೆಂಬ ರಸವತ್ತಾದ ಸ್ವತಂತ್ರ ಕೃತಿಯಾಗುವಷ್ಟು ಸೊಗಸಾಗಿದೆ.

'ದೇವಿ ನಿನ್ನಿಂ ಪುಟ್ಟ ದುರಳತನದಿಂ ಚರಿಸಿ
ದೇವರೆನ್ನದೆ ಗುರುವು ಹಿರಿಯರೆನ್ನದೆ ಮೇಣು
ಭಾವದೊಳು ದುರಿತಕರ್ಮವನೆಳಸಿ ದುರ್ಗುಣಿಯು ನಾನಾಗಲೀ ಲೋಕವು ॥
ಪಾವನೆಯು ಪಾರ್ವತಿದೇವಿಯೆಂತಹ ಮಗನ
ನಾ ವಿಮಲೆ ಹೆತ್ತಳೆಂದಾಡಿಕೊಳುವುದು ನಿನಗೆ
ಹೇವವಿಲ್ಲವೆ ತಾಯೆ ? ಎನಗೆ ಸದ್ಗುಣಗೊಟ್ಟು ಕಳೆದು ಕೊಳ್ಳಪಕೀರ್ತಿಯ'

(ಸಂ. ೧೧, ಪ. ೬೯)

ಮುಂತಾದ ಪದ್ಯಗಳನ್ನು ಉದಾಹರಣೆಯಾಗಿ ಗಮನಿಸಬಹುದು.

ಪುರಾಣಕಾವ್ಯಗಳಲ್ಲಿ ವಸ್ತುವಿವೇಕ, ನೀತಿಬೋಧೆ ಅನಿವಾರ್ಯ. ಈ ಕಾವ್ಯ ದಿಂದ ದೊರೆಯುವ ವಸ್ತುವಿವೇಕ ಅತ್ಯಲ್ಪ. ಆದರೆ ಅಲ್ಲಲ್ಲಿ ಬರುವ ತತ್ವವಿವೇಕ, ನೀತಿಬೋಧೆ ಸರಳವೂ ಸುರಮ್ಯವೂ ಆಗಿದೆ.

ಮನವೊಂದೆ ಬಂಧಕ್ಕೆ ಮೋಕ್ಷಕ್ಕೆ ಕಾರಣವು
ಮನವೆ ಪಾಪದ ಮೂಲನದನಳಿಸಲಿಕೆ ಕಾಲ್ಕ
ಮನವೆ ತಾನೆ ಜಗತ್ತು ಪರವಸ್ತು ವಿನಗೊತ್ತು ಸಂಪತ್ತುವದು ವಿಪತ್ತು ||
ಮನವೊಂದಿನಂ ಸೀಸು ವಶಗೈದೊಡದು ಸಾಕು
ಚಿನುಮಯನ ಸಾರೂಪ್ಯವಿಗಡೆ ನಿನಗಪ್ಪುದೆಂ
ದೆನುತೆ ನಿಜಭಕ್ತನಹ ರಾಜನಿಗೆ ಮಡಿವಳಯೋಗಿಯುಪದೇಶಿಸಿದನು ||

(ಅ. ೯, ಪ-೧೮)

ಶಿವಯೋಗಿಯ ಇರುವಿಕೆಯನ್ನು ವರ್ಣಿಸುವ ಈ ಕೆಳಗಿನ ಪದ್ಯವನ್ನೂ ಗಮನಿಸಿರಿ. ಬ್ರಹ್ಮಚರ್ಯದ ಪರೀಕ್ಷೆಗಾಗಿ ಗಣಿಕೆಯರು ಮಾಡಿದ ನರ್ತನವನ್ನು ಕಂಡಾಗ ಆ ಶಿವಯೋಗಿ,

ಕಿವಿಯಿರ್ದುಮವರ ಮಧುರೋಕ್ತಿಯಂ ಕೇಳಲಿ
ಲ್ಲವು ಚಿತ್ತಮಿರ್ದೊಡಂ ಸ್ಮರಿಸಲಿಲ್ಲವು ತಾನು
ಯುವತಿಯರ ಮೈಯ ನರುಗಂಪಿಗಾತನ ಮೂಗು ತವೆಯಿರ್ದುಮಿಲ್ಲದಾಯ್ತು ||
ಸ್ತವಯೋಗ್ಯವಹ ಭಾವಮಿರ್ದುಮಾ ಸುದತಿಯರ
ನವಯೌವನದ ಹಾವ ಭಾವಗಳ ಭಾವಿಸದು
ಭುವನದೊಳಗಿದು ಚಿತ್ರಮೆನ್ನೆಲಿವೆಲ್ಲವುಂ ಮುಳುಗೆ ಲಿಂಗಾನಂದದಿ ||

(ಅ. ೪. ಪ. ೪೧)

ಶ್ರೀ ಮಡಿವಾಳೇಶ್ವರರು ತಮ್ಮ ಜೀವಿತದ ಕೊನೆಯ ದಿನ ಸಮೀಪದ ಭಕ್ತರಿಗೆಲ್ಲ ಉಪದೇಶ ನೀಡಿದುದನ್ನು ಕವಿ ಹೀಗೆ ವರ್ಣಿಸಿದ್ದಾರೆ. ಭಕ್ತಿಯ ಮಹಿಮೆಯನ್ನು ಇದಕ್ಕಿಂತ ಸರಳವಾಗಿ ಹೇಗೆ ವರ್ಣಿಸಬಹುದು !

ಭಕ್ತಿಯಿಂದಲಿ ವಿರತಿಸಂಪದವು ದೊರೆಗುಮಾ
ಭಕ್ತಿಯಿಂ ಶಿವಕೃಪೆಯುಮಪ್ಪುದಿದು ನಿಜವು ಸಲೆ
ಭಕ್ತಿಯಿಂ ಸುಜ್ಞಾನ ಸಂಪತ್ತಿಯಹುದು ವರಭಕ್ತಿಯಿಂದಿಹ ಭೋಗವು ||
ಭಕ್ತಿಯಿಂದೈಸಿರಿಯು, ಭಕ್ತಿಯಿಂ ಮೈಸಿರಿಯು
ಭಕ್ತಿಯಿಂ ಸದ್ಗುಣಗಳೊದವು ನಿರಹಂಕಾರ
ಭಕ್ತಿಯಿಂ ಸಕಲೇಷ್ಟ ಸಿದ್ಧಿ ಬಗೆವೊಡೆ ಮಹಾಭಕ್ತಿಯೇ ನಿಖಿಲ ಜನನಿ ||

(ಸಂ. ೧೬-ಪ. ೭)

ಕೊನೆಯದಾಗಿ ಕವಿಯ 'ಭಾಷಾಸಂಪತ್ತಿ ಶೈಲಿ- ಸರಳ, ಲಲಿತ, ನೇರ ಎಂದೇ ಹೇಳಬೇಕು. ರಂಜನೆಯ ನುಡಿ ಇಲ್ಲ. ಪ್ರಾಸಾನುಪ್ರಾಸ ವ್ಯಾಮೋಹ ಇಲ್ಲವೇ ಇಲ್ಲ- ಸುಲಿದ ಬಾಳೆಯ ಹಣ್ಣಿನಂಥ ಸುಲಲಿತವಾದ ಕನ್ನಡಶೈಲಿ ಕವಿಗಳಿಗೆ ಕರಗತವಾಗಿದೆ. ಆದರೇನು, ಈ ಕಾವ್ಯದಲ್ಲಿ ಎಲ್ಲಿಯೂ ಧ್ವನಿಪ್ರಚುರವಾದ ನುಡಿ, ಅಲಂಕಾರ ಕಾಣುವದೇ ಇಲ್ಲ. ಕಾವ್ಯಕಲೆಗೆ ಇದೊಂದು ದೊಡ್ಡ ಕೊರತೆ. ಹಿಂದಿನ ಕವಿ-ಕಾವ್ಯಾಭ್ಯಾಸದಿಂದ ಮಾತ್ರವೇ ಸಿದ್ಧಿಸಿರುವ ಈ ಕಾವ್ಯಶಕ್ತಿಯಲ್ಲಿ ಪ್ರತಿಭೆಯು 'ಕಿಡಿನುಡಿ', 'ಮಿಡಿನುಡಿ', 'ಪಡಿನುಡಿ'ಗಳನ್ನರಸುವುದೇ ತಪ್ಪೆಂದು ತೋರುತ್ತದೆ. ಅವರೂ ವಾರ್ಧಕಷಟ್ಪದಿಯ ರಚನೆಯ ರಹಸ್ಯ ಕವಿಗಳಿಗೆ ತಿಳಿದಿದೆ. ಅಲ್ಲಲ್ಲಿ ಉಳಿದಿರುವ ರಚನಾದೋಷಗಳನ್ನೂ ಮುದ್ರಣ ಸ್ಖಾಲಿತ್ಯಗಳನ್ನೂ ಸರಿಪಡಿಸ ಬೇಕಾಗಿದೆ.

ಶಿವಯೋಗಿ ಮಡಿವಾಳೇಶ್ವರರ ಅದ್ಭುತ ಜೀವನವನ್ನು ಇಂಥ ಸರಳ ಪುರಾಣ ರೂಪದಲ್ಲಿ ನೀಡಿದ ಶ್ರೀ ಸದಾಶಿವಶಾಸ್ತ್ರಿಗಳ ಸಾಧನೆ ಕಿರಿದೇನಲ್ಲ. ಈ ಪುರಾಣ ಕನ್ನಡದ ಪರಂಪರೆಯ ಮಾರ್ಗವನ್ನೇ ಹಿಡಿದಿದ್ದರೂ, ಅನೇಕ ಕಾರಣಗಳಿಗಾಗಿ ಇದು ಒಂದು ಅನುಕರಣೀಯ ಕೃತಿ. ಪಾಂಡಿತ್ಯದ ಕಾವು ಇಳಿಯುತ್ತಿರುವ ಇಂದಿನ ಸಾರಸ್ವತ ಲೋಕಕ್ಕೆ ಈ ಸರಳಗನ್ನಡದ-ಸರಸ ನುಡಿಯ-ಭಕ್ತಿಪುರಾಣ, ಶ್ರೀ ಮಡಿ ವಾಳೇಶ್ವರರ ಭಕ್ತರಿಗೆ ಒಂದು ಅಮೂಲ್ಯ ಕೊಡುಗೆ; ಕನ್ನಡ ಸಾಹಿತ್ಯಕ್ಕೊಂದು ದಾಖಲೆ.

## ಕಿತ್ತೂರಿನ-ಕಲ್ಮಠದ ಆದರ್ಶ

ಹಿಂದೊಮ್ಮೆ ರಾಜರ ಹಾಗೂ ಪ್ರಜೆಗಳ ಗೌರವಾದರಗಳಿಗೆ ಪಾತ್ರವಾಗಿದ್ದ ಕಿತ್ತೂರು ಕಲ್ಮಠ ಸಂಸ್ಥಾನ ತನ್ನ ಅಮಾವಾಸ್ಯೆಯ ದಿನಗಳನ್ನು ಕಳೆದು, ತನ್ನ ಪೂರ್ವದ ಸ್ಥಾನ-ಮಾನಗಳನ್ನು ಗಳಿಸಿಕೊಳ್ಳುವ ದಾರಿಯಲ್ಲಿ ಸಾಗಿದೆ ಎಂಬುದಕ್ಕೆ ಈ ಪುರಾಣಪ್ರಕಟಣೆಯೇ ನಿತ್ಯಸಾಕ್ಷಿ. ವೀರತೆಗೆ ಹೆಸರಾದ ಕಿತ್ತೂರುನಾಡು, ದರ್ಮ-ಭಕ್ತಿ-ದಾನ ವೀರತೆಗೂ ನೆಲಮನೆಯಾಗಲಿ. ಅಹಂಕಾರ ತುಂಬಿದ ಕಿತ್ತೂರು ಹಾಳಾಗಲೆಂದು ಶಾಪವಿತ್ತು ಹೋದ ಶ್ರೀ ಮಡಿವಾಳ ಶಿವಯೋಗಿಗಳನ್ನು ಈ ಪುರಾಣ ರೂಪದಲ್ಲಿ ' ನೂತನ ಭಕ್ತಿ ಕಿತ್ತೂರು ' ಮತ್ತೆ-ಆವಾಹನೆ ಮಾಡುತ್ತಿರು ವುದು ಒಂದು ಪುಣ್ಯ ವಿಶೇಷ. ಅವರ ಪಾರ್ಥಿವ ಶರೀರದ 'ಗದ್ದುಗೆ'ಯನ್ನು ಪಡೆವ ಪುಣ್ಯ ಗರಗಕ್ಕೆ ದೊರೆತರೂ, ಶ್ರೀ ಮಡಿವಾಳೇಶ್ವರರ ಪುಣ್ಯಚೇತನವನ್ನು ಪುರಾಣರೂಪದಲ್ಲಿ ಪ್ರತಿಷ್ಠಾಪಿಸಿ, ಲೋಕಕ್ಕೆ ಅವರ ದಿವ್ಯ ಸಂದೇಶವನ್ನು ಬಿತ್ತರಿಸಿದ ಕೀರ್ತಿ ಚೆನ್ನಮ್ಮನ ಕಿತ್ತೂರಿನದಾಗಿದೆ. ಈ ಪುರಾಣ ಕನ್ನಡನಾಡಿನ ಮನೆ

ಮನೆಗಳನ್ನು, ಮಠ-ಮಾನ್ಯಗಳನ್ನು, ಮುಖ್ಯವಾಗಿ ಮನಮನಗಳನ್ನು ಪ್ರವೇಶಿಸ-ಲೆಂದು ಹಾರೈಸುವೆ.

## ಕೊನೆಯ ನುಡಿ

ದೇವಾಲಯವನ್ನು ಪ್ರವೇಶಿಸುವ ಭಕ್ತರಿಗೆ, ಮಹಾದ್ವಾರವಾವುದೆಂದು ಗೊತ್ತಿದ್ದರೂ, ಅಲ್ಲಿ ನಿಂತ ದ್ವಾರಪಾಲಕ, ಸ್ವಾಗತಿಸಿ, ದಾರಿ ತೋರುವಂತೆ, ಈ ಮಡಿವಾಳೇಶ್ವರ ಪುರಾಣಕ್ಕೆ 'ಪ್ರವೇಶ' ನುಡಿಯೊಂದನ್ನು ಬರೆಯಲು ಶ್ರೀ ಸಂಸ್ಥಾನ ಕಲ್ಮಠದ ಒಡೆಯರಾದ ಶ್ರೀ ನಿ. ಪ್ರ. ಸ್ವ. ಗುರುಸಿದ್ಧಸ್ವಾಮಿಗಳು ಆಶೀರ್ವಾದ ರೂಪದ ಆದೇಶವನ್ನು ನೀಡಿದರು. ಕೈಂಕರ್ಯದಿಂದ ತಲೆಬಾಗಿದೆ. ಈ ಪುಣ್ಯ ಕಾರ್ಯವನ್ನು ಶಿರಸಾವಹಿಸಿ ನಡೆಯಿಸುವ ಭಕ್ತಿ-ಶಕ್ತಿಯನ್ನು ಶ್ರೀ ಮಡಿವಾಳೇಶ್ವರರೇ ದಯಪಾಲಿಸಿರುವರೆಂದು ನಂಬಿರುವೆ. ಪುರಾಣ ಗರ್ಭಗುಡಿಯನ್ನು ನೇರವಾಗಿ ಪ್ರವೇಶಿಸಲು ಸಮರ್ಥರಾಗದ ಭಕ್ತರಿಗೆ ನನ್ನ ಈ ನುಡಿ 'ನಡೆನುಡಿ'. ನನ್ನ ಈ 'ಮಡಿವಾಳಿಕೆ'ಯಲ್ಲಿ ಕುಂದು-ಕೊರತೆಗಳಿದ್ದರೆ ಆ ಮಡಿವಾಳೇಶ್ವರನೇ ಇದ್ದಾನೆ ನನ್ನ ರಕ್ಷೆಗೆ

"ಶಿವಪ್ರಸಾದ"
ಕಲ್ಯಾಣನಗರ, ಧಾರವಾಡ-೭ ಎಸ್. ಎಂ ವೃಷಭೇಂದ್ರಸ್ವಾಮಿ
ದಿ. ೨೯-೧೦-೧೯೭೮

## ಈ ಪುರಾಣದ ಪ್ರಕಟನೆಗಾಗಿ ಕಾಣಿಕೆ ಸಲ್ಲಿಸಿದವರು



೨೫೦ ರೂ. ಶ್ರೀ ರಾವಸಾಹೇಬ ಬಾಪುಸಾಹೇಬ ಕಿತ್ತೂರಕರ
೨೫೧ ,, ರುದ್ರಪ್ಪನವರು ಕರಿಬಸಪ್ಪ ದೇಸಾಯರು ಹಂಗರಕಿ
೨೫೦ ,, ಬಸವರಾಜ ದೇಸಾಯರು ಹಂಗರಕಿ
೨೦೧ ,, ಗಂಗಾಧರ ಸಂಗಪ್ಪ ಗಿರಿಗೌಡ್ರ, ನಂದಗಡ
೨೦೧ ,, ಈರಯ್ಯ ಅಂಕಲಗಿ, ದೇಗಲೊಳ್ಳಿ
೧೦೧ ,, ಬಾಳಾಸಾಹೇಬರು ಇನಾಮದಾರ
೧೦೧ ,, ಶಿವನಪ್ಪ ಚನಬಸಪ್ಪ ಹಂಚಿನಮನಿ
೧೦೧ ಶ್ರೀಮತಿ ನೀಲಾಂಬಿಕಾ ಕೋಂ ಮಲ್ಲಪ್ಪಣ್ಣ ಹೊಸಮನಿ, ಖಾನಾಪೂರ
೧೦೧ ಶ್ರೀ ಚಂದ್ರಪ್ಪ ಗುರುಪಾದಪ್ಪ ವಾಲಿ, ನಂದಗಡ
೧೦೧ ,, ಮಲ್ಲಪ್ಪ ದ. ಶಿರಗಾಪೂರ
೫೧ ,, ಬಸಪ್ಪ ವಿರುಪಾಕ್ಷಪ್ಪ ಮಾರಿಹಾಳ
೫೧ ,, ಶಂಕರಪ್ಪ ವೀರಭದ್ರಪ್ಪ ದಡ್ಡಿ
೫೧ ,, ವಿರುಪಾಕ್ಷಪ್ಪ ಗುರಪ್ಪ ಮಾರಿಹಾಳ
೫೧ ,, ಗುರಪ್ಪ ಚ. ಕೊಡೊಳ್ಳಿ
೫೧ ಶ್ರೀಮತಿ ನೀಲಮ್ಮ ಕೋಂ ಗುರುಸಿದ್ಧಯ್ಯಾ ಕಲ್ಮಠ
೫೧ ಶ್ರೀ ಬಸಪ್ಪಣ್ಣ ಚ. ತೇಗೂರ
೫೧ ,, ವಿರುಪಾಕ್ಷಪ್ಪ ಚನ್ನಪ್ಪ ಹಂಜಿ
೫೧ ,, ದಳವಾಯಿ ಬಂಧುಗಳು
೫೧ ,, ವಿಶ್ವನಾಥ ದುಂಡಪ್ಪ ಇನಾಮದಾರ
೫೧ ,, ಎಸ್. ವ್ಹಿ. ನಾಗಶೆಟ್ಟಿ
೫೧ ., ಚನಬಸಪ್ಪ ಬಸವಣ್ಣೆಪ್ಪ ಬೆಲ್ಲದ
೫೧ ,, ಗುರುಸಿದ್ಧಪ್ಪ ನಾಗಪ್ಪ ಅಳೇನವರ
೫೧ ,, ಬಸವಂತಪ್ಪ ಗಂಗಪ್ಪ ನಿರಡಿ
೫೧ ,, ಸೊಮಿತ್ರಪ್ಪ ಶಿವಲಿಂಗಪ್ಪ ಶೆಟ್ಟರ, ಮುರಗೋಡ
೫೧ ಡಾ. ಸುಭಾಸ ಪಾಟೀಲರು,
೫೮೮ ಜನರಲ್ ವರ್ಗಣಿ (ಇತರರಿಂದ)

# ಪ ರಿ ವಿ ಡಿ



## ಶ್ರೀ ಶಿವಯೋಗಿ ಮಡಿವಾಳೇಶ್ವರ ಪುರಾಣ

# ಶ್ರೀ ಗರಗದ ಮಡಿವಾಳೇಶ್ವರ ಪುರಾಣದ ಕಥಾಸಾರ

## ಪೀಠಿಕಾ ಸಂಧಿ



ಕವಿಗಳು ಪ್ರಾರಂಭದಲ್ಲಿ ಗುರುಸ್ತುತಿಯನ್ನು ಮಾಡಿ, ನಂತರ ಶಿವ, ಪಾರ್ವತಿ, ವೀರಭದ್ರ, ಗಣಪತಿ, ನಂದಿ, ಸರಸ್ವತಿ,ಅಲ್ಲಮಪ್ರಭು, ರೇಣುಕಾಚಾರ್ಯ, ಬಸವೇಶ್ವರ, ಚೆನ್ನಬಸವೇಶ್ವರ, ತಮಗೆ ಉಪದೇಶ ಕೊಟ್ಟ ಗುರು ಪಡ್ಡಿಯ ಶ್ರೀಮಹಾಲಿಂಗೇಶ್ವರ, ವಿದ್ಯಾಗುರು ದಾವಣಗೆರೆಯ ಲಿಂ, ಚಂದ್ರಶೇಖರಶಾಸ್ತ್ರಿ ಇವರನ್ನು ಅನುಕ್ರಮದಿಂದ ಸ್ತುತಿಸಿದ್ದಾರೆ.

ಒಮ್ಮೆ ಸವದತ್ತಿ ಶ್ರೀ ಮಹಾಲಿಂಗೇಶ್ವರ ಸ್ವಾಮಿಗಳು ಹಾಗೂ ಯಕ್ಕುಂಡಿ ಶ್ರೀ ಸಿದ್ಧರಾಮೇಶ್ವರಸ್ವಾಮಿಗಳು ಒಂದೆಡೆಗೆ ಕೂಡಿದಾಗ ಕವಿಗಳು ಅವರ ದರ್ಶನಕ್ಕೆ ಹೋಗುವ ಸುಪ್ರಸಂಗ ಒದಗಿತು. ಆಗ ಉಭಯ ಶ್ರೀಗಳು ಕವಿಗಳಿಗೆ ಶ್ರೀ ಗರಗದ ಮಡಿವಾಳೇಶ್ವರ ಪುರಾಣವನ್ನು ರಚಿಸಬೇಕೆಂದು ಅಪ್ಪಣೆ ಕೊಡಿಸಿದ ಪ್ರಕಾರ ಈ ಪುರಾಣವನ್ನು ರಚಿಸಿದುದಾಗಿ ಕವಿಗಳು ಹೇಳಿದ್ದಾರೆ.

ಕವಿಗಳು ತಮ್ಮ ವಂಶದ ಸೂತ್ರಗೋತ್ರಗಳನ್ನು ಈ ರೀತಿಯಾಗಿ ಹೇಳುತ್ತಾರೆ. "ರೇಣುಕಶಾಖೆ, ವೀರಗೋತ್ರ, ಪಡಿವಿಡಿಸೂತ್ರ, ಏಕಾಕ್ಷರಪ್ರವರ-ಪಂಚಾಕ್ಷರರೆಂಬವರ ಮಗನಾದ ನಾನು ಶರಣರೂಳಿಗದಾಳು ಸದಾಶಿವಕವಿಯು, ಇತ್ಯಾದಿ."

ಕವಿಗಳು ತಮ್ಮ ಕಾವ್ಯದಲ್ಲಿ ಪ್ರಶಂಸನೀಯವಾದ ಪ್ರಾಸ, ಗಣ, ನಿಯಮ, ಲಕ್ಷಣಗಳಿಲ್ಲದಿದ್ದರೂ ಓದುಗರ ಬುದ್ಧಿಗೆ ಸಾಕಷ್ಟು ಚಮತ್ಕಾರವನ್ನುಂಟು ಮಾಡುವಷ್ಟು ಅದು ಸುಶ್ರಾವ್ಯವಾಗಿರುವುದೆಂಬುದಾಗಿ ಬಣ್ಣಿಸಿದ್ದಾರೆ.

ಆಮೇಲೆ ಕವಿಗಳು ಕೆರೆಯ ಪದ್ಮರಸ, ಕಾಳಿದಾಸ, ಹರಿಹರ, ಶಿವಲೆಂಕ, ರಾಘವಾಂಕ, ಭೀಮ, ರನ್ನ, ಜನ್ನ, ಹೊನ್ನ, ಪಂಪ, ಷಡಕ್ಷರ, ಲಕ್ಷ್ಮೀಶ, ಚನ್ನಕವಿ, ಮಲ್ಲಿಕಾರ್ಜುನ, ಬಸವಕವಿ ಮುಂತಾದವರನ್ನು ಹೊಗಳಿದ್ದಾರೆ.

ಪರರಲ್ಲಿ ಅಲ್ಪಸ್ವಲ್ಪ ಗುಣಗಳಿದ್ದರೂ ಅವುಗಳನ್ನು ಪರ್ವತಪ್ರಾಯವಾಗಿ ಕಾಣುವದು ಉದಾರ ಹೃದಯಿಗಳ ಲಕ್ಷಣವಾದ್ದರಿಂದ ಸಹೃದಯರು ಆ ಭಾವದಿಂದ ಅವಲೋಕಿಸಬೇಕೆಂದು ಹೇಳಿ, ಹಂಸಕ್ಷೀರನ್ಯಾಯದಂತೆ ಕಾವ್ಯಗುಣಗಳನ್ನಷ್ಟೇ ಗ್ರಹಿಸಿ, ದೋಷಗಳನ್ನು ತ್ಯಜಿಸಬೇಕಾಗಿ ಬಿನ್ನವಿಸಿಕೊಂಡಿದ್ದಾರೆ. ಗಿಳಿ ಮರಿಯು

ಮಾವಿನ ಹಣ್ಣಿನ ರಸಿರಸವನ್ನು ಹರ್ಷದಿಂದ ಸವಿಯುವಂತೆ ತಮ್ಮ ಕಾವ್ಯಾಮೃತ ವನ್ನು ಪಂಡಿತ-ಪಾಮರರು ಸೇವಿಸಿ ತಣಿಯಲೆಂದು ಹಾರೈಸಿದ್ದಾರೆ.

ಇಲ್ಲದ್ದನ್ನು ತಾವು ಬರೆದಿಲ್ಲ; ನಿಜವಾಗಿ ಘಟಿಸಿದ ಸಂಗತಿಗಳನ್ನೇ ಬೀಡಿಮಠದ ಶ್ರೀ ರಾಮಲಿಂಗಯ್ಯನವರಿಂದ ಕೇಳಿ, ಮಡಿವಾಳೇಶನು ನುಡಿಸಿದ ಈ ಕಾವ್ಯವನ್ನು ಬರೆದುದಾಗಿ ವ್ಯಕ್ತಮಾಡಿದ್ದಾರೆ. ಕವಿತೆಯನ್ನು ರಚಿಸಲು ಶಿವಾನುಗ್ರಹಬೇಕು. ಅದರಂತೆ ಶರಣರ ಕೃಪಾಬಲವೂ ಇರಬೇಕು; ಅವರ ಮರೆಹೊಕ್ಕು, ಮಡಿವಾಳ ಶಿವಯೋಗೀಶನ ಸತ್ಕೃತಿಯನ್ನು ಎಲ್ಲರ ಮನಂಬುಗುವಂತೆ ನಾನು ಬರೆದೆನೆಂದು ಕವಿ ಗಳು ಹೇಳಿದ್ದಾರೆ. ಈ ಕಾವ್ಯವನ್ನು ಬರೆದವರಿಗೆ, ಓದಿದವರಿಗೆ, ಕೇಳಿದವರಿಗೆ ಸತಿ ಸುತರು ಮೊದಲಾದ ಸಂಪದವುಂಟಾಗಿ ಅವರು ಸುಖವಾಗಿ ನಲಿದಾಡಲೆಂದು ಕವಿಗಳು ಆಶಿಸಿದ್ದಾರೆ.

---

## ೧ ನೆಯ ಸಂಧಿ

## ಮಡಿವಾಳ ಶಿವಯೋಗಿಗಳ ಅವತಾರ

ಕವಿಗಳು ಆದಿಯಲ್ಲಿ ಶಿವಸ್ತುತಿಯನ್ನು ಮಾಡಿ ಕವಿಸಾಂಪ್ರದಾಯದಂತೆ ಸಮುದ್ರ, ಮೇರುಪರ್ವತ, ಭರತಖಂಡದ ನದಿ, ತೀರ್ಥಕ್ಷೇತ್ರ, ಗಿರಿಕಂದರ ಗಗನ ಚುಂಬಿಗಳಾದ ತೆಂಗಿನಮರಗಳು, ಪುಷ್ಪಫಲಭರಿತ ತರುಲತೆಗಳು ಮೊದಲಾದ ನಿಸರ್ಗ ಸೌಂದರ್ಯವನ್ನು ಸೊಗಸಾಗಿ ಬಣ್ಣಿಸಿದ್ದಾರೆ. ತದನಂತರ ಭಾರತಕ್ಕೆ ಸ್ವಾತಂತ್ರ್ಯವನ್ನು ತಂದುಕೊಟ್ಟ ಮಹಾತ್ಮಾ ಗಾಂಧಿ, ಜವಾಹರಲಾಲ ನೆಹರು, ಸುಭಾಸಬೋಸ, ಮುಂತಾದವರನ್ನು ಹೊಗಳಿದ್ದಾರೆ. ಭಾರತದಲ್ಲಿಯ ಜ್ಞಾನಿ, ಮೌನಿ, ವಿಜ್ಞಾನಿ, ಸೇನಾನಿ, ಸಾಧುಸಂತರು ಮೊದಲಾದವರ ನಾಮನಿರ್ದೇಶಮಾಡಿ ಬಳಿಕ ಕರ್ನಾಟಕ ದೇಶಕ್ಕೆ ಬರುವರು. ಕರ್ನಾಟಕದ ಬಾಳೆ-ತೆಂಗುಗಳ ತೋಟ, ಹರಿವ ಹೊಳೆಹಳ್ಳ, ಕೆರೆಬಾವಿ, ತರುವರಾದಿಗಳನ್ನು ಚೆನ್ನಾಗಿ ಚಿತ್ರಿಸಿರುವರು. ಕರ್ನಾಟಕದ ವಿಸ್ತಾರವು ಕಾವೇರಿಯಿಂದ ಗೋದಾವರಿಯವರೆಗೆ ಇದ್ದಿತೆಂದು ಹೇಳಿ, ಕರ್ನಾಟಕವು 'ಭೂವಧುವು ಹಣೆಗಿಟ್ಟ ಬಾವನ್ನಬೊಟ್ಟಿನಲು ಶೋಭಿಪುದು" ಎಂದು ವರ್ಣಿಸಿರುವರು.

ಇಂಥ ಘನತೆವೆತ್ತ ಕನ್ನಡನಾಡಿನ ಮಧ್ಯದಲ್ಲಿ ಕಿತ್ತೂರೆಂಬ ಸಂಸ್ಥಾನವು ಶೋಭಿ ಸುತ್ತಿರುವದು. ಮಲ್ಲಸರ್ಜ ಎಂಬಾತನು ಆ ಕಿತ್ತೂರ ದೊರೆ. ಆತನಿಗೆ ರುದ್ರಮ್ಮ, ಚೆನ್ನಮ್ಮ ಎಂಬೀರ್ವ ಮಡದಿಯರು. ರುದ್ರಮ್ಮನಿಗೆ ಶಿವಲಿಂಗರುದ್ರಸರ್ಜ ಎಂಬ ಮಗನಿದ್ದನು. ಆತನಿಗೆ 'ಬಾಪೂಸಾಹೇಬ' ಎಂಬ ಬೇರೊಂದು ಹೆಸರಿನಿಂದಲೂ ಕರೆಯುತ್ತಿದ್ದರು. ಮಲ್ಲಸರ್ಜನು ವೀರಭದ್ರನಂತೆ ಪರಾಕ್ರಮಶಾಲಿಯಾಗಿ ಸುಖ ವಾಗಿ ರಾಜ್ಯವಾಳಿಕೊಂಡಿದ್ದನು.

ಒಮ್ಮೆ ಮಲ್ಲಸರ್ಜದೊರೆಯು ಬಳಿಗೆ ಉತ್ತರದೇಶದ ಮಡಿವಾಳ, ವಿರೂಪಾಕ್ಷ, ಗುರುಸಿದ್ಧ ಎಂಬ ಹೆಸರಿನ ಮೂವರು ವೈರಾಗ್ಯ ಮೂರ್ತಿಗಳೂ ಜಂಗಮರೂ ಮತ್ತು ಮತರ್ಜಿ ಅಲ್ಲಿ ಎಂಬ ಫಕೀರನೂ ಬಂದರು: ದೊರೆಯು ಅವರನ್ನು ಇದಿರ್ಗೊಂಡು ಭಯಭಕ್ತಿಯಿಂದ ಕರೆದುಕೊಂಡು ಬಂದು, ಅರಮನೆಯೊಳಗಿರಿಸಿಕೊಂಡು, ಅವರಿಗೆ ವರಭೋಜ್ಯಗಳನ್ನಿತ್ತು, ಅವರ ಯೋಗಕ್ಷೇಮವನ್ನು ನೋಡಹತ್ತಿದನು. ಹೀಗಿರಲು ಒಮ್ಮೆ ಹುಬ್ಬಳ್ಳಿಯ ಕೆಲವು ಸದ್ಭಕ್ತರು ದೊರೆಯ ಬಳಿಗೆ ಬಂದು, ಆ ಮೂರು ವಿರಕ್ತ-ರಲ್ಲೊಬ್ಬರನ್ನು ತಮ್ಮಲ್ಲಿಗೆ ಕಳಿಸಿಕೊಡಬೇಕೆಂದು ಬೆಸಗೊಳ್ಳಲು, ಮಲ್ಲಸರ್ಜರು ಗುರುಸಿದ್ಧಯೋಗಿ ಎಂಬವರನ್ನು ಅಲ್ಲಿಗೆ ಕಳಿಸಿಕೊಟ್ಟರು. ಕೆಲದಿನಗಳ ಮೇಲೆ ಉಪ್ಪಿನಬೆಟಗೇರಿಯ ಭಕ್ತರು ದೊರೆಗೆ ಬಿನ್ನವಿಸಿಕೊಂಡು ವಿರೂಪಾಕ್ಷಚರಮೂರ್ತಿಗಳನ್ನು ಕರೆದೊಯ್ದರು. ಮತರ್ಜಿ ಅಲ್ಲಿ ಎಂಬಾತನನ್ನು ಕಿತ್ತೂರಿನ ಮುಸಲ್ಮಾನರು ಬೇಡಿಕೊಂಡು ತಮ್ಮಲ್ಲಿಗೆ ಕರೆದುಕೊಂಡು ಹೋದರು. ಮಡಿವಾಳ ಶಿವಯೋಗಿಗಳನ್ನೆಲ್ಲಿಗೂ ಕಳಿಸದೆ ಉತ್ತಮವಾದುದೊಂದು ಮಠ ಕಟ್ಟಿಸಿಕೊಟ್ಟು, ದೊರೆಯು ಕಿತ್ತೂರಿನಲ್ಲಿಯೇ ಇರಿಸಿಕೊಂಡನು.

ಬಳಿಕ ಕವಿಗಳು ಮಡಿವಾಳಶಿವಯೋಗಿಯ ನಿತ್ಯಕ್ರಿಯೆಗಳನ್ನು ಹೃದಯಂಗಮವಾಗಿ ಬಣ್ಣಿಸುವರು. ನಸುಕಿನಲ್ಲಿ ಲಿಂಗಯ್ಯನನ್ನೆಬ್ಬಿಸುವ ಸನ್ನಿವೇಶವು ಅವರ ಹೃದಯತುಂಬಿ ಬಂದಂತಿದೆ. ಪ್ರಾತರ್ವಿಧಿಯ ತೀರಿಸಿ, ಉಪವನದಿಂದ ಪತ್ರ ಪುಷ್ಪಾದಿಗಳನ್ನೆತ್ತಿತಂದು ಸೊಗಸಾಗಿ ಲಿಂಗಾರ್ಚನೆ ಮಾಡುವದು ಅವರ ನಿತ್ಯಕೃತ್ಯ. ಒಮ್ಮೆ ಶಿವಯೋಗಿಗಳು ಹೂದೋಟಕ್ಕೆ ಹೊರಟಿರುವಾಗ ಒಂದು ಕಡೆ ಕೂಸಿನ ಅಳುವ ಸ್ವರವು ಕೇಳಿಸಿತು. ಅಲ್ಲಿಗೆ ಹೋಗಿ ನೋಡಲು ಸುಂದರನಾದ ಕಂದಯ್ಯನು ಅಂಗಾತ ಮಲಗಿರುವುದನ್ನು ಕಂಡು ಆನಂದಭರಿತರಾದರು. ಆ ಕೂಸನ್ನು ನೋಡಿದ ಕೂಡಲೆ ಅವರಿಗೆ ಪರಶಿವನೇ ಶಿಶುರೂಪದಿಂದ ಮೈದೋರಿಹನೆಂಬ ಭ್ರಾಂತಿಯುಂಟಾಯಿತು. ಆಮೇಲೆ ಆ ಶಿಶುವನ್ನು ಅವರು ಮಡಿಲೊಳಗೆ ಕಟ್ಟಿಕೊಂಡು ಅರಮನೆಗೆ ಬಂದು, ಲಿಂಗಸಂಸ್ಕಾರ ಮಾಡಿ, ಹಣೆಗೆ ಭಸ್ಮವ ತೊಡೆದು ಮಲ್ಲಸರ್ಜರವಶಕ್ಕೆ ಒಪ್ಪಿಸಿದರು. ದೊರೆಯು ಹಿರಿಹಿರಿ ಹಿಗ್ಗಿ ಕೂಸನ್ನೆತ್ತಿ ಮುದ್ದಾಡಿ, ತನ್ನ ರಾಣಿಯಾದ ರುದ್ರಮ್ಮನಿಗೆ ಆ ಕೂಸಿನ ಪಾಲನ ಪೋಷಣ ಮಾಡಲು ಒಪ್ಪಿಸಿದನು. ರಾಣಿಯು ಆ ಶಿಶುವನ್ನು ತನ್ನ ಸ್ವಂತ ಕುಮಾರನ ಜೊತೆಗೆ ಬಹು ಪ್ರೀತಿಯಿಂದ ಜೋಪಾನ ಮಾಡಿದಳು. ಆ ಶಿಶುವು ಮಡಿವಾಳ ಶಿವಯೋಗಿಗಳಿಂದ ಪ್ರಾಪ್ತವಾದ್ದರಿಂದ ದೊರೆಯ ಅಪ್ಪಣೆಯ ಮೇರೆಗೆ ಆ ಶಿಶುವಿಗೆ ಮಡಿವಾಳನೆಂಬ ನಾಮಕರಣವಾಯಿತು.

———

## ಮಡಿವಾಳೇಶ್ವರನ ಬಾಲಲೀಲೆ

ರಾಣಿ ರುದ್ರಮ್ಮನ ಪೋಷಣೆಯಲ್ಲಿ ಬೆಳೆಯುತ್ತ ಆ ಶಿಶುವು ಆಕೆಯ ಕಣ್ಮಣಿಯಾಯಿತು. ಸ್ವಂತಮಗನಾದ ಶಿವಲಿಂಗರುದ್ರಸರ್ಜನಗಿಂತಲೂ ಹೆಚ್ಚಾಗಿ ಮಮತೆಯಿಂದ ಸಲುಹಿದಳು. ಹೀಗೆ ಶಿಶುವಿಗೆ ೪-೫ ವರ್ಷಗಳು ಗತಿಸಿದವು. ಆದರೆ ಬಾಲಕನು ಜಾಣನಾಗುವ ಬದಲು ಹೆಚ್ಚೆಚ್ಚು ತುಂಟನಾಗಹತ್ತಿದನು. ಮಲ್ಲಸರ್ಜರು ಆತನಿಗೆ ಕ್ಷುದ್ರಹುಡುಗರೊಡನೆ ಆಡಬೇಡೆಂದು ಆಗಾಗ್ಗೆ ಬುದ್ಧಿ ಹೇಳುತ್ತಿದ್ದರು. ಆತನು ದಿನಾಲು ನೀಚ ಹುಡುಗರೊಡನೆ ಜಗಳಾಡಿ ಹೊಡೆಬಡಿಯುವದನ್ನು ಮಾಡುತ್ತಿದ್ದುದರಿಂದ ಬೇಸತ್ತು, ಕಡೆಗೆ ಮಲ್ಲಸರ್ಜರು ಆತನನ್ನು ಕಲ್ಮಠದ ಪ್ರಭುದೇವರ ಮಠಕ್ಕೆ ಕೊಟ್ಟುಬಿಟ್ಟರು. ಅಷ್ಟರೊಳಗೆ ಆ ಮಠದ ಮಡಿವಾಳ ಶಿವಯೋಗಿಗಳು ಲಿಂಗೈಕ್ಯರಾಗಿದ್ದುದರಿಂದ ಪ್ರಭುದೇವರು ಮಠಾಧಿಪತಿಗಳಾಗಿದ್ದರು. ಪ್ರಭುದೇವರು ಮಡಿವಾಳ ಬಾಲಕನನ್ನು ಪರನಾಜ್ಞೆಯಿಂದವತರಿಸಿದ ದಿವ್ಯ ಮೂರ್ತಿಯೆಂದೇ ಭಾವಿಸಿದರು.

ಮಠಕ್ಕೆ ಬಂದಮೇಲೆ ಮಡಿವಾಳಮರಿಯ ತುಂಟತನವು ಮತ್ತಿಷ್ಟು ಹೆಚ್ಚಾಯಿತು. ಆಡುವ ಹುಡುಗರ ಗುಂಪು ಕಂಡಲ್ಲಿ ಹೋಗಿ ಅವರ ಆಟವನ್ನು ಕೆಡಿಸಿ ಅವರ ಚಂಡಿಗೆ ಕೈಕೊಟ್ಟು ನೂಕಿ, ನೆತ್ತಿಯಮೇಲೆ ಒಂದೆರಡು ಏಟು ಕೊಟ್ಟು, ಓಡಿಹೋಗುತ್ತಿದ್ದನು. ಇದರಿಂದ ಸಾತ್ವಿಕಗುಣಶಾಲಿಗಳಾದ ಪ್ರಭುದೇವರ ಮನಸ್ಸು ನೊಂದುಕೊಂಡಿತು. ಬಾಲಕನು ಪ್ರಭುದೇವರಿಗೆ 'ಬಾಬಾ' ಎಂದು ಸಂಬೋಧಿಸುತ್ತಿದ್ದನು. ಮಡಿವಾಳಬಾಲಕನ ಚೇಷ್ಟೆಗಳು ಜಡಮತಿಗಳಿಗೆ ಒರಟುತನವಾಗಿ ಕಂಡರೂ ಅರಿವುಳ್ಳವರಿಗೆ ಅವು ಅರ್ಥಪೂರ್ಣವಾಗಿ ಕಾಣುತ್ತಿದ್ದವು.

ದೊರೆ ಮಲ್ಲಸರ್ಜರು ಹಾನಗಲ್ಲ ವೆಂಗಿ ಚನ್ನಬಸವಪ್ಪಶಾಸ್ತ್ರಿಗಳು ಘನಪಂಡಿತರೆಂದು ಜನರ ಬಾಯಿಂದ ಕೇಳಿ, ಅವರನ್ನು ಮಡಿವಾಳಮರಿಗೆ ವಿದ್ಯೆಕಲಿಸಲಿಕ್ಕೆ ಕರೆಯಿಸಿಕೊಂಡರು. ಮೈಸೂರ ರಾಜಸಭೆಯೊಳಗೆ ಚನ್ನಬಸವಪ್ಪಶಾಸ್ತ್ರಿಗಳಿಗೆ ಸರಿಯಾದವರು ಯಾರೂ ಇಲ್ಲವೆಂದು ಕೀರ್ತಿಹಬ್ಬಿತ್ತು. ಶಾಸ್ತ್ರಿಗಳು ಸಾಹಿತ್ಯ, ನ್ಯಾಯ, ವೇದಾಂತ, ವ್ಯಾಕರಣಗಳಲ್ಲಿ ಎತ್ತಿದ ಕೈಯಾಗಿದ್ದರು. ಈ ಶಾಸ್ತ್ರಿಗಳ ಮಡದಿ ನಾಗಲಾಂಬಿಕೆಯೆಂಬ ಸಾಧ್ವಿಯು ಮಹಾಪತಿವ್ರತೆಯೂ, ಲಿಂಗಪೂಜಾನಿಷ್ಠಳೂ, ಸುಶೀಲಳೂ, ದಯಾಭರಿತಳೂ ಆಗಿದ್ದಳು. ಪ್ರಭುದೇವರು ಮಡಿವಾಳ ಮರಿದೇವರನ್ನು ಅವಳ ವಶಕ್ಕೆ ಒಪ್ಪಿಸಿದರು. ಆಕೆಯು ಆ ಬಾಲಕನನ್ನು ಹೊಟ್ಟೆಯ ಮಗನಂತೆ ಪ್ರೇಮದಿಂದ ಉಣಿಸಿ ತಿನಿಸಿ ಬೆಳೆಸಿದಳು.

ಮಡಿವಾಳ ಮರಿದೇವರು ತನ್ನ ತುಂಟ ಸ್ವಭಾವಕ್ಕನುಸರಿಸಿ ಹುಡುಗರಿಗೆ ಬಹಳ ಉಪದ್ರವ ಕೊಡಲಾರಂಭಿಸಿದನು. ಜನರು ಬಂದು ಪ್ರಭುದೇವರಿಗೆ ದೂರು

ಹೇಳಹತ್ತಿದರು, ಪ್ರಭುದೇವರು ಬೇಸತ್ತು ಆತನನ್ನು ಒಂದು ಕೋಣೆಯೊಳಗೆ ಹೊಗಿಸಿ ಬೀಗಹಾಕಿದರು. ಆಗ ರುದ್ರಕವಿಯೆಂಬ ಹೆಸರಿನ ವರಕವಿಗಳೊರ್ವರು ಮಡಿವಾಳ ಬಾಲಕನನ್ನು ನೋಡಬಯಿಸಿ ಅಲ್ಲಿಗೆ ಬಂದರು. ಆ ಬಾಲಕನನ್ನು ಅವರಿಗೆ ತೋರಿಸಬೇಕೆಂದು ಪ್ರಭುದೇವರು ಕೋಣೆಯ ಬಾಗಿಲ ತೆರೆಯಲಾಗಿ ಮಡಿವಾಳ ಮರಿದೇವರು ಅಲ್ಲಿರಲಿಲ್ಲ ಅವರಿಗೆ ಆಶ್ಚರ್ಯವಾಯಿತು. ಅವರು ಗಾಬರಿಗೊಂಡು ಅತ್ತಿತ್ತ ಬಾಲಕನನ್ನು ಹುಡುಕುತ್ತಿರಲು ನಾಗಲಾಂಬಿಕೆಯು ಬಂದು, "ಬುದ್ಧೀ, ಮಡಿವಾಳ ಮರಿದೇವರು ಮನೆಯಲ್ಲಿ ಊಟಕ್ಕೆ ಕುಳಿತಿರುವನೆಂದು ಹೇಳಿದಳು. ಒಳಗೆ ನೋಡಲ್ಕೆಂದು ಪ್ರಭುದೇವರು ಹೋದಾಗ, ಅದೇ ಊಟ ಮುಗಿಸಿ ಓಡಿ ಬಂದು 'ಬಾಬಾ'ಯೆಂದು ತೆಕ್ಕೆಬೀಳಲು ಪ್ರಭುದೇವರು ಆತನನ್ನು ಪಿಡಿದೆತ್ತಿ ಮುದ್ದಾಡಿ ಆನಂದಾಶ್ರುಗಳನ್ನುದುರಿಸಿದರು.

ಆಗ ಪ್ರಭುದೇವರಿಗೆ ಮಡಿವಾಳ ಮರಿದೇವರು ಪರಶಿವನೇ ಬಾಲಕನಾಗಿ ಭೂಮಿಗೆ ಬಂದಂತೆ ಭಾಸವಾಯಿತು. ಮಣ್ಣುತಿಂದ ಬಾಲಕೃಷ್ಣನಿಗೆ ಆತನ ತಾಯಿಯು 'ಬಾಯಿ ತೆರೆ, ನೋಡುವಾ' ಎಂದು ಹೇಳಿದಾಗ ಆತನು ಬಾಯಿ ತೆರೆಯಲು ಇಡೀ ಬ್ರಹ್ಮಾಂಡವೇ ಆತನ ಬಾಯಿಯಲ್ಲಿ ಕಾಣಿಸಿದಂತೆ, ಪ್ರಭುದೇವರ ಕಣ್ಣಿಗೆ ಮಡಿವಾಳ ಬಾಲಕನು ಲಿಂಗರೂಪಾಗಿ ಕಂಡನು. ನೋಡಬಂದ ರುದ್ರಕವಿಯು ಆ ಬಾಲಕನು ರುದ್ರರೂಪನೆಂದೂ, ಕಿತ್ತೂರ ಜನರ ಅಜ್ಞಾನಾಂಧಕಾರವನ್ನು ಹೊಡೆದೋಡಿಸುವ ರವಿಯೆಂದೂ ಬಣ್ಣಿಸಿದನು. ಒಂದು ದಿನ ಮಡಿವಾಳ ಮರಿಯು ತೋಟವನ್ನೊಳಹೊಕ್ಕು ಅತ್ತಿತ್ತ ಅಡ್ಡಾಡುವಾಗ ಒಂದು ನಾಗರಹಾವು ಸಳಸಳನೆ ಹರಿದಾಡುತ್ತ ಮುಂದೆ ಬಂದಿತು. ಬಾಲಕನು ಅದಕ್ಕೆ ಹೆದರದೆ ಅದರ ಬಾಲಹಿಡಿದು ಅತ್ತಿತ್ತ ಎಳೆದಾಡಹತ್ತಿದನು ಇದನ್ನು ನೋಡಿ ಆತನ ಒಡನಾಡಿಗರು ಮಠಕ್ಕೆ ಬಂದು ಈ ವೃತ್ತಾಂತವನ್ನು ಪ್ರಭುದೇವರಿಗೆ ಅರಿಕೆಮಾಡಿಕೊಂಡರು. ಪ್ರಭುದೇವರು ಅಲ್ಲಿಗೆ ಧಾವಿಸಿ ಬರಲು ಬಾಲಕನು "ನೋಡು ಬಾಬಾ"ಯೆಂದು ಹಾವನ್ನೆತ್ತಿಹಿಡಿದು ತೋರಿಸಿದನು. ಪ್ರಭುದೇವರು ಹಾವನ್ನು ಬಿಟ್ಟುಬಿಡೆಂದು ಹೇಳಿ, ಆತನನ್ನು ಮಠಕ್ಕೆ ಕರೆತಂದರು. ನಾಗಲಾಂಬಿಕೆಯು ಮಗುವಿನ ಬಾಲಲೀಲೆಯನ್ನು ಕೇಳಿ, ಹಿಗ್ಗಿ, ಬಿಗಿದಪ್ಪಿದಳು. ಘಟ ಸರ್ಪವನ್ನು ಹಿಡಿದಾಡಿಸಿದ ಸುದ್ದಿಯು ತೀವ್ರ ಊರ ತುಂಬೆಲ್ಲಾ ಹಬ್ಬಿತು. ಜನರು ಈ ಬಾಲಕನು ಅಘಟಿತ ಘಟನಾ ಸಮರ್ಥನೆಂದು ಭಾವಿಸಿ ತಮ್ಮ ಭಕ್ತಿಯನ್ನು ವ್ಯಕ್ತಪಡಿಸಿದರು.

ಒಮ್ಮೆ ಶ್ರಾವಣಮಾಸದಲ್ಲಿ ಗೋಕಾವಿಯ ಕಡೆಯಿಂದ ಪಟ್ಟಚರಮೂರ್ತಿಗಳೊಬ್ಬರು ಪ್ರಭುದೇವರ ದರ್ಶನಕ್ಕೆಂದು ದಯಮಾಡಿಸಿದರು. ಅವರು ಸ್ನಾನಮಾಡಿ ಲಿಂಗಪೂಜೆಗೆ ಕುಳಿತಾಗ ಮಡಿವಾಳ ಮರಿದೇವರು ಅವರ ಹಸ್ತದೊಳಗಿನ ಲಿಂಗವನ್ನು ಸಪ್ಪಳಿಲ್ಲದೆ ಬಂದು ಕದ್ದುಕೊಂಡು ಓಡಿಹೋದರು. ಅದನ್ನು ನೋಡಿ ಪ್ರಭುದೇವರು

"ಎಲೋ, ಲಿಂಗವನ್ನು ಕೊಡು, ಕೊಡು" ಎನ್ನುತ್ತ ಬೆಂಬತ್ತಿದರು ಆಗ ಮಡಿವಾಳ ಬಾಲಕನು ಓತ್ತಲ ಬಾವಿಯಲ್ಲಿ ಹಾರಿಕೊಂಡು ಮುಳುಗಿಬಿಟ್ಟನು. 'ಅಯ್ಯೋ, ಹುಡುಗನು ಬಾವಿಯಲ್ಲಿ ಬಿದ್ದನು; ಬನ್ನಿರಿ ಬನ್ನಿರಿ' ಎಂಬ ಹುಯ್ಯಲವೇಳಲು ಎಲ್ಲರೂ ಅಲ್ಲಿ ನೆರೆದರು. ನಾಗಲಾಂಬಿಕೆಯೂ 'ಅಯ್ಯೋ, ನನ್ನಮಗನೇ' ಎಂದು ಹೌಹಾರಿ ರೋದಿಸಹತ್ತಿದಳು. ಅಷ್ಟರಲ್ಲಿ ಯಾವ ಮಾಯೆಯಿಂದಲೋ ಮಡಿವಾಳನು ಅಲ್ಲಿಗೆ ಬಂದು 'ಯಾಕೆ ಅಳುತ್ತೀಯಮ್ಮಾ?' ಎಂದು ಬಿಗಿದಪ್ಪಿದನು. ಆಗ ಹುಡುಕುತ್ತಿದ್ದ ಜನರೆಲ್ಲ ಹೊರಳಿ ಆ ತಾಯಿಯ ಕಂಕುಳೊಳಗಿರುವ ಮಗುವನ್ನು ನೋಡಿ ಸಾನಂದಾಶ್ಚರ್ಯಪಟ್ಟರು. ಪ್ರಭುದೇವರು 'ಲಿಂಗವೆಲ್ಲಿದೆ? ಕೊಡು' ಎಂದು ಕೇಳಲು ಆತನು ಪಟ್ಟದಾರ್ಯರ ಕೈಯಲ್ಲಿದೆಯೆಂದನು ಅವರು ಎಂದಿನಂತೆ ಲಿಂಗಪೂಜೆಯನ್ನು ಅದೇ ಮುಗಿಸಿ ಹೊರಗೆ ಬಂದರು. ಎಲ್ಲರಿಗೂ ಮತ್ತಿಷ್ಟು ಆಶ್ಚರ್ಯವಾಯಿತು. ಅವರು ಆ ಬಾಲಕನ ಮಹಿಮೆಯನ್ನು ಕೊಂಡಾಡುತ್ತ ತಮ್ಮ ತಮ್ಮ ಮನೆಗಳಿಗೆ ತೆರಳಿದರು.

ಒಮ್ಮೆ ಮಲ್ಲಸರ್ಜರು ಅಕಸ್ಮಾತ್ ಪ್ರಭುದೇವರ ದರ್ಶನಕ್ಕೆ ಬಂದರು. ಆಗ ಪ್ರಭುಗಳು ಮರಿದೇವರಿಗೆ 'ಅಕೋ, ನಿನ್ನ ತಂದೆಯವರು ಬರುತ್ತಿದ್ದಾರೆ. ಅವರನ್ನು ಗೌರವಿಸಬೇಕು' ಎಂದರು. ಅದಕ್ಕೆ ಮರಿದೇವರು "ಅವನು ನನ್ನ ತಂದೆಯೋ? ನಾನು ಅವನ ತಂದೆಯೋ? ನೀವೇ ಹೇಳಿರಿ ಬಾಬಾ" ಎಂದನು. ಅದನ್ನು ಕೇಳಿ ಮಲ್ಲಸರ್ಜರು ಕಂದನನ್ನು ಬಿಗಿದಪ್ಪಿ 'ಮಹಾಮಹಿಮನೆ, ನೀನು ವಿಶ್ವಕ್ಕೆಲ್ಲ ತಂದೆ ಯಾಗಿರಲು ನಿನಗೆ ನಾನೆಂತು ತಂದೆಯಪ್ಪೆನು?' ಎಂದು ನುಡಿದರು. ಅಲ್ಲದೆ ತಮ್ಮ ಇಷ್ಟವೇನಿದೆ ಹೇಳಬೇಕು, ನಾನು ಕೊಡುವೆನು ಎಂದು ಮರಿದೇವರಿಗೆ ಕೇಳಿದರು. ಅದಕ್ಕೆ ಮರಿದೇವರು ನನಗೆ ಬೊಗಸೆತುಂಬ ಸುವರ್ಣ ನಾಣ್ಯಗಳು ಬೇಕೆಂದರು. ದೊರೆಗಳು ಅಪ್ರಕಾರ ಬೊಕ್ಕಸದಿಂದ ನಾಣ್ಯಗಳನ್ನು ತರಿಸಿಕೊಟ್ಟರು. ಮರಿದೇವರು ಅವುಗಳನ್ನು ಅನಾಥರು, ಬಡಬಗ್ಗರು,ಅಂಗಹೀನರುಗಳಿಗೆಲ್ಲ ಹಂಚಿ ತಾವು ಶಿವಧ್ಯಾನ ದಲ್ಲಿ ಸಂತೋಷ ಚಿತ್ತರಾಗಿರುತಿರ್ದರು. ಈ ಕುಮಾರನು ಕಿರಿಯನಿದ್ದರೂ ಆತನು ಹರನೆಂದೇ ಭಾವಿಸಿ ಜನರು ಭಕ್ತಿಯಿಂದ ನಡೆದುಕೊಳ್ಳುತ್ತಿದ್ದರು.

ಒಂದು ದಿನ ಉತ್ತರದ ಕಡೆಯಿಂದ ಒಬ್ಬ ವಿರಕ್ತ ಮೂರ್ತಿಗಳು ಪ್ರಭು ದೇವರ ದರ್ಶನಕ್ಕಾಗಿ ಬಂದರು. ಪ್ರಭುದೇವರು ಅವರನ್ನು ಕರೆದುಕೊಂಡು ಬಂದು ಉಪಚರಿಸಿ, ಸ್ನಾನಮಾಡಿಸಿ ಲಿಂಗಪೂಜೆಗೆ ಕುಳ್ಳಿರಿಸಿದರು. ಮಡಿವಾಳ ಮರಿ ದೇವರು ಕೆಲ ಹೊತ್ತು ಅವರ ಲಿಂಗಪೂಜೆಯ ಸೊಬಗನ್ನು ನಿರೀಕ್ಷಿಸಿ ಆನಂದಿತರಾಗಿ ಬಳಿಕ ಮೆಲ್ಲನೆದ್ದು ಅವರ ಅಂಗೈಯ ಲಿಂಗವನ್ನು ಸೆಳೆದುಕೊಂಡು ಓಡಹತ್ತಿದರು. ಪ್ರಭುದೇವರು ಬೆತ್ತ ಹಿಡಿದು 'ಲಿಂಗ ಕೊಡು' ಎಂದು ಬೆನ್ನುಹತ್ತಿದರು. ಬಾಬಾ ಅವರು ತನ್ನನ್ನು ಹೊಡೆಯುವರೆಂದು ಅಂಜಿ ತಾಯಿಯಾದ ನಾಗಮ್ಮನ ಬೆನ್ನಹಿಂದೆ

ಅಡಗಿಕೊಂಡಿರಲು ಪ್ರಭುದೇವರು ಅಲ್ಲಿಗೆ ಬಂದು 'ಲಿಂಗವನ್ನು ಕೊಡು, ಇಲ್ಲದಿದ್ದರೆ ಬಡತ ಬೀಳುವವೆಂದು ಗದರಿಸಿದರು. ಜಂಗಮರ ಲಿಂಗವನ್ನು ಕಸಿದು ತಂದದ್ದು ನಾಗಮ್ಮನಿಗೆ ಗೊತ್ತಾಗಿ 'ಜಂಗಮರಿಗೆ ದ್ರೋಹಮಾಡಬಾರದಪ್ಪಾ, ಕೊಡು ಲಿಂಗವನ್ನು, ನಿನಗೆ ಕಲ್ಲುಸಕ್ಕರೆ ಕೊಡುತ್ತೇನೆ' ಎಂದುಸುರಿದಳು. ಅದಕ್ಕೆ ಮರಿದೇವರು 'ಆ ಜಂಗಮ ಮೂರ್ತಿಗಳು ಪೂಜಿಸುವ ಲಿಂಗವು ಜಗವನ್ನೆಲ್ಲ ತುಂಬಿಕೊಂಡಿರುವದು. ನಾನು ಅದನ್ನು ಏತಕ್ಕೆ ತರಲಿ ಬಾಬಾ, ಅವರ ಲಿಂಗವು ಎಡದೊಡೆಯು ಬಟ್ಟೆಯು ಮೇಲಿರುವದು, ನೋಡಿರೆನಲು ಅವರು ಬಂದು ನೋಡುತ್ತಿರಲಿಕ್ಕೆ ವಿರಕ್ತಸ್ವಾಮಿಗಳ ತೊಡೆಯು ಮೇಲಿದ್ದ ಲಿಂಗವು ತಾಕಿ ಪೂಜೆಗನುವಾದರು. ಇದನ್ನು ನೋಡಿ ನಾಗಮ್ಮ, ಪ್ರಭುದೇವರಿಗೆ ಸಾನಂದಾಶ್ಚರ್ಯವಾಯಿತು. ಅವರು ಸಂತೋಷದಿಂದ ಆತನನ್ನು ಬಿಗಿದಪ್ಪಿ ಮುದ್ದಾಡಿದರು.

ಮರಿದೇವರ ವಿದ್ಯಾಭ್ಯಾಸಕ್ಕಾಗಿ ಶ್ರೀ ಚನಬಸವಪ್ಪಶಾಸ್ತ್ರಿಗಳಲ್ಲದೆ ಕೊಳ್ಳಿ ರಂಗಾಚಾರ್ಯ ಎಂಬವರನ್ನು ದೊರೆಗಳು ನೇಮಿಸಿದರು. ಬಾಲಕನ ಪ್ರತಿಭೆ, ಧಾರಣಶಕ್ತಿ, ವಾಕ್ಪಟುತ್ವ, ವೊದಲಾದ ಗುಣಗಳನ್ನು ಕಂಡು ಶಿಕ್ಷಕರು ಬೆಕ್ಕಸಬೆರಗಾದರು. ಅವರು ಕಲಿಸುವ ಸರ್ವ ವಿಷಯಗಳನ್ನೆಲ್ಲ ಮಡಿವಾಳ ಮರಿದೇವರು ಕೆಲವೇ ದಿನಗಳಲ್ಲಿ ಕಲಿತುಬಿಟ್ಟರು. ಇದನ್ನು ಕೇಳಿ ಮಲ್ಲಸರ್ಜನು ಹಿರಿಹಿರಿ ಹಿಗ್ಗಿದನು. ಪೌರಜನಸಮೂಹವು ಸಂತಸಗಡಲಲ್ಲಿ ಮುಳುಗಿತು. ಆದರೆ ಏನೋ ದುರ್ದೈವದಿಂದ ಅರಸುಗುವರನಾದ ಬಾಪೂಸಾಹೇಬನಿಗೆ ಮಡಿವಾಳ ಮರಿದೇವರನ್ನು ಕಂಡರೆ ಆಗುತ್ತಿರಲಿಲ್ಲ. ಅವರನ್ನು ಕಂಡರೆ ಯಾಕೋ ಬೆಂಕಿಯಾಗುತ್ತಿದ್ದನು. ಬಾಪೂಸಾಹೇಬನೂ ಮರಿದೇವರೂ ಸಮಾನವಯಸ್ಕರು. ಇಬ್ಬರಿಗೂ ದೇಸಾಯಿಣಿ ರುದ್ರಮ್ಮನವರು ಮೊಲೆಯುಣಿಸಿ ಪೋಷಣೆಮಾಡಿದ್ದರು. ಒಂದು ದಿನ ಮರಿದೇವರಿಗೆ ಬಾಪೂಸಾಹೇಬನು ಭೆಟ್ಟಿಯಾಗಲು 'ಬಾಪ್ಯಾ, ಬಾರೋ' ಎಂದು ಏಕವಚನದಿಂದ ಕರೆದರು. ಬಾಪೂಸಾಹೇಬನು ಆ ಗ್ರಾಮ್ಯಶಬ್ದಗಳನ್ನು ಕೇಳಿ ಅವಮಾನವಾದಂತಾಗಿ ಮನದಲ್ಲಿ ಸಿಡಿಮಿಡಿಗೊಂಡನು ಶ್ರೀಮಂತನಾದ ತನಗೆ ಈ ಅನಾಥ ಮರಿಯು ಹೀಗೆ ಸಂಬೋಧಿಸಬಹುದೇ? ಎಂದು ರೊಚ್ಚಿಗೆದ್ದನು. ಪಾಪ! ಮಡಿವಾಳ ಮರಿದೇವರ ಮಹಿಮೆಯನ್ನು ಮದಾಂಧನಾದ ಆತನೆತ್ತಬಲ್ಲನು! ಆತನು ಅಹಂಕಾರ ಪೂರಾಯುಗಾಯದಲ್ಲಿ ನೊಂದುಬಿಟ್ಟಿದ್ದನು. ಪ್ರಸಂಗ ಬಂದಾಗ ಈ ಸೇಡನ್ನು ತೀರಿಸಿಕೊಂಡೇ ಬಿಡುವೆ ಎಂದು ಆತನು ಮನದಲ್ಲಿ ನಿರ್ಧರಿಸಿದನು.

ಮರಿದೇವರಿಗೆ ಗಿಡವೇರುವುದು, ಮಲ್ಲಗಾಳಗ ಮಾಡುವುದು, ಜಗಿಯುವುದು, ಸಿಡಿದೋಡುವುದು ವೊದಲಾದ ತುಂಟತನದ ಆಟಗಳು ಸಹಜವಾಗಿದ್ದವು. ಗುರುಗಳು ಆತನಿಗೆ ಕಲಿಹನುಮಂತನೆಂದು ಕರೆಯುತ್ತಿದ್ದರು. ಆದರೂ ಆತನ ಕಲಾಕುಶಲತೆಗೆ, ವಿನಯಶೀಲತೆಗೆ ಅವರು ಬಹುವಾಗಿ ಮೆಚ್ಚಿಕೊಂಡಿದ್ದರು. ಮಲ್ಲಸರ್ಜರಂತೂ

ಮರಿದೇವರ ಪ್ರತಿಭೆ ಪಾಂಡಿತ್ಯಗಳಿಗೆ ಬಹು ಸಂತುಷ್ಟರಾಗಿದ್ದರು. ಒಮ್ಮೆ ಮರಿದೇವರು ಬಹು ಎತ್ತರವಾದ ತೆಂಗಿನಮರದ ತುಟ್ಟತುದಿಯನ್ನೇರಿ ಅಲ್ಲಿಂದ ಕೆಳಗೆ ಟಣ್ಣನೆ ಜಿಗಿದರು. ಏನೂ ಗಾಯವಾಗಲಿಲ್ಲ.

## ೩. ಉಳವಿ ಕಾಶಿಕ್ಷೇತ್ರಗಳಿಗೆ ಪ್ರಯಾಣ

ಒಂದುದಿನ ಬಾಪೂಸಾಹೇಬನು ತಂದೆಯನ್ನು ಕುರಿತು, ಅಪ್ಪಾ, ನನಗೆ ಮಡಿವಾಳ ಮರಿದೇವರು 'ಬಾಪ್ಯಾ' ಎಂದು ಕರೆದು ಅವಮಾನಗೊಳಿಸಿದ್ದಾರೆ. ಅದನ್ನು ನಾನೆಂತೂ ಸೈರಿಸೆನು. ಆತನಿಗೆ ತಕ್ಕ ಶಾಸನವಾಗಲೇಬೇಕು ಎಂದು ಹೇಳಿದನು. ಅದಕ್ಕೆ ಮಲ್ಲಸರ್ಜರು, "ತಮ್ಮಾ, ಮಡಿವಾಳಮರಿದೇವರು ಮಹಾಮಹಿಮಾಶಾಲಿಗಳಾಗಿದ್ದಾರೆ. ಅವರು ನುಡಿದ ನುಡಿ ನಿನಗೆ ಹಿತಕರವೇ ಹೊರತು ಅಹಿತವೆಂದು ತಿಳಿಯಬೇಡ. ನೀನು ಒಣ ದುರಭಿಮಾನಕ್ಕೆ ಬಿದ್ದು ಅವರೊಡನೆ ದ್ವೇಷಕಟ್ಟಿಕೊಳ್ಳಬೇಡ. ಅಂತರಂಗದಲ್ಲಿ ಅವರನ್ನು ಗುರುವೆಂದು ಮನ್ನಿಸು. ಅವರೊಡನೆ ವಿರಸದಿಂದ ನಡೆದುಕೊಂಡರೆ ನಿನಗೆ ಕೇಡು ತಪ್ಪದು. ಔಷಧವು ನಾಲಗೆಗೆ ಕಹಿಯಾದರೂ ರೋಗಕ್ಕೆ ಗುಣಕಾರಿಯಾಗಿರುತ್ತದೆ. ಅವರಂತೆ ಮಹಿಮರಾಡಿದ ನುಡಿಯು ನಿನಗೆ ಕಟುವಾಗಿದ್ದರೂ ಕಲ್ಯಾಣಕರವಾಗೀಯೆ ಇರುವದು" ಎಂದು ಬುದ್ಧಿ ಹೇಳಿದರು. ಮರಣ ಸಮೀಪಿಸಿದ ರೋಗಿಗೆ ಔಷಧವು ಸೇರದಂತೆ ತಂದೆಯ ಹಿತದ ಮಾತುಗಳು ಬಾಪೂಸಾಹೇಬನಿಗೆ ಎಳ್ಳಷ್ಟೂ ಹಿಡಿಸಲಿಲ್ಲ

ಒಂದುದಿನ ಮಲ್ಲಸರ್ಜನದೊರೆಯು ಪ್ರಭುದೇವರನ್ನೂ ಮಡಿವಾಳಮರಿದೇವರನ್ನೂ ಊಟಕ್ಕೆ ಆಮಂತ್ರಣ ಕೊಟ್ಟು ಅರಮನೆಗೆ ಕರೆಯಿಸಿಕೊಂಡನು. ಪ್ರಭುದೇವರ ಹಿಂದೆ ಮರಿದೇವರು ಬರುವಾಗ ಬಾಪೂ ಸಾಹೇಬನು ಅವರನ್ನು ಒಳಗೆ ಬಿಡದೆ ತಡೆದು ನಿಲ್ಲಿಸಿದನು. ಮುಂದೆ ತನಗೆ ಯಾವ ಆಪತ್ತು ಕಾಯ್ದಿದೆಯೆಂಬುವದನ್ನು ಆ ಮದಾಂಧನು ಭಾವಿಸಲಿಲ್ಲ. ಸಿಂಹದಗೂಡ ಬಡನರಿಯು ಸೆಣಸಿ ಬಾಳುವದೇ ? ಬಿರುಗಾಳಿಯ ಮುಂದೆ ತರಗೆಲೆಗಳು ನಿಲ್ಲಬಲ್ಲವೇ ? ಸಂತರು ಉಸುರ್ಗರೆದರೆ ಕುಲಕ್ಷಯವಾಗದಿದ್ದೀತೇ ? ಇದನ್ನು ಆ ಮೂರ್ಖ ಬಾಪೂಸಾಹೇಬನು ಅರಿಯದೆ ಹೋದನು. ಮರಿದೇವರನ್ನು ಬಾಪೂಸಾಹೇಬನು ತಡೆದ ಸಂಗತಿಯನ್ನು ತಿಳಿದು ಪ್ರಭುದೇವರು ಮಲ್ಲಸರ್ಜರಿಗೆ 'ನಿಮ್ಮ ಮಗನು ಶಿವಸ್ವರೂಪರಾದ ಮಡಿವಾಳ ಮರಿದೇವರನ್ನು ತಡೆದು ದ್ರೋಹಕಟ್ಟಿಕೊಂಡು ಕೆಡುಗಾಲಕ್ಕೆ ಆಮಂತ್ರಣಕೊಟ್ಟಿದ್ದಾನೆ. ಇನ್ನು ಮೇಲೆ ನಿಮ್ಮ ಪುಣ್ಯ ತೀರಿತು" ಎಂದರು. ಅದಕ್ಕೆ ಮಲ್ಲಸರ್ಜರು "ಬುದ್ಧೀ, ಮೂರ್ಖನಾದ ಹುಡುಗನ ಮಾತೇನು ? ಕರುಣಾಳುಗಳಾದ ತಾವು ಆತನನ್ನು ಕ್ಷಮಿಸಬೇಕು" ಎಂದು ದೈನ್ಯದಿಂದ ಬೇಡಿಕೊಂಡರು. ಅದಕ್ಕೆ ಪ್ರಭುದೇವರು " ದೊರೆಯೇ, ನಡು ಊರಲ್ಲೊದೆದು ದೇವರ ಮನೆಯಲ್ಲಿ ಕಾಲು

ಹಿಡಿದುಕೊಂಡರೇನಾಗುವದು. ಮಹಿಮಾಶಾಲಿಯಾದ ಮರಿದೇವರನ್ನು ಊಟಕ್ಕೆ ತಡೆದುನಿಲ್ಲಿಸಿದ ನಿಮ್ಮ ಮೂರ್ಖ ಮಗನನ್ನು ಕ್ಷಮಿಸುವುದೆಂದರೇನು? ಇಂದು ನಿನ್ನರ ಮನೆಯು ನಮಗೆ ಸೆರೆಮನೆಯಾಯಿತು. ಇಲ್ಲಿಗೆ ನಾವೆಂದಿಗೂ ಕಾಲಿಡೆವು ಎಂದು ಸಿಟ್ಟಾಗಿ ಇಬ್ಬರೂ ಮಠಕ್ಕೆ ಹಿಂದಿರುಗಿದರು. ಚಿನ್ನದರಮನೆಯು ಬನ್ನಕ್ಕೊಳಗಾಯಿತು. ಅರಮನೆಯೊಳಗೆ ಮರುಳು ಹೊಕ್ಕಂತಾಯಿತು,

ಗುರು ಶಿಷ್ಯರಿಬ್ಬರೂ ಊಟಮಾಡದೆ ಹಾಗೆಯೇ ತಿರುಗಿ ಹೋದದ್ದರಿಂದ ಮಲ್ಲಸರ್ಜರು ಚಿಂತಾಕ್ರಾಂತರಾದರು. ಮಗನನ್ನು ಕರೆಸಿ ಛೀ ಹಾಕಿದರು. ಮುಂದೆ ತಮಗೆ ಯಾವ ಅನಿಷ್ಟವು ಕಾದಿದೆಯೋ ಎಂದು ಭಯಗೊಂಡರು. ರಾಜ್ಯ ಭೋಗವು ಇನ್ನು ಕುಸಿದು ಬೀಳುವದೆಂದು ಅವರಿಗೆ ಭಾಸವಾಗಹತ್ತಿತು.

ಇತ್ತ ಮಡಿವಾಳ ಮರಿದೇವರಿಗೆ ಯೌವನವು ಪ್ರಾಪ್ತವಾಯಿತು. ಅವರು ಇಂದ್ರಿಯ ನಿಗ್ರಹಮಾಡಿ ತಮ್ಮ ವಿಜಿತೇಂದ್ರಿಯತ್ವವನ್ನು ಜಗತ್ತಿಗೆ ಪ್ರಕಟಗೊಳಿಸಿದರು. ಗುರುಪ್ರಭುದೇವರ ಕೃಪೆಗೆ ಪಾತ್ರರಾದರು. ಮಾನಿಯೂ ಮೌನಿಯೂ ಸಮ್ಯಗ್ ಜ್ಞಾನಿಯೂ ತಾನಾಗಿ ಮಡಿವಾಳಮರಿದೇವರು ಎಲ್ಲರ ಕಣ್ಮಣಿಯಾಗಿ ಕಂಗೊಳಿಸಹತ್ತಿದರು. ಪ್ರಭುದೇವರು ಶುಭಮುಹೂರ್ತ ನೋಡಿ ಮರಿದೇವರಿಗೆ ಅನುಗ್ರಹ ಕೊಟ್ಟರು. ಗುರುಕರಸಂಜಾತರಾದ ಮಡಿವಾಳದೇವರು ಗುರುವಿನಪ್ಪಣೆಯಂತೆ ಉಳವಿಕ್ಷೇತ್ರಕ್ಕೆ ಪ್ರಯಾಣ ಬೆಳಿಸಿದರು. ಅದು ಜಾತ್ರೆಯ ಸಮಯವಿದ್ದಿಲ್ಲ. ಜನರ ಗದ್ದಲವಂತೂ ಇಲ್ಲವೇ ಇಲ್ಲ. ಹುಲಿ ಕರಡಿ ಚಿರತೆಗಳ ಭೀತಿ, ಕಳ್ಳಕಾಕರ ಭಯ ಆದಾಗ್ಯೂ, ಮಡಿವಾಳದೇವರು ಭಯಪಡದೆ ಉಳಿವೆಯ ಹಳುವಿನೊಳಗೆ ಸಾಗಿರಲು, ಕ್ರೂರ ಮೃಗಗಳು ಆತನ ಮುಂದೆ ಬಂದು ಸಾಕಿದ ಬೆಕ್ಕು ನಾಯಿಗಳಂತೆ ಆತನೆದುರಿಗೆ ಹೊರಳಾಡಿದವು. ಆತನು ಅವುಗಳ ಮ್ಯೆಮೇಲೆ ಕೈಯಾಡಿಸಿ ಖರ್ಜೂರವನ್ನು ಅವುಗಳಿಗೆ ತಿನಿಸಿದನು. ಆಮೇಲೆ ಆ ಮೃಗಗಳನ್ನು ಬೀಳ್ಕೊಟ್ಟು ಶ್ರೀ ಉಳವಿ ಚನ್ನಬಸವೇಶ್ವರ ದೇವಾಲಯವನ್ನು ಪ್ರವೇಶಿಸಿದರು. ಕೆಲದಿನ ಅಲ್ಲಿ ಲಿಂಗಪೂಜಾನಂದಸಂಭ್ರಮದಲ್ಲಿ ಕಾಲಕಳೆದರು. ಬಳಿಕ ಕಿತ್ತೂರಿಗೆ ಮರಳಿಬಂದು ಪ್ರಭುದೇವರ ಅಡಿದಾವರೆಗೆ ಪೊಡಮಟ್ಟರು.

ಮರಿದೇವರ ವಿದ್ಯಾಗುರುಗಳಾಗಿದ್ದ ಚೆನ್ನಬಸವಪ್ಪಶಾಸ್ತ್ರಿಗಳೂ ಕೊಳ್ಳಿ ರಂಗಾಚಾರ್ಯರೂ ಇನ್ನುಮುಂದೆ ಮರಿದೇವರಿಗೆ ವಿದ್ಯೆಕಲಿಸುವ ಯೋಗ್ಯತೆಯು ತಮ್ಮಲ್ಲಿಲ್ಲವೆಂದು ಹೇಳಿ, ಅವರನ್ನು ಮುಂದಿನ ಅಭ್ಯಾಸಕ್ಕೆ ಕಾಶಿಗೆ ಕಳಿಸಿಕೊಡಬೇಕೆಂದು ಪ್ರಭುದೇವರಿಗೆ ಬೇಡಿಕೊಂಡರು. ಆಪ್ರಕಾರ ಗುರುಗಳು ಮಡಿವಾಳ ದೇವರನ್ನು ಕಾಶಿಗೆ ಕಳಿಸಿಕೊಟ್ಟರು. ಅಲ್ಲಿ ಮರಿದೇವರು ಸಕಲ ಶಾಸ್ತ್ರಂಗಳನ್ನು

ಕಲಿತು ಪಾರಂಗತರಾದರು. ಆವಗ ಕೈ ಹಿಡಿಯುವವರು ಯಾರೂ ಇರಲಿಲ್ಲ. ಅನೇಕರು ಅವರೊಡನೆ ವಾದಮಾಡಿ ಸೋತುಹೋದರು. ಆತನ ವಿದ್ವತ್ತುಚತುರ್ಯವನ್ನು ಕಂಡು ಮಹಾಮಹಾ ಪಂಡಿತರು ತಲೆದೂಗಿದರು. ಉತ್ತರದ ಎಲ್ಲ ತೀರ್ಥಕ್ಷೇತ್ರಗಳನ್ನು ಬಳಸಿ, ಮರಿದೇವರು ಪುನಃ ಕಿತ್ತೂರಿಗೆ ದಯಮಾಡಿಸಿದರು.

## ೪. ಪ್ರಭುದೇವರ ಐಕ್ಯ-ಮಲ್ಲಸರ್ಜರ ಅಂತ್ಯವಿಧಿ

ಅನೇಕ ದಿವಸಗಳು ಗತಿಸಲು ಪ್ರಭುದೇವರ ಶರೀರದಲ್ಲಿ ರೋಗಬಂದೆಡೆಗೊಂಡಿತು. ಆಗನ್ನು ಗುಣಪಡಿಸಲು ಭಕ್ತರು ವಿಶೇಷ ಪ್ರಯತ್ನಪಟ್ಟರು. ಅದೆಲ್ಲ ವ್ಯರ್ಥವಾಯಿತು. ಪ್ರಭುದೇವರಿಗೆ ತಾವು ಇನ್ನು ಉಳಿಯುವದಿಲ್ಲೆಂಬುದು ನಿಶ್ಚಯವೆನಿಸಿತು. ಆಗ ಅವರು ಸರ್ವಭಕ್ತರನ್ನೂ ಮಲ್ಲಸರ್ಜರನ್ನೂ ಕರೆಸಿಕೊಂಡು ತಮ್ಮ ತರುವಾಯ ಮಡಿವಾಳದೇವರಿಗೆ ಕಲ್ಮಠದ ನಿರಂಜನ ಪಟ್ಟಾಧಿಕಾರವನ್ನು ಕೊಡಬೇಕೆಂದು ಅಪ್ಪಣೆಕೊಡಿಸಿದರು. ಆ ಮಾತನ್ನು ಎಲ್ಲರೂ ಶಿರಸಾವಮಾನ್ಯವಾಗಿ ಒಪ್ಪಿಕೊಂಡರು. ಮುಂದೆ ಸ್ವಲ್ಪೇ ದಿನಗಳಲ್ಲಿ ಲಿಂಗೈಕ್ಯರಾದರು. ಊರಿಗೆ ಊರೇ ದುಃಖಸಾಗರದಲ್ಲಿ ಮುಳುಗಿತು. ಶಾಸ್ತ್ರೋಕ್ತವಾಗಿ ಅವರ ಸಮಾಧಿಕ್ರಿಯೆಗಳನ್ನು ನೆರವೇರಿಸಲಾಯಿತು. ಅವರ ಸಮಾಧಿಯ ಮೇಲೆ ದೊರೆಗಳೂ ಭಕ್ತರೂ ಕೂಡಿ ಗದ್ದುಗೆಯನ್ನು ಕಟ್ಟಿಸಿದರು. ಮಡಿವಾಳದೇವರಂತೂ ಕೂತಲ್ಲಿ ನಿಂದಲ್ಲಿ 'ಬಾಬಾ' ಯೆಂದು ಶೋಕಿಸಹತ್ತಿದರು. ಕಲ್ಮಠದ ವ್ಯವಸ್ಥೆಯ ಭಾರವೆಲ್ಲ ಅವರ ಮೇಲೆಯೇ ಬಿದ್ದಿತು.

ಇತ್ತ ಮಲ್ಲಸರ್ಜರನ್ನು ಯಾವುದೋ ಕಾರಣದಿಂದ ಪುಣೆಯ ಪೇಶ್ವೆಯವರು ಕರೆಸಿಕೊಂಡರು. ಅಲ್ಲಿ ಕೆಲದಿನಗಳಿರಲು ಅವರಿಗೆ ರೋಗವಾವರಿಸಿತು. ಅವರ ಬಳಿಯಲ್ಲಿ ಅವರ ಮಗ ಬಾಪೂಸಾಹೇಬನಿದ್ದನು. ದೊರೆಗೆ ಗುಣವಾಗುವ ಲಕ್ಷಣ ತೋರದಿದ್ದುದರಿಂದ ಪೇಶ್ವೆಯವರು ಕಿತ್ತೂರಿಗೆ ಹೇಳಿಕಳಿಸಿದರು. ಕಿತ್ತೂರಿನ ಪ್ರಮುಖರೆಲ್ಲ ಬಂದು ತಮ್ಮ ಧನಿಯ ಅಂತ್ಯಾವಸ್ಥೆಯನ್ನು ಕಂಡು ಮರುಗಿದರು. ಪೇಶ್ವೆಯವರು ಬಂದವರಿಗೆ ಇನ್ನುಮುಂದೆ ಬಾಪೂಸಾಹೇಬನಿಗೆ ಪಟ್ಟಗಟ್ಟಿರೆಂದು ಆಜ್ಞೆಮಾಡಿದರು. ಆಪ್ರಕಾರ ಗುರುಹಿರಿಯರು ಕೂಡಿಕೊಂಡು ಆತನ ಪಟ್ಟಾಭಿಷೇಕ ಸಮಾರಂಭವನ್ನು ನೆರವೇರಿಸಿದರು. ಎಲ್ಲರಿಗೂ ಮಲ್ಲಸರ್ಜರ ಚಿಂತೆಯು ಆವರಿಸಿಬಿಟ್ಟಿದ್ದಿತು. ಪೇಶ್ವೆಯರ ಅನುಜ್ಞೆಯ ಮೇರೆಗೆ ಕಿತ್ತೂರ ದೈವದವರು ತಮ್ಮ ದೊರೆಯನ್ನು ಪುಣೆಯಿಂದ ಕರೆದುಕೊಂಡು ಬಂದರು. ಅರಮನೆಯ ಮಹಾದ್ವಾರವನ್ನು ಮುಟ್ಟುವಷ್ಟರಲ್ಲಿ ದೊರೆಯ ಜೀವಜ್ಯೋತಿಯು ನಂದಿಹೋಯಿತು. ದಯಾಳುವೂ ಉದಾ

ರನೂ ಆವ ದೊರೆಯೂ ಮುಳುಗಿದುದನ್ನು ಸ್ಮರಿಸಿ ಊರಿಗೆ ಊರೇ ದುಃಖಸಾಗರ ದಲ್ಲಿ ಮುಳುಗಿಬಿಟ್ಟಿತು. ಶಿವಲಿಂಗಸರ್ಜ ಉರ್ಫ ಬಾಪೂಸಾಹೇಬರು ಸಂಸ್ಥಾನದ ಎಲ್ಲ ಕಾರಭಾರವನ್ನು ನೋಡಿಕೊಳ್ಳಹತ್ತಿದರು. ಮೊದಮೊದಲು ಎಲ್ಲರ ಪ್ರೀತಿ ಪಾತ್ರನಾಗಿ ಬಾಪೂಸಾಹೇಬನು ರಾಜ್ಯಮಾಳಿದನು.

ಇತ್ತ ಮಡಿವಾಳದೇವರು ಗುರುಗಳಂ ಭಕ್ತಿಯಿಂ ನಿತ್ಯ ಸ್ಮರಿಸುತ್ತ ಬಂದ ಭಕುತರಿಗೆ ಭಕ್ತಿಯ ಬೋಧೆಗೈಯುತ್ತ ಕಾಲಕಳೆಯುತ್ತಿದ್ದರು. ಆಗ ಆದಷ್ಟು ಬೇಗ ಗುರುಗಳ ಆಜ್ಞೆಯ ಮೇರೆಗೆ ಅವರನ್ನು ನಿರಂಜನ ಜಂಗಮಪಟ್ಟಾಧಿಕಾರಿಯನ್ನಾಗಿ ಮಾಡಬೇಕೆಂಬ ಹಂಬಲವು ದೈವದವರ ಮನಸ್ಸಿನಲ್ಲಿ ಹುಟ್ಟಿಯಿತು. ಎಲ್ಲರೂ ಮಡಿವಾಳದೇವರ ಗುಣಗಾನವನ್ನು ನಾನಾಪರಿಯಿಂದ ಮಾಡಹತ್ತಿದರು. ಅದನ್ನು ಕೇಳಿ ಬಾಪೂಸಾಹೇಬನ ಹೊಟ್ಟೆಯಲ್ಲಿ ಕಸಿವಿಸಿಯಾದಂತಾಗಿ ತನ್ನನ್ನು ಆ ಮರಿಯು ಏಕವಚನದಿಂದ ಕರೆದನಲ್ಲಾ! ಎಂಬ ದುರಭಿಮಾನವು ಆತನ ಮನಸ್ಸಿನಲ್ಲಿ ಒಂದೇ ಸವನೆ ಕಟೆಯಹತ್ತಿತು. ಹೇಗಾದರೂ ಮಾಡಿ ಅವರಿಗೆ ಕಿತ್ತೂರ ಕಲ್ಮಠದ ಪ್ರಭುತ್ವವು ದೊರೆಯದಂತೆ ಮಾಡಬೇಕೆಂದು ನಿರ್ಧರಿಸಿದನು. ಅವರನ್ನು ಪತನಗೊಳಿಸಬೇಕೆಂದು ಮನಸ್ಸಿನಲ್ಲಿ ದುರಾಲೋಚನೆ ಮಾಡಿ, ಆತನ ವಿಜಿತೇಂದ್ರಿಯತ್ವವನ್ನು ಭ್ರಷ್ಟಗೊಳಿಸಿ-ದರೆ ಆತನು ಪತಿತನಾದಂತಾಗುವದು. ಅನಂತರ ಕಿತ್ತೂರ ಕಲ್ಮಠಕ್ಕೆ ಆತನನ್ನು ಅಧಿಪತಿಯಾಗಿ ಮಾಡುವ ಪ್ರಶ್ನೆಯೇ ಹೊರಡುವದಿಲ್ಲೆಂದು ಆತನು ಭಾವಿಸಿದನು.

ತನ್ನ ಹಂಚಿಕೆಯನ್ನು ಈಡೇರಿಸಲೋಸುಗ ಆತನು ಊರಿನ ಪ್ರಮುಖ ಮಠಸ್ಥರನ್ನೂ ಗುರುವಿರಕ್ತರನ್ನೂ ತನ್ನರಮನೆಗೆ ಪ್ರಸಾದಕ್ಕೆಂದು ಆಮಂತ್ರಣಕೊಟ್ಟು ಕರೆಸಿಕೊಂಡನು. ಅವರು ಬಂದಬಳಿಕ ಎಲ್ಲರೂ ಬತ್ತಲೆಯಾಗಿ ಬಾಳೆಯ ಎಲೆಯ ಮೇಲೆ ಕುಳಿತುಕೊಳ್ಳಬೇಕೆಂದು ಆಜ್ಞಾಪಿಸಿದನು. ಈ ಆಜ್ಞೆಯನ್ನು ಯಾರಾದರೂ ಉಲ್ಲಂಘಿಸಿದರೆ ಮರಣದಂಡನೆಯಾಗುವದೆಂದು ಹೆದರಿಕೆ ಹಾಕಿದನು. ಎಲ್ಲರೂ ರಾಜನ ಕಠೋರ ಆಜ್ಞೆಗೆ ಹೆದರಿ ಬತ್ತಲೆಯಾಗಿ ಕುಳಿತುಕೊಂಡರು. ಮಡಿವಾಳ ದೇವರು ಜ್ಞಾನದೃಷ್ಟಿಯಿಂದ ರಾಜನ ಇಂಗಿತವನ್ನರಿತು ಕೂಸಿನಂತೆ ತಾವೂ ಬತ್ತಲೆ ಯಾಗಿ ಕುಳಿತುಕೊಂಡರು. ಅಮೇಲೆ ಸುರಸುಂದರಿಯರಂತಿರ್ಪ ನವಯೌವ್ವನದ ಸ್ತ್ರೀಯರಿಂದ ಅವರೆಲ್ಲರಿಗೆ ಎಡೆಮಾಡಹತ್ತಿದರು. ಅವರ ಶೃಂಗಾರಚೇಷ್ಟೆಗಳನ್ನು ಕಂಡು ಮಡಿವಾಳ ದೇವರ ಹೊರತು ಉಳಿದವರಿಗೆ ಕಾಮವಿಕಾರವುಂಟಾಗಿ ಊಟ ಮಾಡುವದನ್ನು ಬಿಟ್ಟು ಆ ಚಾರುಗಾತ್ರಿಯರನ್ನೇ ನೋಡಹತ್ತಿದರು. ಮಡಿವಾಳ ದೇವರು ಯಾವ ವಿಕಾರವಿಲ್ಲದೆ ತಾಯಂದಿರ ಮುಂದೆ ಕೂಸು ಕುಳಿತಂತೆ ಕುಳಿತುಬಿಟ್ಟಿ ದ್ದರು. ಊಟವಾದ ಬಳಿಕ ಎಲ್ಲರೂ ಲಜ್ಜಿತರಾಗಿ ತಮ್ಮ ತಮ್ಮ ಬಟ್ಟೆಗಳನ್ನು ಹಾಕಿ

ಕೊಂಡರು. ಆ ಮೇಲೆ ಬಾಪೂಸಾಹೇಬನು ಅವರಿಗೆ ದಕ್ಷಿಣೆಕೊಟ್ಟು ಬೀಳ್ಕೊಟ್ಟನು. ಮಡಿವಾಳದೇವರು ಕಲ್ಮಠಕ್ಕೆ ದಯಮಾಡಿಸಿದರು. ಬಾಪೂಸಾಹೇಬನು ಎಲ್ಲ ಬಾಳೆ ಎಲೆಗಳನ್ನು ಪರೀಕ್ಷಿಸಿ ನೋಡಲಾಗಿ ಮಡಿವಾಳರೆಲೆಯೊಂದನ್ನು ಬಿಟ್ಟು ಉಳಿದವರ ಎಲೆಗಳು ವೀರ್ಯಪತನದಿಂದ ದೂಷಿತವಾಗಿದ್ದವು. ಆತನ ಬ್ರಹ್ಮಚರ್ಯವನ್ನು ಸ್ಮರಿಸಿ ಬಾಪೂಸಾಹೇಬನು ಬೆರಗಾದನು.

ಬಾಪೂಸಾಹೇಬನಿಗೆ ತಾನು ಹುಲಿಯ ಮೀಸೆಯನ್ನು ಜಗ್ಗುತ್ತಿದ್ದೇನೆಂಬರಿವಾಗ ಲಿಲ್ಲ. ಸರ್ಪನ ಹೆಡೆಯಿಂದ ಕೆನ್ನೆಯನ್ನು ತುರಿಸಿಕೊಳ್ಳುತ್ತಿದ್ದೇನೆಂಬ ವಿಚಾರ ಹೊಳೆಯಲಿಲ್ಲ. ಮಡಿವಾಳ ದೇವರ ದ್ರೋಹ ಕಟ್ಟಿಕೊಂಡರೆ ಸಣ್ಣದ ಹಗ್ಗನು ಮಲಡಿಲ್ಲಿ ಕಟ್ಟಿಕೊಂಡು ಹೊಳೆಯ ಬಿದ್ದಂತೆ ತನ್ನ ಪಾಡಾಗುವದೆಂಬುದನ್ನು ಆತನು ಬಗೆಯದಾದನು! ಇಷ್ಟೆಲ್ಲ ಪ್ರತ್ಯಕ್ಷ ಕಂಡರೂ ಆತನ ಅಸೂಯಾಗ್ನಿಯು ಹೋಗಲಿಲ್ಲ. ಮತ್ತೂ ಮಡಿವಾಳದೇವರನ್ನು ದೂರೀಕರಿಸುವ ಉಪಾಯವನ್ನು ಹುಡುಕಹತ್ತಿದನು.

## ೫ ಗಂಗಾಜಲವನ್ನು ತರಲು ಮಡಿವಾಳರನ್ನು ಕಾಶಿಗೆ ಅಟ್ಟಿದ್ದು

ಮಡಿವಾಳ ದೇವರನ್ನೇ ನಿರಂಜನ ಚರಪಟ್ಟಕ್ಕೆ ಕುಳ್ಳಿರಿಸಬೇಕೆಂದು ಊರೆಲ್ಲ ಹಾತೊರೆಯುತ್ತಿರುವಾಗ ಅಹಂಕಾರಿಯಾದ ಬಾಪೂಸಾಹೇಬನು ಒಂದೊಂದು ಕುಂಟು ನೆಪ ತೋರಿಸಿ ಅದನ್ನು ಮುಂದೆ ಹಾಕಹತ್ತಿದನು ಆದರೂ ಊರ ಜನರೆಲ್ಲರೂ ಒಂದಾದರೆ ತಾನೊಬ್ಬನೇ ಮಾಡುವದೇನು ಎಂಬೀ ವಿಚಾರವು ಹೊಳೆದು, ಆತನು ತನ್ನ ನೀಚ ಗೆಳೆಯರೊಂದಿಗೆ ಆಪ್ತಾಲೋಚನೆ ಮಾಡಿ, ನಿರಂಜನಚರಪಟ್ಟಾಭಿಷೇಕಕ್ಕೆ ಕಾಶಿಯಿಂದ ಗಂಗಾಜಲವನ್ನು ತರುವದಕ್ಕೋಸ್ಕರ ಮಡಿವಾಳರನ್ನು ಅಲ್ಲಿಗೆ ಅಟ್ಟಿಬಿಡಬೇಕೆಂದು ನಿರ್ಧರಿಸಿದನು.

ಒಂದು ದಿನ ಬಾಪೂಸಾಹೇಬನು ಮಡಿವಾಳ ದೇವರನ್ನು ಕರೆಯಿಸಿಕೊಂಡು ಅತ್ಯಂತ ವಿನಯವನ್ನು ನಟಿಸಿ ಸಾಷ್ಟಾಂಗ ನಮಸ್ಕಾರ ಹಾಕಿ ಕೈ ಜೋಡಿಸಿ "ಬುದ್ಧೀ, ನಾವೆಲ್ಲರೂ ತಮ್ಮ ಚರಪಟ್ಟಾಭಿಷೇಕವನ್ನು ಶೀಘ್ರದಲ್ಲಿ ಗೈಯಬೇಕೆಂದು ಯೋಚಿಸಿರುವೆವು. ಅದಕ್ಕಾಗಿ ಶುದ್ಧ ಗಂಗಾಜಲವು ಅಭಿಷೇಕಕ್ಕೆ ಬೇಕಾಗುತ್ತದೆ. ಸದಾಚಾರ ಸದ್ಗುಣಸಂಪನ್ನರೇ ಅದನ್ನು ತರುವದು ವಿಹಿತ. ತಮ್ಮ ಹೊರತು ಅದನ್ನು ತರಲು ನಮಗೆ ಬೇರೆ ಯಾರೂ ಯೋಗ್ಯರು ಕಾಣಿಸುವದಿಲ್ಲ. ಕಾರಣ ತಾವು ದಯವಿಟ್ಟು ಗಂಗಾಜಲವನ್ನು ತರಲಿಕ್ಕೆ ಕಾಶಿಗೆ ಹೋಗುವ ಕೃಪೆಮಾಡ ಬೇಕು" ಎಂದು ಬೇಡಿಕೊಂಡರು. ಮಡಿವಾಳರು ಬಾಪೂಸಾಹೇಬನ ಇಂಗಿತವನ್ನು ತಿಳಿದರಾದರೂ ಹೊರಗೆ ಏನೂ ತೋರಗೊಡದೆ "ರಾಜಕುಮಾರ, ನಾನು ಗಂಗಾಜಲ

ವನ್ನು ತರುವೆ” ಎಂದು ತಿಳಿಸಿದರು. ತನ್ನ ಹಂಚಿಕೆಯು ಫಲಿಸಿತೆಂದು ಬಾಪೂಸಾಹೇಬನು ಮನಸದಲ್ಲಿ ಹಿಗ್ಗಿದನು. ಆದರೆ ತನ್ನ ಪ್ರಾಕ್ತನ ಕರ್ಮಫಲದಿಂದ ಮುಂದೆ ತನ್ನ ವಿಪತ್ತಿಗಾಗಿ ಈ ದುರ್ಬುದ್ಧಿ ಹುಟ್ಟಿತೆಂಬುದು, ಪಾಪ! ಆತನಿಗೆ ತಿಳಿಯಲಿಲ್ಲ. ಘಾಷೆಕೊಟ್ಟಂತೆ ಮಡಿವಾಳ ದೇವರು ಕಾಶಿಗೆ ಹೊರಡಲು ಸಜ್ಜಾಗಲು ಬಾಪೂಸಾಹೇಬನು ಅವರ ಪ್ರವಾಸದ ವೆಚ್ಚಕ್ಕಾಗಿ ವಿಪುಲಧನವನ್ನು ಕೊಟ್ಟನು. ಜೊತೆಗೆ ಯಾರಾದರೂ ಸೇವಕರು ಬೇಕೋ ಹೇಗೆಂದು ಬಾಪೂಸಾಹೇಬನು ವಿಚಾರಿಸಲು, ಅವರು ಬೆಳವಡಿಯ ಶಿವಪೂಜಿ ಮಲ್ಲಪ್ಪನೆಂಬವನನ್ನು ಸಂಗಡ ಕಳಿಸಿಕೊಡಬೇಕೆಂದರು. ಆ ಪ್ರಕಾರ ಶಿವಪೂಜಿ ಮಲ್ಲಪ್ಪನು ಕಾಶಿಗೆ ಮಡಿವಾಳರನ್ನು ಹಿಂಬಾಲಿಸಿದನು.

## ೬ ಕಿತ್ತೂರಮಠಕ್ಕೆ ಬೇರೆಯವರಿಗೆ ಅಧಿಕಾರ

ಮಡಿವಾಳದೇಶಿಕರು ಶಿವಪೂಜಿ ಮಲ್ಲನೊಡನೆ ಪ್ರಯಾಣಮಾಡುತ್ತ ದಾರಿಯಲ್ಲಿ ಅನೇಕ ತೀರ್ಥಕ್ಷೇತ್ರಂಗಳ ದರ್ಶನಮಾಡಿಕೊಂಡರು. ಗಂಗೋತ್ರಿ, ಬದ್ರಿ, ಕೇದಾರವನ್ನು ಸಹ ನೋಡಿಕೊಂಡರು. ಯಾಚಕರಿಗೆ ದಾನಧರ್ಮವೆಸಗಿದರು. ಕಾಶಿವಿಶ್ವನಾಥನ ದರ್ಶನಪಡೆದು ಸಂತುಷ್ಟರಾದರು. ಬಳಿಕ ಪರಿಶುದ್ಧಳಾದ ಗಂಗಾನದಿಯಲ್ಲಿ ಸ್ನಾನಮಾಡಿ ಆ ತೀರ್ಥವನ್ನು ಒಂದು ಪಾತ್ರೆಯಲ್ಲಿ ತುಂಬಿ ಬಾಯಿಗೆ ಮುದ್ರೆಯನ್ನೊತ್ತಿ ಮಲ್ಲನ ಕೈಗಿತ್ತು, “ನೀನು ಮುಂದೆ ನಡೆ, ಕಿತ್ತೂರಿಗೆ. ನಾನು ಹಿಂದುಗಡೆ ಬರುವೆನು. ನಾನು ಬರುವ ವರೆಗೆ ನೀನು ಅದರ ಮುದ್ರೆಯನ್ನು ಸರ್ವಥಾ ತೆಗೆಯಬೇಡ.” ಎಂದು ಹೇಳಿ ಆತನನ್ನು ಕಳಿಸಿಕೊಟ್ಟರು. ಆ ರಾತ್ರಿ ಮಡಿವಾಳ ದೇಶಿಕರು ಶಿವರಾತ್ರಿಯನ್ನು ಕಳೆವಂತೆ ಯೋಗನಿದ್ರೆಯಲ್ಲಿ ಆನಂದದಿಂದ ಕಳೆದರು. ಕಾಶಿಯಲ್ಲಿ ಕೆಲ ದಿನ ವಾಸಮಾಡಿ ಮಡಿವಾಳದೇಶಿಕರು ಕಿತ್ತೂರಿಗೆ ಹೊರಡಲನುವಾದರು.

ಅತ್ತ ಶಿವಪೂಜಿ ಮಲ್ಲನು ಮುದ್ರೆಮಾಡಿದ ತೀರ್ಥಜಲದ ಕಾವಡಿಯನ್ನು ಜೋಕೆಯಿಂದ ಹೊತ್ತುಕೊಂಡು ಅಲ್ಲಲ್ಲಿ ವಸತಿಮಾಡುತ್ತ, ಒಮ್ಮೆಲೆ ಕಿತ್ತೂರಿಗೆ ಹೋಗದೆ ತನ್ನ ಊರಾದ ಬೆಳವಡಿಗೆ ಹೋಗಿ ಆ ಕಾವಡಿಯನ್ನು ತನ್ನ ಮನೆಯ ಜಗುಲಿಯ ಮೇಲಿಟ್ಟು ಭಕ್ತಿಯಿಂದ ಪೂಜಿಸಹತ್ತಿದನು.

ಶಿವಪೂಜಿ ಮಲ್ಲಪ್ಪನು ಕೇಳಿದವರಿಗೆಲ್ಲ ಮಡಿವಾಳ ದೇಶಿಕರು ಹಿಂದೆ ಬರುತ್ತಿರುವರು, ನನಗೆ ಗಂಗಾಜಲವನ್ನು ತೆಗೆದುಕೊಂಡು ಮುಂದೆ ನಡೆಯೆಂದು ಹೇಳಿ, ಆ ಪಾತ್ರೆಯನ್ನು ತಾವು ಬರುವ ವರೆಗೆ ಮುದ್ರೆಸಹಿತ ಸುರಕ್ಷಿತ ಕಾಪಾಡಿಕೊಂಡಿರಬೇಕೆಂದು ಆಜ್ಞಾಪಿಸಿರುವರು ಎಂದುಸುರುತ್ತಿದ್ದನು. ಈ ಸುದ್ದಿಯನ್ನು ಬಾಪೂಸಾಹೇಬನು ಕೇಳಿ, ಒತ್ತಾಯಮಾಡಿ ಮಲ್ಲಪ್ಪನಿಂದ ಆ ಪಾತ್ರೆಯನ್ನು ತರಿಸಿಕೊಂಡು, ಮಡಿವಾಳದೇಶಿಕರು ಊರಲ್ಲಿಲ್ಲದ ಸಮಯ ಸಾಧಿಸಿ ಶ್ರೀ ಗುರುಸಿದ್ಧದೇವರೆಂಬವರಿಗೆ

ಕಿತ್ತೂರ ಕಲ್ಮಠದ ನಿರಂಜನ ಪೀಠಾಧಿಕಾರವನ್ನೊಪ್ಪಿಸಿದನು. ಮಡಿವಾಳ ದೇಶಿಕರಿಗೆ ಯಾಕೆ ಪಟ್ಟಗಟ್ಟಲಿಲ್ಲ ! ಎಂದು ಕೇಳುವ ಎದೆಗಾರರು ಮುಂದೆ ಬರಲಿ ನೋಡುವಾ, ಎಂದು ನುಡಿಯಲು, ಆತನಿಗೆ ಪ್ರತಿ ನುಡಿಯುವ ಧೈರ್ಯವು ಯಾರಿಗೂ ಆಗಲಿಲ್ಲ. ಮಡಿವಾಳರ ಶಾಪಸಾಮರ್ಥ್ಯವನ್ನು ಬಾಪೂಸಾಹೇಬನು ತಿಲಮಾತ್ರವೂ ಲೆಕ್ಕಿಸಲಿಲ್ಲ.

ಶಿವಪೂಜಿ ಮಲ್ಲಪ್ಪನು ತಾನು ಗುರುದ್ರೋಹ ಗೈದೆನಲ್ಲಾ ! ಎಂದು ಮಿಡುಕುತ್ತ ಬೆಳವಡಿಗೆ ತೆರಳಿದನು. ಮಡಿವಾಳದೇಶಿಕರು ಕೆಲದಿನ ತೀರ್ಥಕ್ಷೇತ್ರಗಳ ದರ್ಶನಮಾಡಿಕೊಂಡು ಬೆಳವಡಿ ಗ್ರಾಮಕ್ಕೆ ಬರಲು ಶಿವಪೂಜಿ ಮಲ್ಲಪ್ಪನು ನಡೆದ ಸಂಗತಿಯನ್ನು ನಡುಗುತ್ತ ಪಾದಕ್ಕೆ ಅರಿಕೆ ಮಾಡಿಕೊಂಡನು. ಆಗ ಮಡಿವಾಳರು ಆತನಿಗೆ 'ನೀನು ಈ ತಪ್ಪಿಗೆ ಪ್ರಾಯಶ್ಚಿತ್ತಹೊಂದಬೇಕು. ನೂರು ಗಣಂಗಳಿಗೆ ತೃಪ್ತಿ ಬಡಿಸಿ ದಕ್ಷಿಣ ಕೊಡಬೇಕು' ಎನ್ನಲು ಆತನು ಅದರಂತೆ ಮಾಡಿ ಗುರುದ್ರೋಹ ದೋಷವನ್ನು ಕಳೆದುಕೊಂಡನು.

ಆ ಮೇಲೆ ಮಡಿವಾಳದೇಶಿಕರು ಕಿತ್ತೂರ ಕಲ್ಮಠದ ಕಡೆಗೆ ತೆರಳಿದರು. ಅವರ ಕೋಪದ ಮುಖವನ್ನು ಕಂಡು ಇವರಿಗೆ ಎಲ್ಲ ತಿಳಿದಿದೆಯೆಂದು ಜನರು ತಿಳಿದು, ಬೇರೆಯವರು ಮಠಾಧಿಕಾರಿಗಳಾದ ಸುದ್ದಿ ಯನ್ನರುಹದೆ ಸುಮ್ಮನಿದ್ದರು. ಮಠದ ಸ್ಥಿತಿಗತಿಯು ಬದಲಾಗಿದ್ದಿತು. ಶ್ರೀ ಗುರುಸಿದ್ಧದೇವರೆಂಬವರು ಸಿಂಹಾಸನದ ಮೇಲೆ ಅಲಂಕೃತರಾಗಿದ್ದರು. ಮಡಿವಾಳರು 'ನೀನಾರು ? ಏತಕಿಲ್ಲಿರುವೆ ? ಎದ್ದೇಳು' ಎಂದು ಗದರಿಸಲು ಆ ಬಡಪ್ರಾಣಿಯು ಅಂಜಿ ಅವರ ಪಾದಕ್ಕೆ ಶಿರಬಾಗಿದನು. ವೀರಮಡಿವಾಳರು ಕಲ್ಮಠದಿಂದ ಸಾಗಿ ಅರಮನೆಗೆ ಬರುವರೆಂಬ ಸುದ್ದಿ ಕೇಳಿ ಬಾಪೂಸಾಹೇಬನು ಅರಮನೆಯ ಬಾಗಲಿಗೆ ಬೀಗ ಹಾಕಿಸಿ ಉಳಕೊಂಡನು. ಇತ್ತ ಮಡಿವಾಳರು ಒಂದು ಕೈಯಲ್ಲಿ ಬಿಚ್ಚು ಗತ್ತಿಯನ್ನೂ ಇನ್ನೊಂದು ಕೈಯಲ್ಲಿ ಎರಡು ಕೊಳವಿಯ ಬಂದೂಕನ್ನೂ ಹಿಡಿದುಕೊಂಡು ವೀರಾವೇಶದಿಂದ ಆರ್ಭಟಿಸುತ್ತ ಅರಮನೆಯ ಬಾಗಿಲಿಗೆ ಬಂದು ನಿಲ್ಲಲು ಕಾವಲುಗಾರರು ಗದಗದ ನಡುಗಿದರು. ಆಗ ಮಡಿವಾಳರು ಅರಮನೆಯ ಮುಂದೆ ನಿಂತು ತಾವು ಉಟ್ಟ ಬಟ್ಟೆಯನ್ನು ಸುಟ್ಟು ಆ ಭಸ್ಮವನ್ನು ಧರಿಸಿ ದಿಗಂಬರರಾಗಿ ಶಿವನನ್ನು ಧ್ಯಾನಿಸಿ, 'ಎಲೆ, ದುರುಳ ಬಾಪೂಸಾಬ್ಯಾ, ನನ್ನನ್ನು ಮೋಸಗೊಳಿಸಿ ಕಾಶಿಗೆ ಕಳಿಸಿ ಬೇರೊಬ್ಬನನ್ನು ಮಠಾಧಿಪತಿಯನ್ನು ಮಾಡಿದೆಯಾ ? ನಿನ್ನರಮನೆಯು ಹಾಳಾಗಿ ಎತ್ತನೋಡಿದತ್ತ ಕತ್ತೆಹಂದಿಗಳು ಸುಳಿದಾಡಲೆಂದು ಶಾಪವಿತ್ತು, ಮೂರು ಬೊಗಸೆ ಮಣ್ಣನ್ನು ತೂರಿ ಹೊರಹೊರಟರು. ಕಿತ್ತೂರನ್ನು ಬಿಟ್ಟು ವೀರಮಡಿವಾಳರು ತೆರಳಿದ್ದರಿಂದ ಅದರ ಅಳಿಗಾಲವು ಸಮೀಪಿಸಿದಂತಾಯಿತು. ಅಶುಭ ಚಿಹ್ನಗಳು ತಲೆದೋರಿದವು.

## ೭. ಮಡಿವಾಳರನ್ನು ಹಿಡಿತರಲು ಬಾಪೂಸಾಹೇಬನಾಜ್ಞೆ

ಅರಮನೆಯು ಹಾಳಾಗಲೆಂದು ಮಣ್ಣು ತೂರಿ ಹೋಗಿರುವ ದುರುಳ ಮಡಿವಾಳನನ್ನು ಹಿಡಿದು ತಂದು ಆನೆಯ ಕಾಲಿಗೆ ಕಟ್ಟಿ ಎಳಿಸಿರೆಂದು ಸೈನಿಕರಿಗೆ ಬಾಪೂಸಾಹೇಬನು ಆಜ್ಞಾಪಿಸಿದನು. ಕಿತ್ತೂರ ಬಿಟ್ಟ ಮಡಿವಾಳರು ಹುಚ್ಚನಂತೆ ದಿಗಂಬರರಾಗಿ ಬಂದ ಭಕ್ತರ ವಂದನೆಗೆ ಗಮನ ಕೊಡದೆ ಗುಡಿಗುಂಡಾರ, ಹಾಳುಗೋಡೆ, ಬಿದಿರುಮೆಳೆ, ಕಾಡು, ಮೊರಡಿ, ಕಂದರಗಳಲ್ಲಿ ವಾಸಮಾಡುತ್ತ ಹಸಿವು ನೀರಡಿಕೆಗಳ ಪರಿವೆಯಿಲ್ಲದೆ ಸಂಚರಿಸಹತ್ತಿದರು. ಬಾಪೂಸಾಹೇಬನ ಸೈನಿಕರು ಕುದುರೆಯನ್ನೇರಿ ಆತನನ್ನು ಹುಡುಕುತ್ತ ಬರಲಾಗಿ ನಂದಿಹಳ್ಳಿ ಗುಡ್ಡದೊಳಗೆ ಮಡಿವಾಳರು ಅವರಿಗೆ ಕಾಣಿಸಿಕೊಂಡರು. ಭಟರು ರಭಸದಿಂದ ಮುಂಬರಿದು ನಿಲ್ಲಲು, ಮಡಿವಾಳರು 'ಎಲೆ ಸೂಳೆಮಕ್ಕಳೇ, ಹಿಂದಕ್ಕೆ ಸರಿಯಿರಿ. ನಿಮಗೇನು ಸಾವು ಬಂದಿದೆಯೇ ? ಸುಮ್ಮನೆ ಜೀವದಿಂದ ಹಿಂದಿರುಗಿರಿ' ಎಂದರೂ ಕೇಳದೆ ಅವರು ಮಡಿವಾಳರನ್ನು ಹಿಂಬಾಲಿಸಿದರು. ಆಗ ಮಡಿವಾಳರು ಸಿಟ್ಟಿನಿಂದ ಕಲ್ಲುಗುಂಡುಗಳನ್ನೆಸೆಯಲು ಎಷ್ಟೋ ಕುದುರೆಗಳ ಕಾಲ್ಮುರಿದವು. ಕೆಲವರು ಹಿಂದಕ್ಕೆ ಓಡಿದರು. ಮಡಿವಾಳರು ಹಾಗೆಯೇ ಶಿಕ್ಕುಂಬರ ಎಂಬ ಗ್ರಾಮಕ್ಕೆ ಬರಲು ಸೈನಿಕರು ಬೆಂಬತ್ತಲು ಮೊದಲಿನಂತೆಯೇ ಕಲ್ಲುಗುಂಡುಗಳನ್ನೆಸೆದರು. ಕೆಲವರು ಹಿಂದಿರುಗಿದರು. ಉಳಿದವರು ಬೆನ್ನಟ್ಟಿದರು. ಕೊನೆಗೆ ಬೆಳವಡಿಯ ಸಮೀಪದಲ್ಲಿ ಸೈನಿಕರು ಮಡಿವಾಳರನ್ನು ಹಿಡಿದರು.

ಆಗ ಮಡಿವಾಳರು ಸೈನಿಕರಿಗೆ 'ಎಲೆ ಸೂಳೆಮಕ್ಕಳಿರಾ, ನನ್ನನ್ನು ಹಿಡಿದೇನು ಮಾಡುವಿರಿ? ನನ್ನನ್ನು ಹಿಡಿದು ನೀವು ಕೆಡಬೇಡಿರಿ. ಹಿಂದಿರುಗಿರೆನಲು ಅವರ ಮುಖ್ಯಸ್ಥನು "ಸದ್ಗುರುವೆ, ಒಡೆಯನ ತಪ್ಪು ಸೇವಕನಿಗೆಂಬಂತೆ ತಮ್ಮನ್ನು ಬಿಟ್ಟು ಹೋದರೆ ನಮಗೆ ಆಪತ್ತು ಕಾಯ್ದಿಹದು. ಕಾರಣ ನಿಮ್ಮನ್ನು ಕಿತ್ತೂರಿಗೊಯ್ಯುವೆವು" ಎಂದು ಹೇಳಿ ಸಂಜೆಯಾಗಲು ಅಲ್ಲಿಯೇ ಸಮೀಪದಲ್ಲಿದ್ದ ಮಲ್ಲಿಕಾರ್ಜುನನ ಗುಡಿಯಲ್ಲಿ ಅವರನ್ನು ಹೊಗಿಸಿ ಬಾಗಿಲಿಗೆ ಭದ್ರವಾದ ಬೀಗ ಹಾಕಿದರು. ಬೆಳವಡಿಯ ಜನರು ಗುರುವಿಗೊದಗಿದ ಅನಿಷ್ಟವನ್ನು ನೆನೆದು, ಮನದಲ್ಲಿ ವಂದಿಸಿ ಕಂಬನಿಗರೆದು ರಾಜನನ್ನು ಶಪಿಸುತ್ತ ತಮ್ಮ ಮನೆಗೆ ತೆರಳಿದರು. ಈ ಸುದ್ದಿಯನ್ನೆಲ್ಲ ಸೈನಿಕರು ಬಾಪೂಸಾಹೇಬನಿಗೆ ತಿಳಿಸಿದರು. ಆಗ ಆತನು ' ಈಗ ರಾತ್ರಿಯಾಗಿದೆ, ನಾವು ಬಂದೇನು ಮಾಡೋಣ? ನಾಳೆ ಆತನನ್ನು ಇಲ್ಲಿಗೆ ಕರೆತಂದು ತಕ್ಕ ಶಿಕ್ಷೆಯನ್ನು ವಿಧಿಸೋಣ" ಎಂದು ಹೇಳಿ, ಬಂದ ಸುದ್ದಿಗಾರರನ್ನು ಬೆಳವಡಿಗೆ ತಿರುಗಿ ಕಳಿಸಿದನು.

ಆ ದಿನ ರಾತ್ರಿ ದಂಡಾಳುಗಳು ಹೊರಗೆ ಗುಡಿಯ ಬಾಗಿಲ ಕಾಯುತ್ತಿರಲು ವೀರಮಡಿವಾಳರು ಗುಡಿಯ ಶಿಖರದ ಕಲ್ಲೊಂದನ್ನು ಕಿತ್ತಿ ಆರಿಗೂ ತಿಳಿಯದಂತೆ,

ಆ ಕಿಂಡಿಯಿಂದ ಕೆಳಗೆ ಮುಳ್ಳುಗಳ್ಳಿಯಲ್ಲಿ ಜಿಗಿದು ಅಲ್ಲಿಂದ ಪಾರಾಗಿ ಒಂದು ಘೋರ ಕಾಂತಾರವನ್ನು ಸೇರಿದರು. ಬೆಳಗಾದ ಮೇಲೆ ಕಾಪಿನವರು ಬೀಗವನ್ನು ತೆಗೆದು ನೋಡಲಾಗಿ ಮಡಿವಾಳರಿಲ್ಲದಿರುವುದನ್ನು ತಿಳಿದು ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲವೆಂದು ನಿರಾಶೆಗೊಂಡು ಅಲ್ಲಲ್ಲಿ ಹುಡುಕುತ್ತ ಕಿತ್ತೂರಿಗೆ ಮರಳಿ, ಮಡಿವಾಳರು ನುಸುಳಿಹೋದ ವೃತ್ತಾಂತವನ್ನು ಅರಿಕೆಮಾಡಿಕೊಂಡರು. ಬಾಪೂ-ಸಾಹೇಬನು "ಆಗಲಿ, ನೀವು ಹೋಗಿರಿ. ಮುಂದೆ ನೋಡೋಣ"ವೆಂದು ಹೇಳಿ ಮನ ದಲ್ಲಿ ಕುದಿಯುವತ್ತಿದನು. ಪಾಪ ! ಮಹಾಯೋಗಿಯೊಡನೆ ಸೆಣಸಾಡಿದರೆ ತನ್ನ ಸ್ಥಿತಿಯೇನಾದೀತೆಂಬ ಅರಿವು ಆ ಮದಾಂಧನಿಗೆ ತಿಳಿಯಲಿಲ್ಲ. ಸಿಂಹದೊಡನೆ ನರಿ ಕಾದಾಡಿ ಬದಕುವದುಂಟೆ? 'ವಿನಾಶಕಾಲೇ ವಿಪರೀತ ಬುದ್ಧಿಃ' ಎಂಬಂತಾಯಿತು.

ಮಲ್ಲಿಕಾರ್ಜುನನ ಗುಡಿಯ ಬಾಗಿಲು ತೆರೆದಾಗ ಊರ ದೈವದವರೆಲ್ಲರೂ ಅಲ್ಲಿಯೇ ಇದ್ದು, ಅವರು ಪಾರಾದುದನ್ನು ಕೇಳಿ ಪರಮಾಶ್ಚರ್ಯಚಕಿತರಾದರು. ಅವರು ಹೇಗೆ ಪಾರಾದರೆಂಬುದನ್ನು ನಿರೀಕ್ಷಿಸುತ್ತಿರಲು, ಮಾಳಿಗೆಯ ಕಲ್ಲೊಂದು ಕಳಚಿದುದು ಕಂಡು ಬಂದಿತು. ಅವರು ಮಡಿವಾಳರ ಸಾಮರ್ಥ್ಯವನ್ನು ಕೊಂಡಾಡಿ ದರು. ಮಡಿವಾಳಯೋಗಿಯು ಸೊಗಲದ ಕೊಳ್ಳದಲ್ಲಿ ೧೧ ದಿವಸ ನಿರಾಹಾರ ದಿಂದಿದ್ದು ತಪಸ್ಸು ಮಾಡಿದರು. ಹನ್ನೆರಡನೆಯ ದಿವಸ ಬೆಳವಡಿಗೆ ಬಂದು ಭಕ್ತರಿಗೆ ದರ್ಶನ ಕೊಟ್ಟರು. ಎಲ್ಲರೂ ಗುರುವಿಗೆ ಸಾಷ್ಟಾಂಗವೆರಗಿ ಆನಂದಬಟ್ಟರು. ಯೋಗಿಗಳು ಜಕಾತಿ ಬಸವಲಿಂಗಪ್ಪನೆಂಬ ಭಕ್ತನ ಮನೆಗೆ ಬಂದು, 'ಎಲೆ ಭಕ್ತಾ, ಬೆಳವಡಿ ಮಲ್ಲಿಕಾರ್ಜುನನ ಗುಡಿಯ ಶಿಖರದ ಕಲ್ಲೊಂದನ್ನು ನಾವು ಕಿತ್ತಿರುವೆವು. ಕಿತ್ತಿದ ಕಲ್ಲನ್ನು ನೀನು ಕೂಡಿಸಿ ಮೊದಲಿನಂತೆ ಮಾಡಬೇಕು' ಎಂದೆನಲು ತಕ್ಷಣ ಒಡ್ಡರನ್ನು ಕರೆಯಿಸಿ ಕಲ್ಲನ್ನು ಹೊಂದಿಸಿ ಸರಿಪಡಿಸಿದನು. ಗುರುಗಳಿಗೆ ಸಂತೋಷ ವಾಯಿತು.

ಒಂದು ದಿನ ಗುರುಗಳು ಒಬ್ಬ ಕಮ್ಮಾರನನ್ನು ಕರೆಯಿಸಿಕೊಂಡು 'ನಮಗೆ ಒಂದು ಜೋಡು ಬೇಡಿಯು ಬೇಕು' ಎಂದು ಹೇಳಿ ಉತ್ಸಾಹದಿಂದ ಮಾಡಿಸಿ ಕೊಂಡರು. ಹೂಗಾರನೊಬ್ಬನನ್ನು ಕರೆಯಿಸಿ ೪ ಹೂವಿನ ಮಾಲೆಗಳನ್ನು ಸಿದ್ಧ ಗೊಳಿಸಿ ತರಹೇಳಿದರು. ಬೇಡಿ ಮತ್ತು ಹೂಮಾಲೆಗಳು ಬಂದ ಮೇಲೆ ಮಡಿವಾಳರು ಜಕಾತಿ ಬಸವಲಿಂಗಪ್ಪನಿಂದ ಬರಿಗೊಡವೊಂದನ್ನು ಮತ್ತು ಒಂದು ತಂಬಿಗೆ ಹಾಲು, ಒಂದು ಸೇರು ಕಲ್ಲುಸಕ್ಕರೆ, ಒಂದು ತೆಂಗಿನಕಾಯಿ ಮೊದಲಾದ ಪೂಜಾ ಸಾಹಿತ್ಯ ಗಳನ್ನು ತರಿಸಿಕೊಂಡು ವೀರಭದ್ರನ ಗುಡಿಯೊಳಗೆ ಹೊಕ್ಕು ಕಾಯಿ ಒಡೆದು, ಹಾಲುಸಕ್ಕರೆ ಕುಡಿದು ಆ ಮೇಲೆ ಗುಡಿಯ ಶಿಖರವನ್ನೇರಿ ಬರಿಗೊಡವನ್ನೆತ್ತಿ

ಸುರುವಲು ಕೆಳಗೆ ಹೊನ್ನಿನ ಪಳಕುಗಳು ಬಳಬಳ ಸುರಿದವು. ಅವುಗಳನ್ನು ಹೊಲೆಯರಷ್ಟೇ ಆಯ್ದುಕೊಂಡು ಹೋಗಬೇಕೆಂದು ಗುರುಗಳು ಆಜ್ಞಾಪಿಸಲು, ಹೊಲೆಯರು ಬಂದು ತಮಗೆ ಸಿಕ್ಕಷ್ಟು ಬಳಕೊಂಡು ಗುರುವಿನ ಉಪಕಾರ ಸ್ಮರಿಸುತ್ತ ತಮ್ಮತಮ್ಮ ಮನೆಗಳಿಗೆ ತೆರಳಿದರು.

ಆ ಮೇಲೆ ಗುರುಗಳು ವೀರಭದ್ರನ ಗುಡಿಯೊಳಗೆ ಹೊಕ್ಕು ನಾಲ್ಕು ಹೂವಿನ ಮಾಲೆಗಳನ್ನು ಮಸ್ತಕದಲ್ಲಿ ಧರಿಸಿಕೊಂಡು ಕಾಲಿಗೆ ಬೇಡಿಯನ್ನು ತೊಡಕಿಸಿಕೊಂಡು ಜಕಾತಿ ಬಸವಲಿಂಗಪ್ಪನನ್ನು ಕರೆದು "ಎಲೈ, ನೀನು ೧೧ ದಿನಗಳವರೆಗೆ ಬಾಗಿಲಿಗೆ ಬೀಗ ಹಾಕಿ ಕಾಯ್ದುಕೊಂಡಿರು. ಬಾಗಿಲ ತೆರೆಯಬೇಡ" ಎಂದು ಆಜ್ಞಾಪಿಸಲು ಆತನು ಗುರುಗಳ ಆಜ್ಞೆಯನ್ನು ಪಾಲಿಸಿದನು. ೧೧ನೆಯ ದಿನಕ್ಕೆ ಜಕಾತಿ ಬಸವಲಿಂಗಪ್ಪನಿಗೆ ಕಾಶಿಯಿಂದ ಮಡಿವಾಳ ಶಿವಯೋಗಿಗಳು ಪತ್ರ ಬರೆದದ್ದು ನೋಡಿ ಪರಮಾಶ್ಚರ್ಯವಾಯಿತು. ಅದನ್ನು ಭಕ್ತಾದಿಗಳಿಗೆಲ್ಲ ಓದಿ ಹೇಳಲು, ಅವರೂ ಸಾನಂದಾಶ್ಚರ್ಯವುಳ್ಳವರಾದರು. ಆ ಮೇಲೆ ಗುಡಿಯ ಬಾಗಿಲ ತೆರೆದು ನೋಡಲಾಗಿ ಗುರುಗಳಲ್ಲಿರಲಿಲ್ಲ. ಹೂವಿನ ಸರಗಳೂ ಬೇಡಿಗಳೂ ಮಾತ್ರ ಅಲ್ಲಿದ್ದವು. ಭಕ್ತರು ಶಿವಯೋಗಿಗಳ ಮಹಿಮೆಯನ್ನು ಕೊಂಡಾಡಿ ಊರಲ್ಲಿ ಪ್ರಸ್ಥವನ್ನು ಸೊಗಸಾಗಿ ಜರುಗಿಸಿದರು.

ಆ ಮೇಲೆ ಊರೊಳಗಿನ ಕೆಲವು ಪ್ರಮುಖರು ಕಾಶಿಗೆ ಹೋಗಿ, ಬೆಳವಡಿಗೆ ದಯಮಾಡಿಸಬೇಕೆಂದು ಯೋಗಿಗಳನ್ನು ಬೇಡಿಕೊಂಡರು. ಅದಕ್ಕೆ ಅವರು ನಾವು ಕೆಲದಿನ ಕಾಶಿಯೊಳಗಿದ್ದು ಊರಿಗೆ ಬರುವೆವು. ಈಗ ನೀವು ತೆರಳಿರೆಂದು ಅಜ್ಞಾಪಿಸಿ ಕಳಿಸಿದರು. ಕಾಶಿಯಲ್ಲಿ ನರಸಿಂಹಾಚಾರ್ಯನೆಂಬವನು ಶ್ರೀ ಶಿವಯೋಗಿಗಳ ಸೇವೆ ಮಾಡುತ್ತ ಅವರ ಬಳಿಯಲ್ಲಿ ಭಕ್ತಿಯಿಂದ ಅಭ್ಯಾಸ ಮಾಡಹತ್ತಿದನು.

## ೮. ಮಡಿವಾಳ ಯೊಗಿಗಳ ಕ್ಷೇತ್ರಸಂಚಾರ ಮತ್ತು ಕಿತ್ತೂರ ರಾಜ್ಯದ ಕೊನೆಗಾಲ

ಕಾಶಿಯಲ್ಲಿದ್ದಾಗ ಅನೇಕ ಜನ ಪಂಡಿತರು ಇವರ ಘನ ಪಾಂಡಿತ್ಯವನ್ನು ನೋಡಿ ಅಸೂಯೆಪಡಹತ್ತಿದರು. ಶಿವಯೋಗಿಯು ಮನಸ್ಸಿನಲ್ಲಿ ಮುನಿಸ ತಾಳದೆ ಶಾಂತಿಯಿಂದ ಅವರ ಮಾತುಗಳನ್ನೆಲ್ಲ ಖಂಡಿಸುವನು. ನರಸಿಂಹಾಚಾರ್ಯನು ಶಿವಯೋಗಿಗಳ ಶಿಷ್ಯನಾದುದನ್ನು ನೋಡಿ, ಕಾಶಿಯ ಪುಂಡರನೇಕರು ಮಡಿವಾಳ ಶಿವಯೋಗಿಗಳ ಮೇಲೆ ದ್ವೇಷಮಾಡಹತ್ತಿದರು. ಮತ್ತು ಅವರೊಡನೆ ತುಚ್ಛ ಭಾವದಿಂದ ನಡೆಯಲಾರಂಭಿಸಿದರು. ಇದನ್ನು ಶಿವಯೋಗಿಗಳು ತಿಳಿದು ಮನಸ್ಸಿನ ಸಮತೆಯನ್ನು

ಕಳೆದುಕೊಳ್ಳದೆ, ಸ್ತುತಿನಿಂದೆಗಳು ಸಮಾನವೆಂದು ಭಾವಿಸಿದರು. ಅವಧೂತಮಾರ್ಗಿದವನಾದ ಈತನ ಪಾಂಡಿತ್ಯವೇನು ಸುಟ್ಟಿತು? ಎಂದು ಆ ಪಂಡಿತರು ಗರ್ವತಾಳಿದರು. ಒಂದು ದಿನ ಸಭೆಗೂಡಿಸಿ, ಮಡಿವಾಳ ಯೋಗಿಗಳನ್ನು ಆಮಂತ್ರಣಕೊಟ್ಟು ಬರಮಾಡಿಕೊಂಡು ನ್ಯಾಯ, ವ್ಯಾಕರಣ ಮತ್ತು ಉಳಿದ ಶಾಸ್ತ್ರಗಳಲ್ಲಿ ಪೂರ್ವಪಕ್ಷವನ್ನು ಮಂಡಿಸಿದರು. ಅದಕ್ಕೆ ಶಿವಯೋಗಿಗಳು ಸಮರ್ಪಕವಾಗಿ ಸಿದ್ಧಾಂತ ಮಾಡಿ, ತಾವು ಪೂರ್ವಪಕ್ಷವನ್ನೆಸಗಲು ಆ ಅರಣ್ಯಪಂಡಿತರೆಲ್ಲರೂ ಮೂಕರಾದರು. ಪಾಂಡಿತ್ಯದ ಗರ್ವವು ಹರಣವಾದರೂ ಅವರ ಅಸೂಯೆಯು ತೊಲಗಲಿಲ್ಲ.

ಬತ್ತಲೆ ಲಂಗೋಟಿಯು ಮೇಲಿರುವ ಇವರನ್ನು ಅವರು ಷಂಡನೆಂದು ಅಪಹಾಸ್ಯಮಾಡಲು, ಶಿವಯೋಗಿಗಳು ತಮ್ಮ ಶಿಷ್ಯನಾದ ನರಸಿಂಹಾಚಾರ್ಯನಿಂದ ಒಂದು ಪಾತ್ರೆಯನ್ನು ತರಿಸಿಕೊಂಡು, ಪಂಡಿತರ ಸಭೆ ನಡೆದಾಗ ಎಲ್ಲರೂ ನೋಡುವಂತೆ ತೊಡೆಯನ್ನು ಚಪ್ಪರಿಸಿಕೊಳ್ಳಲು ಜನನೇಂದ್ರಿಯವು ಚೇತನಗೊಂಡು ವೀರ್ಯವು ಆ ಪಾತ್ರೆಯಲ್ಲಿ ತುಂಬಿ ಹೊರಸೂಸಲು ಹಾಸಿಗೆಗಳು ಸುಡಹತ್ತಿದವು. ಆಗ ಪಂಡಿತರು "ಸಾಕುಮಾಡಯ್ಯ ಶಿವಯೋಗಿಯೇ, ನಾವು ಹಾಸ್ಯ ಮಾಡಿದ್ದಕ್ಕೆ ತಕ್ಕ ಪಶ್ಚಾತ್ತಾಪವಾಯಿತು" ಎಂದು ಬೇಡಿಕೊಳ್ಳಲು, ಅವರು ಬಿಟ್ಟ ವೀರ್ಯವನ್ನು ಜನನೇಂದ್ರಿಯದಿಂದ ಪುನಃ ಹೀರಿಕೊಂಡರು. ಆಗ ಪಂಡಿತರು ತಮ್ಮ ಅಸೂಯೆಯನ್ನು ಬಿಟ್ಟು ಆತನನ್ನು ಮನವಾರೆ ಕೊಂಡಾಡಿದರು.

ಕೆಲವು ದಿನ ಕಾಶಿಯಲ್ಲಿದ್ದು ಬಳಿಕ ಮಡಿವಾಳ ಯೋಗಿಗಳು ನರಸಿಂಹಾಚಾರ್ಯನೊಂದಿಗೆ ಉಳಿದ ತೀರ್ಥಕ್ಷೇತ್ರಗಳ ಕಡೆಗೆ ತಮ್ಮ ಪಯಣವನ್ನು ಬೆಳೆಸಿದರು. ಬಹುದೂರ ಹೋದ ಮೇಲೆ, ಕೆಲವು ರಾಹುತರು ಕಿತ್ತೂರು ಹಾಳಾದ ಸುದ್ದಿಯನ್ನು ಉಳಿದ ಸಂಸ್ಥಾನಿಕರಿಗೆ ತಿಳಿಸಲು ಸಂಚರಿಸುತ್ತಿದ್ದುದನ್ನು ಯೋಗಿಗಳು ಕಂಡರು. ಅವರು ಮಡಿವಾಳಯೋಗಿಗಳನ್ನು ಕಂಡು ನಮಸ್ಕರಿಸಿ ಕಣ್ಣೀರಿಟ್ಟು ಕಿತ್ತೂರಿನ ವೃತ್ತಾಂತವನ್ನೆಲ್ಲ ಕಥೆಮಾಡಿ ಹೇಳಿದರು. ಬಾಪೂಸಾಹೇಬನು ಸತ್ತು ಹೋಗಿದ್ದನು, ಇಂಗ್ಲಿಷರು ದತ್ತಕಮಾಡಿಕೊಳ್ಳಲು ಪರವಾನಿಗೆ ಕೊಡದ್ದರಿಂದ ಕಿತ್ತೂರಿನ ಕೆಲವು ಪುಂಡರು ಸಿಟ್ಟಿಗೆದ್ದು ಥ್ಯಾಕರೆ ಸಾಹೇಬನ ರುಂಡವನ್ನು ಚೆಂಡಾಡಿ ಊರೊಳಗೆ ಮೆರೆಸಿದರು. ಈ ದುರಂತವನ್ನು ಕೇಳಿ ಇಂಗ್ಲಿಷರು ಕಿತ್ತೂರ ಕೋಟೆಗೆ ತೋಫು ಹಚ್ಚಿ ಕೆಡವಿ, ಚೆನ್ನಮ್ಮ, ವೀರಮ್ಮರಾಣಿಯರನ್ನು ಸೆರೆಹಿಡಿದು ಧಾರವಾಡದಲ್ಲಿಟ್ಟರು. ಕಿತ್ತೂರಿನ ಬೆಳ್ಳಿ, ಬಂಗಾರ, ಮುತ್ತು ರತ್ನಾದಿಗಳನ್ನು ಆನೆ, ಒಂಟೆ, ಗಾಡಿಗಳಲ್ಲಿ ಹೇರಿಸಿ ಧಾರವಾಡಕ್ಕೆ ಸಾಗಿಸಿದರು. ಶಿವಯೋಗಿಗಳ ಶಾಪದಿಂದ ಕಿತ್ತೂರು ಹಾಳಾದುದನ್ನು ಸ್ಮರಿಸಿ ಗೋಳಿಟ್ಟರು. ಮಡಿವಾಳ ಶಿವಯೋಗಿಗಳು ಶಿವ ಸಿಚ್ಛೆಯೆಂದು ಹೇಳಿ ಮುಂದೆ ಸಾಗಿದರು.

ಮುಂದೆ ಅವರು ಬದರಿಕಾಶ್ರಮ ನೋಡಿಕೊಂಡು ಅಯೋಧ್ಯೆಗೆ ಬಂದು ಸರಯೂನದಿಯಲ್ಲಿ ಮಿಂದು, ಲಿಂಗಾರ್ಚನೆ ತೀರಿಸಿ, ಅಲ್ಲಿ ಬಂದ ಮಹಾಜನಂಗಳಿಗೆಲ್ಲ ಧರ್ಮ, ಅರ್ಥ, ಕಾಮ, ಮೋಕ್ಷಗಳ ಮಹತ್ವವನ್ನರುಹಿ, ಭಕ್ತಿಯ ಪ್ರಭಾವವನ್ನು ಬೀರಿದರು. ವೇದಾಂತವಿಷಯಗಳನ್ನು ವಿಶದವಾಗಿ ಶ್ರುತಪಡಿಸಿದರು. ಅವರ ಅಪಾರ ಅನುಭವಕ್ಕೆ ಪಂಡಿತರು ಬೆರಳು ಕಚ್ಚಿದರು. ಮುಂದೆ ಅಲ್ಲಿಂದ ಹೊರಟು ಮಥುರೆ, ವೃಂದಾವನ, ಗೋಕುಲ, ತ್ರ್ಯಂಬಕೇಶ್ವರ, ಒಡ್ಡಿಯ ಜಗನ್ನಾಥ, ಬಾವಡಿಯ ನಾಗನಾಥ, ವೈಜನಾಥ, ತಿರುವಾಳ ತ್ಯಾಗರಾಜೇಶ್ವರ, ಶಿವಕಂಚಿ, ಸೇತು ರಾಮೇಶ್ವರ ಮೊದಲಾದ ಕ್ಷೇತ್ರಗಳ ದರ್ಶನಮಾಡಿಕೊಂಡು, ಮೈಸೂರಿಗೆ ದಯಮಾಡಿಸಿದರು. ಕೃಷ್ಣರಾಜರು ಇವರನ್ನು ಇದಿರ್ಗೊಂಡು ಭಕ್ತಿಯಿಂದ ಅರಮನೆಗೆ ಕರೆದುಕೊಂಡು ಬಂದು ಪಲ್ಲಕ್ಕಿಯಲ್ಲಿ ಮೆರೆಸಿದರು. ಶಿವಯೋಗಿಗಳು ಅರಮನೆಯಲ್ಲಿ ಕೆಲದಿನ ಲಿಂಗಪೂಜಾನಂದ ಸಂಭ್ರಮದೊಳಗಿದ್ದರು.

ಅಲ್ಲಿಯ ಕೆಲವು ಕುಚೋದ್ಯಗಾರರಾದ ಪಂಡಿತರು ಇವರನ್ನು ಶಾಸ್ತ್ರಾರ್ಥಕ್ಕೆ ಆಹ್ವಾನಿಸಿ, ಪೂರ್ವಪಕ್ಷವನ್ನು ಮಂಡಿಸಲು, ತಕ್ಷಣವೇ ಯೋಗಿಗಳು ಅದರ ಸಿದ್ಧಾಂತವನ್ನು ಮಾಡಿ, ತಾವು ಪೂರ್ವಪಕ್ಷವನ್ನೆಸಗಲು, ಆ ಪಂಡಿತರು ಮುಖವನ್ನು ಕಿವುಚಿದರು. ಆಗ ಮುಖಭಂಗಿತರಾದ ವಿದ್ವಾಂಸರಿಗೆ ಶಿವಯೋಗಿಗಳು ನಿಜವಾದ ಜ್ಞಾನದ ರಹಸ್ಯವನ್ನು ಹೇಳಿಕೊಟ್ಟು, ಅವರ ಅಹಂಕಾರವನ್ನು ಹೋಗಲಾಡಿಸಿದರು. ಆಸ್ಥಾನ ಪಂಡಿತರೆಲ್ಲರನ್ನು ಶಿವಯೋಗಿಗಳು ವಾದದಲ್ಲಿ ಜಯಿಸಿದರೆಂಬ ಸುದ್ದಿಯನ್ನು ಕೇಳಿ ವೇದಾಂತ ಸಿದ್ಧಾಂತದಲ್ಲಿ ಜಲ್ಲಿದರಾದ ಪರಕಾಳ ಮಠದ ವೈಷ್ಣವ ಗುರುಗಳು ಇವರ ದರ್ಶನಕ್ಕೆ ಬಂದು ಶಾಸ್ತ್ರಾರ್ಥಮಾಡಿ ಅವರ ಪರತರ ಕುಶಾಗ್ರಮತಿಗೆ ತುಂಬಾ ಅಚ್ಚರಿಬಟ್ಟರು.

ಮುಂದೆ ಶಿವಯೋಗಿಗಳು ನಂಜುಂಡೇಶನ ಬೆಟ್ಟಕ್ಕೆ ಹೋಗಿ ಅಲ್ಲಿ ಚಾಮುಂಡೇಶ್ವರಿಯ ದರ್ಶನಹೊಂದಿ ಸಾವಿರಾರು ಜನರಿಗೆ ಗಣತೃಪ್ತಿಮಾಡಿಸಿದರು. ಅವರೊಡನೆ ದಯಮಾಡಿಸಿದ್ದ ಕೃಷ್ಣರಾಜರು ಆ ಸೇವೆಯ ವೆಚ್ಚದ ಭಾರವನ್ನೆಲ್ಲ ತಾವೇ ವಹಿಸಿಕೊಂಡರು. ಮುಂದೆ ರಾಮೇಶ್ವರಕ್ಕೆ ಹೋಗಬೇಕೆಂದು ಯೋಗಿಗಳು ಸಿದ್ಧರಾಗಲು ಮಹಾರಾಜರೂ ಪರಕಾಳ ಮಠದ ಸ್ವಾಮಿಗಳೂ ಅವರಿಗೆ ಸರ್ವ ಸಾಮಗ್ರಿಗಳನ್ನಣಿಮಾಡಿಕೊಟ್ಟು ಗೌರವದಿಂದ ಬೀಳ್ಕೊಟ್ಟರು.

ಮುಂದೆ ಶಿವಯೋಗಿಗಳು ಚೆನ್ನಪಟ್ಟಣಕ್ಕೆ ದಯಮಾಡಿಸಿದರು. ಅಲ್ಲಿಯ ಭಕ್ತಜನಂಗಳು ಅವರನ್ನು ಇದಿರ್ಗೊಂಡು ಕರೆತಂದು, ಒಬ್ಬ ಶ್ರೀಮಂತನ ಮನೆಯಲ್ಲಿ ಇಳಿಸಿದರು. ಆ ಮನೆಯಲ್ಲಿ ಬ್ರಹ್ಮರಾಕ್ಷಸವೊಂದು ವಾಸವಾಗಿದ್ದಿತು. ದೊಡ್ಡವರು

ಅಂಥ ಮನೆಯಲ್ಲಿದ್ದರೆ ಬ್ರಹ್ಮರಾಕ್ಷಸವು ಓಡಿಹೋಗುತ್ತದೆಂದು ಜನರ ಭಾವನೆಯಾಗಿದ್ದಿತು. ಒಂದು ಮಧ್ಯರಾತ್ರಿ ಶಿವಯೋಗಿಗಳು ನಿದ್ರಿಸುವಾಗ, ಆ ರಾಕ್ಷಸವು ಅಕರಾಳ ರೂಪಧರಿಸಿ ಅವರ ಬಳಿಗೆ ಬಂದು ಗಹಗಹಿಸಿ ನಗಹತ್ತಿತು. ಅದನ್ನು ನೋಡಿ ಶ್ರೀಗಳು "ಜಲ್ಲಿ, ಹೋಗೆಲೆ ಮಾಯೆ" ಎಂದು ಒಂದು ಗೀತೆಯನ್ನು ಹಾಡಿದನು. ಅವರ ಮಹಿಮೆಯನ್ನರಿತ ಬ್ರಹ್ಮರಾಕ್ಷಸವು ಭಯಗೊಂಡು "ಗುರುವೇ, ನನ್ನನ್ನುದ್ಧರಿಸಬೇಕೆಂದು ಪಾದಕ್ಕೆ ಬಿದ್ದಿತು. ಆಗ ಯೋಗಿಗಳು "ನಿನ್ನ ಪಾಪವು ಇಂದಿಗೆ ತೀರಿತು. ನಿನ್ನ ಜನ್ಮಸಾರ್ಥಕವಾಯಿತು. ನೀನು ಹೋದುದಕ್ಕೆ ಮನೆಯ ಮುಂದಿನ ಹುಣಸೆಮರದ ಒಂದು ಶಾಖೆಯು ಕತ್ತರಿಸಿ ಬೀಳುವುದೇ ಗುರುತು !" ಎಂದು ಹೇಳಿದರು. ಆ ಪ್ರಕಾರ ಬ್ರಹ್ಮರಾಕ್ಷಸವು ಬಿಟ್ಟೋಡಿತು.

ಭಕ್ತಜನಗಳು ಬಂದು ಸ್ವಾಮಿಗಳಿಗೆ ವಂದಿಸಿ, ಬ್ರಹ್ಮರಾಕ್ಷಸವು ಬಿಟ್ಟು ಹೋದುದನ್ನು, ಅದರ ಗುರುತಿಗಾಗಿ ಹುಣಸೇಮರದ ಒಂದು ಶಾಖೆಯು ಮುರಿದು ಬಿದ್ದುದನ್ನು ಕಂಡು ಶಿವಯೋಗಿಗಳ ಮಹಿಮೆಯನ್ನು ಕೊಂಡಾಡಿದರು. ಮನೆಯೊಡೆಯನು ಬಂದು, "ಬುದ್ಧೀ, ತಮ್ಮ ಪಾದಾನುಗ್ರಹದಿಂದ ಬ್ರಹ್ಮರಾಕ್ಷಸವಂತೂ ಬಿಟ್ಟು ಹೋಯಿತು. ಮುಂದೆ ಮನೆಯಲ್ಲಿ ಯಾವ ಭೂತವೂ ಪ್ರವೇಶ ಆಗದಂತೆ ನೋಡಿಕೊಳ್ಳಬೇಕಾದರೆ ಏನು ಮಾಡಬೇಕು" ಎಂದು ದೈನ್ಯದಿಂದ ಕೇಳಿಕೊಂಡರು. ಅದಕ್ಕೆ ಯೋಗಿಗಳು ಆತನಿಂದ ೧ಸಾವಿರ ರೂಪಾಯಿಗಳನ್ನು ಇಸಿದುಕೊಂಡು ಮನೆಯಲ್ಲಿ ಸ್ಕಾಂದಪುರಾಣವನ್ನು ಹಚ್ಚಿ ಪೂರ್ತಿಗೊಳಿಸಿ, ಆ ಹಣದಿಂದ ಬಡಬಗ್ಗರಿಗೆಲ್ಲ ಗಣತೃಪ್ತಿಯನ್ನು ಮಾಡಿಸಿದರು. ಮುಂದೆ ಸ್ವಾಮಿಯ ಕೃಪೆಯಿಂದ ಆ ಧನಿಕನ ಸುಖಸಂಪದವು ಸಮೃದ್ಧವಾಯಿತು.

ಆ ಧನಿಕನು ಶಿವಯೋಗಿಗಳಿಗೆ ಅಲ್ಲಿಯೇ ಇರಬೇಕೆಂದು ಆಗ್ರಹದಿಂದ ಬೇಡಿಕೊಂಡನು. ಅದಕ್ಕವರು 'ನಾವು ಒಂದು ಠಾವಿನಲ್ಲಿರುವವರಲ್ಲ; ಸದಾ ಸಂಚಾರಿಗಳು. ಮತ್ತೆ ಬರುವೆವು' ಎಂದು ಸಮಾಧಾನಪಡಿಸಿ ಮುಂದೆ ರಾಮೇಶ್ವರಕ್ಕೆ ಪಯಣ ಬೆಳೆಸಿದರು. ರಾಮನು ಸ್ಥಾಪಿಸಿದ ರಾಮೇಶ್ವರಲಿಂಗವನ್ನು ವಿಧಿವತ್ತಾಗಿ ಪೂಜಿಸಿ ಸೇತುವೆಯನ್ನು ಕಂಡು ಅಚ್ಚರಿಬಟ್ಟು ಅಲ್ಲಿಂದ ಗೋಕರ್ಣಕ್ಕೆ ತೆರಳಿದರು. ಅಲ್ಲಿ ಶಿವನ ಪ್ರಾಣಲಿಂಗವೇ ಆಗಿರ್ದ ಮಹಾಬಲೇಶ್ವರಲಿಂಗವನ್ನು ಕಂಡು ಸಂತಸಬಟ್ಟು, ಪೂಜಿಸಿ, ಕೆಲವು ದಿನ ಅಲ್ಲಿದ್ದು, ಪಂಢರಪುರಕ್ಕೆ ಹೋಗಿ ವಿಠ್ಠಲನ ದರ್ಶನ ಮಾಡಿಕೊಂಡರು. ಆಲಂದಿ ಗ್ರಾಮದಲ್ಲಿ ಶಿವದಾಸ, ರಾಮದಾಸರೆಂಬ ಸಂತರಿರುವರೆಂಬ ಸುದ್ದಿ ಕೇಳಿ ಅಲ್ಲಿಗೆ ಹೋಗಿ ಕೆಲಕಾಲವಿದ್ದು, ಪುನಃ ಕಾಶಿಗೆ ದಯಮಾಡಿಸಿದರು.

## ೯. ನೇಪಾಳದ ದೊರೆಯ ಸತ್ಕಾರದಲ್ಲಿ

ಕಾಶಿಗೆ ಬಂದಕೂಡಲೆ ಮೊದಲಿನ ಪರಿಚಿತರು ಅವರನ್ನು ಗೌರವದಿಂದ ಸ್ವಾಗತಿಸಿದರು. ದಿನಾಲು ಪಂಡಿತರು ಅವರಿಂದ ಶಾಸ್ತ್ರಶ್ರವಣ ಮಾಡಿ ಧನ್ಯರಾಗುತ್ತಿದ್ದರು. ಹೀಗೆ ಕೆಲ ದಿನ ಕಳೆಯಲು, ಮಡಿವಾಳಯೋಗಿಗಳ ಮನಸ್ಸಿನಲ್ಲಿ "ನಾನು ಪುನಃ ನೇಪಾಳಕ್ಕೆ ಹೋಗಿ ಹಿಮಗಿರಿಯ ಉನ್ನತ ಶಿಖರವನ್ನು ನೋಡಬೇಕು. ಅಲ್ಲಿದ್ದುದೆಲ್ಲವನ್ನೂ ಕಾಣಬೇಕೆಂಬ ಸದಿಚ್ಛೆಯಾಯಿತು. ಈ ಸಂಗತಿಯನ್ನು ನೇಪಾಳದ ದೊರೆಯು ತಿಳಿದು, ತನ್ನ ಪರಿವಾರದವರನ್ನು ಕಾಶಿಗೆ ಕಳಿಸಿ, ಶಿವಯೋಗಿಗಳನ್ನು ಒಳ್ಳೆ ಉತ್ಸುಕತೆಯಿಂದ ಬರಮಾಡಿಕೊಂಡನು. ಯೋಗಿಯ ಬ್ರಹ್ಮಚರ್ಯ, ಮುಖಕಾಂತಿ, ಅಂಗಸೌಷ್ಟವಾದಿಗಳನ್ನು ಕಂಡು ದೊರೆಯು ಬೆರಗಾದನು. ಯೋಗಸಂಪತ್ತಿನ ಸೌಖ್ಯಕ್ಕೆ ಯಾವ ಭೋಗಭಾಗ್ಯಗಳೂ ಸರಿಯಾಗಲಾರವೆಂದು ಆತನಿಗೆ ಮನವರಿಕೆಯಾಗಿ ಅವರೊಡನೆ ಒಳ್ಳೆ ಭಕ್ತಿವಹಿಸಿ ನಡೆಯುತ್ತಿದ್ದನು. ಜನರು ಯೋಗಿಗಳ ದರ್ಶನಕ್ಕೆ ದಿನಾಲು ತಪ್ಪದೆ ಬರುತ್ತಿದ್ದರು, ರಾಜನು ದಿನಾಲು ಶಿವಯೋಗಿಗಳನ್ನು ಸುವರ್ಣಪೀಠದಲ್ಲಿ ಕುಳ್ಳಿರಿಸಿ ಪಾದಪೂಜೆ ಮಾಡುತ್ತಿರುವದನ್ನು ಪುರಜನರು ಭಕ್ತಿಯಿಂದ ನಿರೀಕ್ಷಿಸುತ್ತಿದ್ದರು. ಗುರುಗಳು ರಾಜನ ಮೇಲೆ ಸಂಪ್ರೀತರಾಗಿ 'ನೀನು ಮೊದಲು ಕಾಯದ ಮೇಲಿನ ಮೋಹವನ್ನು ಬಿಡಬೇಕು, ಅದೇ ನಿಜಸುಖದ ಮಾರ್ಗವೆಂದು ಬೋಧಿಸಿದರು. ಧನ-ವನಿತಾದಿ ಭೋಗವು ಅನಿತ್ಯವೆಂದು ಉಪದೇಶಿಸಿದರು. ಪರಮಾತ್ಮನನ್ನು ಒಳ್ಳೆ ಭಕ್ತಿಯಿಂದಾರಾಧಿಸುವದು ಸದ್ಗತಿಗೆ ಉತ್ತಮೋಪಾಯವೆಂದು ಹೇಳಿದರು. ಮನವೇ ಬಂಧ ಮೋಕ್ಷಕ್ಕೆ ಕಾರಣವಾಗಿರುವುದರಿಂದ ಮನಸ್ಸಿನ ಬಲೆಗೆ ಸಿಲುಕದಂತೆ ಎಚ್ಚರವಾಗಿರೆಂದುಸುರಿದರು.

ಒಂದು ದಿನ ಯೋಗಿಗಳು ರಾಜನೆದುರಿಗೆ ಹಿಮಗಿರಿಯ ಮೇಲ್ಭಾಗಕ್ಕೆ ಹೋಗಬೇಕೆಂಬ ತಮ್ಮ ಇಚ್ಛೆಯನ್ನು ತಿಳಿಸಿದರು. ಅದಕ್ಕೆ ಆತನು "ಸ್ವಾಮಿಾ, ಚಳಿ, ಮಂಜು, ಹಿಮವಾತ ಇವು ತಮಗೆ ಬಹು ಕಷ್ಟಕೊಡುವವು. ದಯವಿಟ್ಟು ಆ ಪ್ರಯತ್ನಕ್ಕೆ ಕೈಹಾಕಬಾರದೆಂದು ಕೈಮುಗಿದು ಬೇಡಿಕೊಂಡನು.

ಅದಕ್ಕೆ ಯೋಗಿಗಳು "ರಾಜಾ, ನಾವು ಸಾವಿಗಂಜಿ ಸಾಹಸ ಬಿಡಬಹುದೇ ? ಸಾವು ಊರಲ್ಲಿದ್ದರೆ ತಪ್ಪುವದೆ? ನಮಗೆ ಹಿಮಗಿರಿಯಾತ್ರೆ ಮಾಡಬೇಕೆಂಬ ಮನಸ್ಸುಂಟಾಗಿದೆ. ಕಾರಣ ಆ ಯಾತ್ರೆಯನ್ನು ಮಾಡಿಯೇ ತೀರುವೆನು" ಎಂದು ನಿರ್ಧಾರದಿಂದ ನುಡಿದರು. ಆಮೇಲೆ ನೇಪಾಳವನ್ನು ಬಿಟ್ಟು ಹಿಮಗಿರಿಯ ಮಾರ್ಗವಿಡಿದು ಸಾಗಿದರು. ಹಿಮಾಲಯದ ಶೀತವನ್ನು ಎಳ್ಳಷ್ಟೂ ಲೆಕ್ಕಿಸದೆ

ಯೋಗಬಲದಿಂದ ಆಯಾಸವಿಲ್ಲದೆ ೪–೫ ತಿಂಗಳ ವರೆಗೆ ಕೇದಾರನಾಥನ ದೇವಾಲಯದಲ್ಲಿ ವಾಸಮಾಡಿದರು. ಶಿವಯೋಗಿಗಸಾಧ್ಯವಾದುದಾವುದಿರುವದು ? ಅಲ್ಲಿ ಅವರಿಗೆ ಸೂರ್ಯಕಾಂತದ ಶಿಲೆಯೊಂದು ಕಾಣಿಸಿತು ಅದರ ಮೇಲೆ ಬಿಸಿಲು ಬಿದ್ದು ನೀರು ಉಕ್ಕಹತ್ತಿತು. ಅಲ್ಲಿ ಸ್ನಾನಮಾಡಿ ಶೀತ ಜಲವನ್ನು ಕುಡಿದು ಕಾಲಕಳೆಯುತ್ತಿದ್ದರು. ಯೋಗಿಗಳು ಹೋಗಿ ಬಹುದಿನಗಳಾದವು, ಇನ್ನೂ ಯಾಕೆ ಬರಲಿಲ್ಲವೆಂದು ಚಿಂತಿಸುತ್ತ ನೇಪಾಳದೊರೆಯು ತನ್ನ ಅನುಚರರನ್ನು ನೋಡಿಕೊಂಡು ಬರಲು ಕಳಿಸಿಕೊಟ್ಟನು. ಅಷ್ಟರಲ್ಲಿ ಯೋಗಿಗಳು ಹಿಮಾಲಯ ಪ್ರವಾಸ ಮುಗಿಸಿ ತಿರುಗಿ ಬರುತ್ತಿರುವುದನ್ನು ಆ ಅನುಚರರು ಕಂಡು ಪಾದಕ್ಕೆ ಸಾಷ್ಟಾಂಗ ಹಾಕಿ, ರಾಜನ ಬಿನ್ನಪವನ್ನು ನಿವೇದಿಸಿ, ರಾಜನರಮನೆಗೆ ಕರೆತಂದರು.

ಒಂದು ದಿನ ಶಿವಯೋಗಿಗಳು ದೊರೆಯನ್ನು ಏಕಾಂತದಲ್ಲಿ ಕರೆದು “ ಈ ಕನಕ ಸಿಂಹಾಸನವನ್ನು ಮುಂದೆ ಏನು ಮಾಡುವೆ ? ” ಎಂದು ಕೇಳಿದರು. ಅದಕ್ಕೆ ದೊರೆಯು, “ಬುದ್ಧೀ, ತಮ್ಮ ಸಲುವಾಗಿ ಮಾಡಿಸಿಟ್ಟಿದ್ದು ತಮಗೇ ಅರ್ಪಿತವಾಗಲಿ. ಅದನ್ನು ನಾನು ಬೇರೆ ಯಾರಿಗೂ ಸಲ್ಲಿಸಲಾರೆನು ” ಎಂದು ಉತ್ತರ ಕೊಟ್ಟನು. ಆಮೇಲೆ ಶಿವಯೋಗಿಗಳು ಆ ಸಿಂಹಾಸನವನ್ನು ಒಡೆಯಿಸಿ ಚೂರುಚೂರು ಮಾಡಿ, ಬಡಬಗ್ಗರಿಗೆ ಆ ಬಂಗಾರವನ್ನೆಲ್ಲ ಹಂಚಿಬಿಟ್ಟರು. ಕೆಲದಿನದ ಮೇಲೆ ಶ್ರೀಗಳು ಶಿಲಾನದಿಗೆ ಹೋಗುವ ಇಚ್ಛೆಯನ್ನು ವ್ಯಕ್ತಪಡಿಸಿದರು ಆಗ ದೊರೆಯು ಅವರಿಗೆ ೫೦ಸಾವಿರ ರೂಪಾಯಿಗಳನ್ನು ಕೊಟ್ಟನು. ಆಗ ಯೋಗಿಗಳು “ ಈ ಹಣವು ತಮ್ಮ ಬಳಿಯಲ್ಲೇ ಇರಲಿ. ನಾನು ಕೇಳಿದಾಗ ಕೊಡುವಿರಂತೆ ” ಎಂದು ಹೇಳಿ, ಆ ಹಣವನ್ನು ಅಲ್ಲಿಯೇ ಇರಿಸಿದರು. ಮುಂದೆ ನೇಪಾಳ ಬಿಟ್ಟು ಹೊರಟಾಗ ದಾರಿಯಲ್ಲಿ ರಾಮದಾಸ, ಶಿವದಾಸ ಎಂಬ ಸಾಧುಗಳು ಕೂಡಿದರು. ಆಗ ವಿಶೇಷ ಮಳೆ ಸುರಿದದ್ದರಿಂದ ಎಲ್ಲರ ಬಟ್ಟೆಗಳು ತೊಯ್ದವು. ಸಾಧುಗಳು ತಂಡಿಯಿಂದ ಗದಗದ ನಡುಗಹತ್ತಿದರು ಮುಂದೊಂದು ಗುಡಿ ಬರಲು ಎಲ್ಲರೂ ಅದರೊಳಗೆ ಸೇರಿದರು. ಮುಡಿವಾಳ ಶಿವಯೋಗಿಯು ಗುಡುಗುಡಿ ಹೊತ್ತಿಸಿ ಬೆಂಕಿ ಮಾಡಲು, ಸಾಧುಗಳು ಸೌದೆಯನ್ನು ತಂದು ಆ ಬೆಂಕಿಯ ಮೇಲಿಟ್ಟು ಉರಿಕಾಯಿಸಿಕೊಂಡರು ಆಗ ಸಾಧುಗಳಿಗೆ ಹಸಿವೆ ಹೆಚ್ಚಾಗಿ ಕಂಗಾಲಾಗಿರಲು ಯೋಗಿಗಳು ಅವರಿಂದ ಸಣ್ಣ ಸಣ್ಣ ಕಲ್ಲುಗುಂಡುಗಳನ್ನು ತರಿಸಿ, ಭೂಮಿಯಲ್ಲಿ ಹೂಳಿ, ಮೇಲೆ ಉರಿಹಚ್ಚಿದರು. ಕ್ಷಣಾರ್ಧದಲ್ಲಿ ಆ ಕಲ್ಲುಗಳು ಕಂದಮೂಲಗಳಂತೆ ಬೆಂದು ಮೆತ್ತಗಾಗಿರಲು ಎಲ್ಲರೂ ಸೇವಿಸಿ ತಮ್ಮ ಹಸಿವನ್ನು ಹಿಂಗಿಸಿಕೊಂಡರು. ಶಿವಯೋಗಿಯ ಮಹಿಮೆಯನ್ನು ಮನಸಾರೆ ಕೊಂಡಾಡಿದರು.

ಮುಂದೆ ಶಿವಯೋಗಿಗಳು ಶಿಲಾನದಿಗೆ ಬಂದು ಅದರಲ್ಲಿ ಕಿರಿಬೆರಳನ್ನಿದ್ದಲು ಅದು ಕಲ್ಲಾಯಿತು. ಇದನ್ನು ಸಾಧುಗಳು ನೋಡಿ ಬೆರಗುಪಟ್ಟರು. ಅಲ್ಲಿಂದ ಮುಂದೆ ಕಾಶ್ಮೀರ, ಬರೋಡಾ, ಪುಣೆಗಳಿಗೆ ಹೋಗಿ ಅಲ್ಲಿಯ ರಾಜರುಗಳಿಂದ ಮಾನವನ್ನಪಡೆ ಹೊಂದಿದರು. ಆ ಮೇಲೆ ಹೈದರಾಬಾದಿಗೆ ಬಂದು ಗುಡುಗುಡಿ ಸೇದುವಾಗ ಮುಸಿಯ ಮೇಲೆ ಎರಡು ಹರಳನ್ನಿಟ್ಟು ಬೆಂಕಿ ಮಾಡಿದುದನ್ನು ಕಂಡು ಜನರೆಲ್ಲ ಬೆರಗಾದರು. ಈ ಸುದ್ದಿಯನ್ನು ನಿಜಾಮನು ಕೇಳಿ ಅವರನ್ನು ಅರಮನೆಗೆ ಬರ ಮಾಡಿಕೊಂಡು ಅವರಿಗೆ ಅರ್ಪಿಸಲು ಒಂದು ಬಂಗಾರದ ತಾಟಿನಲ್ಲಿ ಗೋಮಾಂಸ ವನ್ನೂ ಇನ್ನೊಂದು ತಾಟಿನಲ್ಲಿ ಪುಷ್ಪಫಲಗಳನ್ನೂ ತಂದಿರಿಸಿದನು. ಗೋಮಾಂಸದ ತಟ್ಟೆಯ ಮುಸುಕು ತೆಗೆಯಲು, ಕೆಂಪು ಹೂಗಳು ಕಾಣಿಸಿಕೊಂಡವು. ಎಲ್ಲರಿಗೂ ಆಶ್ಚರ್ಯವಾಯಿತು. ನಿಜಾಮನು ಸಂತುಷ್ಟನಾಗಿ ಅವರ ಪಾಂಡಿತ್ಯವನ್ನು ಪರೀಕ್ಷಿ ಸಲು ಒಡ್ಡೋಲಗವನ್ನು ನೆರೆಯಿಸಿ, ಪಂಡಿತರನ್ನು ಬರಮಾಡಿಕೊಂಡನು. ಯೋಗಿ ಗಳು ಪಂಡಿತರ ಬಾಯಿಯೇಳದಂತೆ ವಾದಿಸಲು, ಎಲ್ಲರೂ ಅವರ ಘನತೆಗೆ ತಲೆವಾಗಿ ದರು. ನಿಜಾಮನು "ಬುದ್ಧೀ ಇಲ್ಲಿ ತಮಗೊಂದು ಮಠವನ್ನು ಕಟ್ಟಿಸಿಕೊಡುವೆನು. ತಾವು ಇಲ್ಲಿಯೇ ಇರಬೇಕೆಂದು" ಬಹುವಿಧವಾಗಿ ಪ್ರಾರ್ಥಿಸಿಕೊಂಡನು. ಆದರೆ ಅವರು 'ನವಾಬಸಾಹೇಬರೇ, ನಾವು ಹಳ್ಳಿಗೆ ಏಕರಾತ್ರಿ, ಪಟ್ಟಣಕ್ಕೆ ಪಂಚರಾತ್ರಿ ಹೀಗೆ ವಾಸಮಾಡುತ್ತ ಸದಾ ಸಂಚರಿಸತಕ್ಕವರು. ನಮಗೇಕೆ ಮಠ?' ಎಂದು ನಿರಾಕರಿಸಿದರು. ಆ ಮೇಲೆ ನಿಜಾಮನು ಅವರಿಚ್ಛೆಯಂತೆ ಯೋಗಿಗಳಿಗೆ ಕಾವಿ ಟೊಪ್ಪಿಗೆ, ಅವುಗೆಗಳನ್ನು ಕಾಣಿಕೆಯಿತ್ತು ಬೀಳ್ಕೊಟ್ಟನು.

ಮುಂದೆ ಮಕ್ಕಾಯಾತ್ರೆಗೆ ಹೋಗಿ, ಕೆಲದಿನ ಕಾಬೂಲ, ಗಿರ್ಝನಿ ಪಟ್ಟಣ ಗಳಲ್ಲಿದ್ದು ಮುಂದೆ ಮಕ್ಕೆಗೆ ಹೋಗಿ, ಅಲ್ಲಿ ಮಕ್ಕಾಗಿರಿಯಲ್ಲಿ ಅನೇಕ ಸಾಧುಗಳು ತಪಸ್ಸು ಮಾಡುವದನ್ನು ಕಂಡು ಬೆರಗಾದರು. ಆ ಯತಿಗಳು ಶಿವಯೋಗಿಯ ಸಂದರ್ಶನದಿಂದ ಧನ್ಯರಾಗಿ ಪ್ರಣಾಮಂಗೈದು, ಅವರನ್ನು ಸತ್ಕರಿಸಿದರು. ಶಿವ- ಯೋಗಿಗಳು ಮಕ್ಕಾಗಿರಿಯ ಶಿಖರದ ಮೇಲೆ ಕೆಲದಿನ ಅನುಷ್ಠಾನ ಮಾಡಿ ಬಳಿಕ ಕಾಶೀವಾಡಕ್ಕೆ ಬರಲು ಬಾಣಾವರದಲ್ಲಿ ಮರುಳಸಿದ್ಧಯೋಗಿಗಳೆಂಬ ಮಹಾ ಮಹಿಮರು ದಯಮಾಡಿಸಿರುವರೆಂಬುದನ್ನು ಕೇಳಿ ಅವರ ದರ್ಶನ ಪಡೆಯಬೇಕೆಂಬ ಅಪೇಕ್ಷೆಯುಂಟಾಯಿತು. ಜನರು ತಂಡತಂಡವಾಗಿ ಅವರ ದರ್ಶನಕ್ಕೆ ಹೋಗು ತ್ತಿದ್ದುದರಿಂದ ಬಹಳ ಗದ್ದಲವಾಗಿದ್ದಿತು. ಒಬ್ಬ ಮುದುಕಿಯು ಯೋಗಿಗಳಿಗೆ "ಸಾವಿರಾರು ಜನರ ಗದ್ದಲದ ಮರುಳಸಿದ್ಧ ಶಿವಯೋಗಿಗಳ ದರ್ಶನ ನಿನಗೆ ಸಾಧ್ಯ ವಿಲ್ಲ ಗೋಸಾವಿ" ಎಂದು ಹೇಳಿದಳು. ಅದಕ್ಕೆ ಮಡಿವಾಳರು "ತಾಯಿ, ನಿನ್ನ ದಯೆ

ಯೊಂದಿದ್ದರೆ ಸಾಕು, ಸಾವಿರ ಜನರೊಳಗೆ ನುಗ್ಗಿ ಅವರ ದರ್ಶನ ಪಡೆಯುವೆನು" ಎಂದು ಹೇಳಿ ಆಕೆಯ ಆಶೀರ್ವಾದ ಪಡೆದು ಖಡ್ಗವನ್ನು ಹಿರಿದು 'ಎಲ್ಲಿರುವರು ಮರುಳಸಿದ್ಧರೆಂದು' ಆರ್ಭಟಿಸುತ್ತ ಮುಂದುವರಿಯಲು ಜನಗಳು ಹೆದರಿ ಅವರಿಗೆ ದಾರಿ ಬಿಟ್ಟರು. ಇವರ ತೇಜಸ್ಸನ್ನು ಕಂಡು ಮರುಳಸಿದ್ಧರು ಅಪ್ರತಿಭರಾಗಿ ತಮ್ಮ ಬದಿಯಲ್ಲಿ ಅವರನ್ನು ಕುಳ್ಳಿರಿಸಿಕೊಂಡು ಕುಶಲ ಪ್ರಶ್ನೆಗಳನ್ನು ಕೇಳಿದರು.

ಮುಂದೆ ಮಡಿವಾಳರು ಮರುಳಸಿದ್ಧರಿಂದ ಅಪ್ಪಣೆಪಡೆದು ಕಾಶೀವಾಡದಲ್ಲಿ ಕೂಡಿದ ಸಿದ್ಧವೀರಾರ್ಯ ಎಂಬ ಯತಿಗಳನ್ನು ಕರೆದುಕೊಂಡು ಅಲ್ಲಿಂದ ಮುಂದೆ ಪ್ರವಾಸ ಬೆಳೆಸಿದರು. ಯೋಗಿಗಳಲ್ಲಿ ವೆಚ್ಚಕ್ಕೆ ರೂಪಾಯಿಗಳಿಲ್ಲದ್ದರಿಂದ ಸಿದ್ಧವೀರಾರ್ಯರು ಅವರಿಗೆ ೫೦೦ ರೂಪಾಯಿಗಳನ್ನು ಕೊಟ್ಟರು. ಆ ಅರ್ಥ ಹಣದಿಂದ ಗಣತೃಪ್ತಿ ಮಾಡಿಸಿ ಉಳಿದರ್ಥವನ್ನು ದೀನದಲಿತರಿಗೆ ದಾನಕೊಟ್ಟು ಮಥುರಾನಗರಿಗೆ ದಯಮಾಡಿಸಿದರು.

ಮಥುರೆಯಲ್ಲಿ ಕೆಲವು ಸಾಧುಗಳು ಗಾಂಜಿ ಸೇದುವುದನ್ನು ಕಂಡು, ತಮ್ಮ ಬ್ರಹ್ಮತೇಜಸ್ಸಿನ ಪ್ರಭಾವದಿಂದ ಅವರ ದುಶ್ಚಟವನ್ನು ಬಿಡಿಸಿದರು. ಮುಂದೆ ಬಾಣಾವರಕ್ಕೆ ಹೋಗಿ ಸಿದ್ಧಮಲ್ಲಾರ್ಯರೊಡನೆ ಶ್ರೀಶೈಲಕ್ಕೆ ಪ್ರಯಾಣ ಬೆಳೆಸಿದರು. ಹಾದಿಯಲ್ಲಿ ಜಾವಾಲಿ ನರಸಿಂಹಮೂರ್ತಿಯ ದರ್ಶನಮಾಡಿಕೊಂಡು, ವಾದಿ ಗಜಸಿಂಹನೆಂಬ ಬಿರುದಾಂಕಿತನಾದ ರಂಗಾಚಾರ್ಯನೆಂಬವನನ್ನು ತನ್ನ ಅಗಾಧ ಪಾಂಡಿತ್ಯದಿಂದ ವಾದದಲ್ಲಿ ಸೋಲಿಸಿ, ಆತನ ಗರ್ವಹರಣ ಮಾಡಿದರು. ಅಲ್ಲಿಂದ ಸಿದ್ಧಮಲ್ಲಾರ್ಯರೊಡನೆ ಶ್ರೀಗಿರಿಗೆ ಹೋಗಿ, ಶ್ರೀ ಮಲ್ಲಿಕಾರ್ಜುನನ ಪೂಜಾ ಸಂಭ್ರಮದಲ್ಲಿ ಕೆಲದಿನ ಕಳೆದರು.

## ೧೦. ಸೊಗಲ ಸೋಮೇಶ್ವರನ ಸನ್ನಿಧಿ ಮತ್ತು ಚಿದಂಬರದೀಕ್ಷಿತರ ದರ್ಶನ

ಮುಂದೆ ಮಡಿವಾಳ ಶಿವಯೋಗಿಗಳು ಸಿದ್ಧಮಲ್ಲಾರ್ಯರೊಡನೆ ಸೊಗಲ ಸೋಮನಾಥ ಮಂದಿರಕ್ಕೈದಿ, ಅಲ್ಲಿ ಕೆಲದಿನ ಅನುಷ್ಠಾನ ಮಾಡಿದ ಬಳಿಕ ಸಿದ್ಧ-ಮಲ್ಲಾರ್ಯರು ಬಾಣಾವರಕ್ಕೆ ತೆರಳಿದರು. ಸೊಗಲದಲ್ಲಿ ದೊಡವಾಡ ಕುಲಕರ್ಣಿ ಸಂಗಪ್ಪನೆಂಬಾತನು ಯೋಗಿಗಳ ಶಿಷ್ಯತ್ವವನ್ನು ವಹಿಸಿ ಸಂಸ್ಕೃತಾಭ್ಯಾಸ ಮಾಡಹತ್ತಿದನು. ಸುತ್ತು ಹಳ್ಳಿಗಳ ಜನರು ಮಡಿವಾಳರ ಕೀರ್ತಿಯನ್ನು ಕೇಳಿ ಅಲ್ಲಿಗೆ ಬಂದು ಅವರ ದರ್ಶನದಿಂದ ಧನ್ಯರಾಗುತ್ತಿದ್ದರು. ದೆವ್ವಬಡಿದವರು, ಮಕ್ಕಳಿಲ್ಲದವರು, ಕಣ್ಣುಹೋದವರು, ರೋಗರುಜೆಯಡಿಸಿದವರು, ವ್ಯಾಪಾರದಲ್ಲಿ ನಷ್ಟವಾದವರು

ಬಂದು ಸ್ವಾಮಿಯ ದರ್ಶನದಿಂದ ತಮ್ಮ ಕುಂದು ಕೊರತೆಗಳನ್ನು ನೀಗಿಸಿಕೊಳ್ಳು ತ್ತಿದ್ದರು.

ಸೊಗಲದಲ್ಲಿದ್ದ ಸಿದ್ಧನ ಗವಿಯಲ್ಲಿ ಯೋಗಿಗಳು ಕೆಲದಿನ ವಾಸಿಸಿರಲು, ಒಂದು ದಿನ ಬಸವಪ್ಪನೆಂಬವನು ಅಲ್ಲಿಗೆ ಬಂದು ಅವರ ದರ್ಶನಹೊಂದಿ, ರಾತ್ರಿಯಾಗಿರಲು ಅಲ್ಲಿಯೇ ಗವಿಯ ಬಾಗಿಲ ಹೊರಗೆ ಮಲಗಿಕೊಂಡನು. ಮಧ್ಯರಾತ್ರಿಯಲ್ಲಿ ಎರಡು ಹುಲಿಗಳು ಗರ್ಜಿಸುತ್ತ ಬರಲು, ಆತನ ಎದೆಯೊಡೆದು ನೀರಾಯಿತು. ಅಷ್ಟರಲ್ಲಿ ಯೋಗಿಗಳಿಗೆ ಎಚ್ಚರವಾಗಿ ಹೊರಗೆ ಬಂದು ಹುಲಿಗಳನ್ನು ಹೊಡೆದೋಡಿಸಿ, ಶವ ದಂತೆ ಬಿದ್ದ ಬಸವಪ್ಪನನ್ನು ಬಡಿದೆಬ್ಬಿಸಿ ರಕ್ಷಿಸಿದರು. ಈ ವಾರ್ತೆಯನ್ನು ಕೇಳಿ, ಜನರು ತಂಡತಂಡವಾಗಿ ಯೋಗಿಗಳ ದರ್ಶನಕ್ಕೆ ಬಂದು ಅವರ ಕೃಪಾಶೀರ್ವಾದ ಪಡೆಯುತ್ತಿದ್ದರು.

ಮುರುಗೋಡದ ಜನರು ಮಡಿವಾಳರ ಮಹಿಮೆಯನ್ನು ಕೇಳಿ, ತಮ್ಮೂರಿಗೆ ದಯಮಾಡಿಸಬೇಕೆಂದು ಬಹು ಭಕ್ತಿಯಿಂದ ಪ್ರಾರ್ಥಿಸಿಕೊಂಡರು. ಶಿವಯೋಗಿಗಳು ಅವರ ಭಕ್ತಿಗೆ ಮೆಚ್ಚಿ ಮುರುಗೋಡಕ್ಕೆ ಬಂದು ಶೆಟ್ಟರ ಮನೆಯಲ್ಲಿಳಿಕೊಂಡರು. ಶೆಟ್ಟಿಯು ಶಿವಯೋಗಿಗಳ ಉಪಚಾರವನ್ನು ಒಳ್ಳೆ ಭಕ್ತಿಯಿಂದ ಮಾಡಿದನು. ದಿನಾಲು ಒಪ್ಪತ್ತು ಶೆಟ್ಟರ ಮನೆಯಲ್ಲಿ ಪ್ರಸಾದ ತೆಗೆದುಕೊಂಡು, ಅಲ್ಲಿ ಕೆಲಹೊತ್ತು ಪವಡಿಸಿ, ಪುನಃ ಸಿದ್ಧನ ಗವಿಗೆ ಬಂದು ರಾತ್ರಿಯಲ್ಲಿ ವಾಸಿಸುತ್ತಿದ್ದರು. ನಸುಕಿನಲ್ಲೆದ್ದು ನಾಗರಕೆರೆಯಲ್ಲಿ ಜಳಕ ಮಾಡಿ ಶೆಟ್ಟರ ಮನೆಗೆ ಬರುತ್ತಿದ್ದರು. ಈ ನೇಮವನ್ನು ಅವರು ಯಾರಿಗೂ ತೋರಗೊಟ್ಟಿರಲಿಲ್ಲ. ಆ ಗವಿಯಲ್ಲಿ ಕಾಳು ತಿಂದು ಜೀವಿಸುವ ಒಬ್ಬ ಬಾವಾ ಮತ್ತು ಕುರುಬರ ರಾಯಪ್ಪನೆಂಬಾತ ಇವರೀರ್ವರು ಯೋಗಿಗಳ ಶಿಷ್ಯರಾಗಿ ಜೊತೆಯಲ್ಲಿ ವಾಸಿಸುತ್ತಿದ್ದರು.

ಮುರುಗೋಡದ ಮಲ್ಹಾರಿರಾವ ಕುಲಕರ್ಣಿಯ ಮಗನು ಯಾವುದೋ ಅಪರಾಧದ ಆರೋಪದಿಂದ ಸಿಕ್ಕುಬಿದ್ದಿದ್ದನು. ಆತನಿಗೆ ಕಠಿಣ ಶಿಕ್ಷೆಯು ಕಾಯ್ದಿತ್ತು. ಆಗ ಮಲ್ಹಾರಿರಾಯನು ಯೋಗಿಗಳ ಬಳಿಗೆ ಬಂದು ದೈನ್ಯೋಕ್ತಿಯಿಂದ ತನ್ನ ಮಗನಿಗೆ ಶಿಕ್ಷೆಯಾಗದಂತೆ ಕರುಣಿಸಬೇಕೆಂದು ಬೇಡಿಕೊಂಡನು. ಆಗ ಗುರುಗಳು 'ನಿನ್ನ ಮಗನನ್ನು ಇಲ್ಲಿಗೆ ಕರೆಯಿಸು, ಹೆದರದಿರು' ಎಂದು ಅಭಯವಿತ್ತರು. ಮಗನನ್ನು ಕರೆದುಕೊಂಡು ಬಂದು ಕುಲಕರ್ಣಿಯು ಯೋಗಿಗೆ ಸಾಷ್ಟಾಂಗ ಹಾಕಿಸಿ ದನು. ಮುಂದೆ ಗುರುಗಳು ಕುಲಕರ್ಣಿಯ ಮಗನನ್ನು ಕರೆದುಕೊಂಡು ಗಾಣಗಾ- ಪುರಕ್ಕೆ ಹೊರಟರು. ಅಲ್ಲಿ ಕೆಲ ಜನ ಪ್ರಮುಖ ಭಕ್ತರೊಡಗೂಡಿ ನದೀ ಸ್ನಾನಕ್ಕೆ ಹೋದರು. ಸ್ನಾನಮಾಡಿ ಶಿವಪೂಜೆಗೆಂದು ತಂಬಿಗೆಯಲ್ಲಿ ನೀರು ತುಂಬಿಟ್ಟಿರಲು

ಕುಲಕರ್ಣಿಯ ಮಗನು ಅರಿಯದಲೆ ಅದನ್ನು ಮುಟ್ಟಿದನು. ಗುರುಗಳು ಸಿಟ್ಟಾಗಿ ಕೈ ಚಿತ್ರದಿಂದ ಅವನಿಗೆ ಒಳಿತಾಗಿ ತಳಿಸಿದರು. ಆತನು ದೊಪ್ಪನೆ ನೆಲಕ್ಕೆ ಬೀಳಲು ಭಕ್ತರು ಬಂದು ಉಪಚರಿಸಹತ್ತಿದರು. ಆಗ ಗುರುಗಳು "ನಮ್ಮ ಚಿತ್ತದ ಶಿಕ್ಷೆಯಾದ ಮೇಲೆ ಸರಕಾರದ ಶಿಕ್ಷೆಯೆಲ್ಲಿಯದು ಬಿಡಿ" ಎಂದರು. ಎಲ್ಲರಿಗೂ ಆನಂದವಾಯಿತು. ಮಾರನೆಯ ದಿನ ಕೋರ್ಟಿನಲ್ಲಿ ಕುಲಕರ್ಣಿಯ ಮಗನು ನಿರಪರಾಧಿಯೆಂದು ನ್ಯಾಯಾಧೀಶನು ತೀರ್ಪುಕೊಟ್ಟನು.

ಪುನಃ ಗುರುಗಳು ಸಿದ್ಧನ ಗವಿಗೆ ಬಂದು ಬಾವಾ ಮತ್ತು ಕುರುಬರ ರಾಯಪ್ಪನಿಗೆ "ಇನ್ನು ಮೇಲೆ ನಾವು ಈ ಗವಿಯಲ್ಲಿರಕೂಡದು. ಸರಕಾರವು ನಮ್ಮನ್ನೆಳೆದೊಯ್ಯುವದು" ಎನ್ನಲು, ಅವರು "ನಾವಂತೂ ಗವಿಯನ್ನೆಂದಿಗೂ ಬಿಡುವದಿಲ್ಲ, ನೀವೇ ಬಿಟ್ಟು ಹೋಗಿ"ರೆಂದರು. ಆಗ ಗುರುಗಳು ನಿರುಪಾಯರಾಗಿ ಬೇರೆ ಕಡೆಗೆ ಹೋದರು. ಅಂದು ರಾತ್ರಿ ಕಳ್ಳರು ಊರಲ್ಲಿ ಒಬ್ಬ ಸಾವುಕಾರನ ಮನೆಗೆ ಕನ್ನಾ ಕೊರೆದು, ಬಂಗಾರದ ಆಭರಣಗಳನ್ನು ಕದ್ದು ತಂದು, ಸಿದ್ಧನಗವಿಯ ಕಾಳಿನ ಬುಟ್ಟಿಯಲ್ಲಿ ಮುಚ್ಚಿಟ್ಟು ಹೋಗಿಬಿಟ್ಟರು. ಇತ್ತ ಸರಕಾರದ ಜವಾನರು ಆಭರಣಗಳನ್ನು ಶೋಧಿಸುತ್ತಾ ಗವಿಗೆ ಬಂದು ಹುಡುಕುತ್ತಿರಲಾಗಿ ಆಭರಣಗಳು ಸಿಕ್ಕವು. ಆಗ ಅಲ್ಲಿದ್ದ ಈರ್ವರನ್ನೆಳೆದೊಯ್ದು ಸೆರೆಮನೆಯಲ್ಲಿ ಹಾಕಿದರು. ಚೌಕಸಿಯಲ್ಲಿ ನೀವೇಕೆ ಆಭರಣಗಳನ್ನು ಕದ್ದಿರೆಂದು ಕೇಳಲು ಅವರು "ನಾವು ಕದ್ದಿಲ್ಲ. ಅವು ಅಲ್ಲಿ ಹೇಗೆ ಬಂದವೋ ನಮಗೆ ಗುರುತಿಲ್ಲ. ನಮ್ಮ ಗುರುಗಳಿಗೆ ಗುರುತು" ಎಂದರು. ಗುರುಗಳನ್ನು ಜವಾನರು ಕರೆದುಕೊಂಡು ಬರಲಾಗಿ, ಅವರು ಮುಂದೆ ಬರುವ ಅನಿಷ್ಟವನ್ನು ತಿಳಿದದ್ದರಿಂದಲೇ ಅವರಿಗೆ ಎಚ್ಚರಿಕೆ ಕೊಟ್ಟಿದ್ದೆವು. ಅವರು ಕೇಳದ್ದರಿಂದ ಅವರ ಹಾಡು ಹೀಗಾಯಿತೆಂದು ಕೋರ್ಟಿಗೆ ತಿಳಿಸಿದರು. ನ್ಯಾಯಾಧೀಶನು ಅವರ ಮಹಿಮೆಯನ್ನು ಮನಗಂಡು ಅವರೀರ್ವರ ಬಿಡುಗಡೆ ಮಾಡಿದನು.

ಮುಂದೆ ಗುರುಗಳಿಗೆ ಘನಕೀರ್ತಿವಂತರಾದ ಚಿದಂಬರ ದೀಕ್ಷಿತರ ದರ್ಶನ ಹೊಂದಬೇಕೆಂಬಪೇಕ್ಷೆಯುಂಟಾಯಿತು. ಆ ಪ್ರಕಾರ ಅವರು ದೀಕ್ಷಿತರ ಆಶ್ರಮಕ್ಕೆ ಬರಲು. ದೀಕ್ಷಿತರು ಇದಿರೆದ್ದು ಬಂದು ಅವರನ್ನು ಆಲಿಂಗಿಸಿ ತಮ್ಮ ಬಳಿಯಲ್ಲಿ ಕುಳ್ಳಿರಿಸಿಕೊಂಡರು. ದೀಕ್ಷಿತರಲ್ಲಿಗೆ ಶ್ರವಣಕ್ಕೆ ಬಂದ ಬ್ರಾಹ್ಮಣರೆಲ್ಲ ಈ ಹೊಸ ವ್ಯಕ್ತಿಯನ್ನು ಕಂಡು ಆಶ್ಚರ್ಯಚಕಿತರಾದರು. ದೀಕ್ಷಿತರು ಶಂಕರರೂಪಿಗಳು. ಮಡಿವಾಳರು ವೀರಭದ್ರಸ್ವರೂಪರು. ಆ ಕಾರಣದಿಂದ ಅವರೀರ್ವರಲ್ಲಿ ಗಾಢವಾದ ಸ್ನೇಹವು ಅಂಕುರಿಸಿತು. ದೀಕ್ಷಿತರ ಅಪ್ಪಣೆಯ ಪ್ರಕಾರ ಮಡಿವಾಳ ಯೋಗಿಗಳು ಬಂದಂಥ ಜನಗಳಿಗೆ ಒಳ್ಳೆ ರಸವತ್ತಾಗಿ ವೇದಾಂತದ ಶ್ರವಣ ಮಾಡಿಸಿದರು. ಅವರ

ಜಾಣ್ಮೆಗೆ ಮೆಚ್ಚಿ ಜನಗಳು ತಲೆದೂಗಿದರು. ಹೀಗಿರಲು ಕೆಲ ದಿನಗಳನಂತರ ದೀಕ್ಷಿತರ ಬಳಿಗೆ ಒಬ್ಬ ತಾರ್ಕಿಕರು ಬಂದು, ದೀಕ್ಷಿತರಿಗೆ ನಮಿಸಿ "ಯಾರಾದರೂ ಏನೇ ಪ್ರಶ್ನೆ ಮಾಡಿದರೂ ನಾನು ಅದನ್ನು ಸುಳ್ಳೆಂದು ಸಿದ್ಧಮಾಡಿ ತೋರಿಸುವೆ"ನೆಂದರು. ಆಗ ಮಡಿವಾಳರು "ಏನಯ್ಯಾ, ತಾರ್ಕಿಕಶಾಸ್ತ್ರೀ, ನಿನ್ನ ತಾಯಿಯು ಪತಿವ್ರತಾ-ಶಿರೋಮಣಿಯು, ತನ್ನ ಗಂಡನಿಂದಲೇ ನಿನ್ನನ್ನು ಹಡೆದಿರುವಳು" ನೀನು ಇದನ್ನು ಸುಳ್ಳುಮಾಡಿ ತೋರಿಸೆಂದರು. ಆಗ ಏನೊಂದೂ ಮಾತಾಡದೆ ತಾರ್ಕಿಕನು ಮಡಿವಾಳರ ಪಾದಕ್ಕೆರಗಿ ನಿಂದನು. ದೀಕ್ಷಿತರು ತಾರ್ಕಿಕನಿಗೆ ಉಚಿತವಿತ್ತು ಕಳುಹಿದರು.

ಒಂದು ದಿನ ದೀಕ್ಷಿತರು ತಾವೊಂದು ಯಜ್ಞವನ್ನು ಹೂಡಿ ಸಂಸ್ಥಾನಿಕರು, ದೇಸಾಯಿ-ದೇಶಪಾಂಡೆಯರು, ಕುಲಕರ್ಣಿಯರು ಮೊದಲಾದವರಿಂದ ನೆರವು ಪಡೆದರು. ಕೋಟ್ಯಾಗಾರದ ವ್ಯವಸ್ಥೆಯನ್ನೆಲ್ಲ ದೀಕ್ಷಿತರು ಮಡಿವಾಳರಿಗೊಪ್ಪಿಸಿದರು. ಮಡಿವಾಳರ ಮಹಿಮೆಯಿಂದ ಪ್ರತಿನಿತ್ಯ ಅಸಂಖ್ಯ ಜನರಿಗೆ ಮೃಷ್ಟಾನ್ನಭೋಜನವಾಗುತ್ತಿತ್ತು. ಯಾವುದಕ್ಕೂ ಕೊರತೆಯಾಗಲಿಲ್ಲ. ಒಮ್ಮೆ ಅಕಸ್ಮಾತ್ ತುಪ್ಪವು ಕಡಿಮೆ ಬೀಳಲು ದೀಕ್ಷಿತರು ಗಾಬರಿಗೊಂಡು ಮಡಿವಾಳಯೋಗಿಗಳಿಗೆ ತಿಳಿಸಿದರು. ಯೋಗಿಗಳು ಹೆದರುವ ಕಾರಣವಿಲ್ಲೆಂದು ದೀಕ್ಷಿತರಿಗೆ ತಿಳಿಸಿ,ಹರಿವ ಗಂಗೆಯ ನೂರಾರು ಕೊಡ ನೀರು ತರಿಸಿ ನೀಡಲು ಅದೇ ತುಪ್ಪವಾಗಿ ಜನಗಳು ಅದನ್ನು ಸುರಿದು ತೇಗಿದರು. ಮಡಿವಾಳರು ನೀರನ್ನು ತುಪ್ಪವಾಗಿ ಮಾಡಿದ ಪವಾಡವು ಎಲ್ಲೆಡೆಯಲ್ಲಿಯೂ ಹಬ್ಬಿ, ಜನರು ಅವರ ದರ್ಶನಕ್ಕೆ ಗುಂಪುಗುಂಪಾಗಿ ಬಂದು ಅವರ ಮಹಿಮೆಯನ್ನು ಕೊಂಡಾಡಿದರು. ದೀಕ್ಷಿತರು ಯಜ್ಞ ಮುಗಿಸಿ ಅವಭೃತಸ್ನಾನ ಮಾಡಿ ಎಲ್ಲರಿಗೂ ಬೀಳ್ಕೊಟ್ಟರು. ಶಿವಯೋಗಿಗಳು ಪುನಃ ಸೊಗಲದ ಸಿದ್ಧನ ಗವಿಗೆ ಬಂದರು.

## ೧೧. ಬಾಗಲಕೋಟೆ-ಮುರುಗೋಡಗಳಲ್ಲಿ ತೋರಿಸಿದ ಪವಾಡಗಳು

ಮಡಿವಾಳಯೋಗಿಗಳು ಸಿದ್ಧನಗವಿಯಲ್ಲಿರುವಾಗ ಮುರುಗೋಡ ಶೆಟ್ಟರವರ ಮಗಳ ಲಗ್ನವು ಬಾಗಿಲುಕೋಟೆಯಲ್ಲಿ ನಿಶ್ಚಯವಾಗಿತ್ತು. ಶೆಟ್ಟರ ಬಿನ್ನಹದ ಪ್ರಕಾರ ಮಡಿವಾಳರು ಬಾಗಿಲುಕೋಟೆಗೆ ದಯಮಾಡಿಸಿದರು. ಬೀಗರ ಮನೆಯಲ್ಲಿ ಬಂದವರೆಲ್ಲರಿಗೂ ಸುಗ್ರಾಸಭೋಜನವಾಯಿತು. ಊಟವಾದ ನಂತರ ಒಬ್ಬ ತರುಣ ವೇಶ್ಯಾಸ್ತ್ರೀಯಳ ಗಾನನೃತ್ಯವು ಪ್ರಾರಂಭವಾಯಿತು, ಮಡಿವಾಳರು ತಲೆಗೊಂದು ಟೊಪ್ಪಿಗೆಯನ್ನು ಹಾಕಿಕೊಂಡು ಕೋರಿಯನ್ನು ಹೊದ್ದುಕೊಂಡು ಮಂಚದ ಮೇಲೆ

ಕುಳಿತಿದ್ದರು. ಅವರ ರೂಪಾತಿಶಯವನ್ನು ಕಂಡು ಆ ವೇಶ್ಯೆಯು ಮೋಹಿತಳಾಗಿ ಒನಪು ಒಯ್ಯಾರಮಾಡುತ್ತ ಮಡಿವಾಳರ ಬಳಿ ಸಾರ್ದಳು. ಆಗ ಅವರು "ಎಲೆ ಹುಡಿಗಿ, ನೀನೇಕೆ ಇತ್ತ ಬಂದೆ?" ಎಂದು ಕೇಳಿದರು. ಆಗ ಅವಳು "ನಾನು ನಿಮ್ಮೊಡನೆ ಇರುವೆ"ನೆಂದಳು. ಅದಕ್ಕವರು "ನಾಳೆ ಕುಂಬಳ ಸೊಟ್ಟೆಯೊಂದನ್ನು ತೆಗೆದುಕೊಂಡು ನನ್ನ ಕಡೆಗೆ ಬಾ" ಎಂದು ಆಕೆಗೆ ಹೇಳಿ ಕಳಿಸಿದರು.

ಮರುದಿನ ಊರಹೊರಗಡೆಯಲ್ಲಿ ತಮಗೊಂದು ಬಿಡಾರ ಹೊಡಿಸಿ, ಬಂದ ಜನರಿಗೆ ಬೇರೊಂದು ಕಡೆಯಲ್ಲಿ ಕುಳಿತುಕೊಳ್ಳಲು ಹೇಳಿದರು. ಆ ವೇಶ್ಯೆಯು ಅಷ್ಟರಲ್ಲಿ ತೆಂಗಿನ ಪರಟಿಯೊಂದನ್ನು ತಂದು ಮಡಿವಾಳರಿಗೆ ಕೊಟ್ಟಳು. ಅದಕ್ಕೆ ಅವರು "ಛೀ ತೆಗೆ, ಇದು ಕುಂಬಳ ಸೊಟ್ಟೆಯಲ್ಲ" ಎಂದು ಅದನ್ನು ಬಿಸುಟಿ, ಒಂದು ತಲೆಬೋಗೆಯನ್ನು ತರಿಸಿ ಆಕೆಯ ಕೈಯಲ್ಲಿ ಕೊಟ್ಟು "ಏ ಹುಡುಗೆ, ಇದನ್ನು ಗಟ್ಟಿಯಾಗಿ ಹಿಡಿ, ಜೋಕೆ" ಎಂದು ಹೇಳಿ, ಶಿವನಾಮವನ್ನುಚ್ಚರಿಸುತ್ತ ಬಲದೊಡೆಯನ್ನು ಚಪ್ಪರಿಸಲು, ಅವರ ಜನನೇಂದ್ರಿಯದಿಂದ ವೀರ್ಯವು ತಲೆಬುರುಡಿಯಲ್ಲಿ ಸುರಿಯಿತು. ಅದು ಅತ್ಯಂತ ಉಷ್ಣವಿದ್ದುದರಿಂದ ಅದನ್ನು ತಡಕೊಳ್ಳದೆ ವೇಶ್ಯೆಯು ಬೆದರಿ "ಶಿವಯೋಗಿ, ಕೃಪೆಮಾಡು, ನನ್ನಪರಾಧವನ್ನು ಕ್ಷಮಿಸು" ಎಂದು ಪ್ರಾರ್ಥಿಸಲು, ಆ ವೀರ್ಯವನ್ನು ಪುನಃ ಜನನೇಂದ್ರಿಯದಿಂದ ತೆಗೆದುಕೊಂಡರು. ಆ ಮೇಲೆ ನೆಲದ ಮೇಲೆ ಹೊರಳಾಡಿ, ಎದ್ದು, ಸಿದ್ಧನ ಗವಿಗೆ ಹೋದರು. ಆ ವೇಶ್ಯೆಯ ಗರ್ವಭಂಗವಾಯಿತು. ಗವಿಯಲ್ಲಿ ಬಾವಾನು "ಹುಡುಗೆಯ ಹೊಡೆತ ಎಂತಹದು?" ಎಂದು ಚೇಷ್ಟೆ ಮಾಡಲು, ಹುಡುಗನ ಹೊಡತ ಎಂತಹದೆಂದು ಉತ್ತರಕೊಟ್ಟರು. ಎಲ್ಲರೂ ಖೊಳ್ಳನೆ ನಕ್ಕರು.

ಆ ಮೇಲೆ ಗುರುಗಳ ಅಪ್ಪಣೆಯ ಮೇರೆಗೆ ಬಾವಾನು ಊರೊಳಗೆ ಹೋಗಿ ಒಂದು ದೊಡ್ಡ ಕೊಪ್ಪರಿಗೆಯನ್ನು ತಂದು ನೀರು ತುಂಬಿ ಅದನ್ನು ಸಳಮಳ ಕಾಸಿದನು. ಬಾವಾನೂ ರಾಯಪ್ಪನೂ ಕೂಡಿ ಗುರುಗಳ ಮೈಗೆ ಬೆಣ್ಣೆ ಹಚ್ಚಿ ತಿಕ್ಕಿದರು. ನಂತರ ಕವಲುಗಟ್ಟಿಗೆಗೆ ಕಟ್ಟಿದ ಮಗಿಗಳಿಂದ ಮಡಿವಾಳರ ದೇಹದ ಮೇಲೆ ಸುರುವಿದರು. ಅದಕ್ಕವರು ಹಾ! ಎನ್ನದೆ ಸೊಗಸಾಗಿ ಜಳಕ ಮಾಡಿ ಸೇವಿಗೆ ಸಕ್ಕರೆ ಹಾಲನ್ನು ಊಟಮಾಡಿ ರಾತ್ರಿ ಚೆನ್ನಾಗಿ ನಿದ್ರಿಸಿದರು.

ದಿನದಂತೆ ಮಡಿವಾಳರು ಮುರುಗೋಡ ಶೆಟ್ಟರ ಮನೆಗೆ ಊಟಕ್ಕೆ ಬರಲು, ಅಲ್ಲಿ ಶ್ರಾವಣಮಾಸದ ಗಣಾರಾಧನೆಯು ನಡೆದಿತ್ತು. ಸಾವಿರಾರು ಗಣಂಗಳು ಪಂಕ್ತಿಗೆ ಕುಳಿತಿದ್ದರು. ಅರೂಢರಾದ ಮಡಿವಾಳರನ್ನು ಕುಲಶೀಲಸಂಪನ್ನರೊಡನೆ ಒಂದೇ ಪಂಕ್ತಿಯಲ್ಲಿ ಕೂಡಿಸುವ ಬಗೆ ಹೇಗೆಂದು ಶೆಟ್ಟಿಯು ಚಿಂತಿಸಹತ್ತಿದನು. ಇದನ್ನು

ಮಡಿವಾಳರು ಜ್ಞಾನದೃಷ್ಟಿಯಿಂದ ತಿಳಿದು, ಚಳ್ಳಹಳ್ಳದಲ್ಲಿ ಮಿಂದು ಬಂದು, ಶೆಟ್ಟರ ಹೆಂಡತಿಯಾದ ಬಾಯವ್ವನೆಂಬವಳಿಗೆ ಸಿಟ್ಟಿನಿಂದ "ನಾನು ಗಂಟೆಯನ್ನು ಗಣಗಣ ಬಾರಿಸುವೆನು. ಅಷ್ಟರೊಳಗೇ ನೀನು ನನಗೆ ಎಡೆಮಾಡೆಂದು" ತಿಳಿಸಿದರು. ಆಪ್ರಕಾರ ಆಕೆಯು ಎಲ್ಲ ಪದಾರ್ಥಗಳನ್ನೆಡೆಮಾಡಲು ಊಟ ಮುಗಿಸಿ ಅವರು ಚೆಳ್ಳಹಳ್ಳಕ್ಕೆ ಹೋದರು. ಆಗ ಗಣಂಗಳು ಮಡಿವಾಳರು ಪಂಕ್ತಿಗೆ ಬಾರದಿದ್ದುದು ಗುಣವಾಯಿ ತೆಂದು ಹಿಗ್ಗಿ ಎಡೆಮಾಡಿಸಿಕೊಂಡು ಲಿಂಗಕ್ಕೆ ನೈವೇದ್ಯತೋರಿಸಬೇಕೆನ್ನುವಷ್ಟರಲ್ಲಿ ಒಬ್ಬರ ಲಿಂಗವೂ ಕರಡಿಗೆಯಲ್ಲಿರಲಿಲ್ಲ. ಒಬ್ಬರೊಬ್ಬರ ಮುಖ ನೋಡಿ ಮಡಿವಾಳ ಯೋಗಿಯು ಪಂಕ್ತಿಗರ್ಹನಲ್ಲೆಂದು ನಾವು ನಿಂದಿಸಿದ ಫಲವಿದೆಂದು ಪಶ್ಚಾತ್ತಾಪ ಪಟ್ಟು ಎಲ್ಲರೂ ಘನಲಿಂಗ ಚರಮೂರ್ತಿಗಳೊಂದಿಗೆ ಮಡಿವಾಳರ ಬಳಿಗೆ ಬಂದು ತಪ್ಪಾಯಿತೆಂದು ಮರೆಹೊಕ್ಕು ಕ್ಷಮೆಯನ್ನು ಕೇಳಿದರು.

ಲಿಂಗವನ್ನು ಕಳೆದುಕೊಂಡು ಮೂಗನಂತಾದ ಜಂಗಮರನ್ನು ಮಡಿವಾಳ ಶಿವಯೋಗಿಗಳು ಮನ್ನಿಸಿ ನುಡಿದುದೇನೆಂದರೆ "ನೀವೆಲ್ಲಿ? ನಾನೆಲ್ಲಿ? ನಿಮ್ಮ ಲಿಂಗ ಗಳು ನನ್ನ ಬಳಿಗೇಕೆ ಬರುತ್ತವೆ? ನಿಮ್ಮ ಲಿಂಗಗಳು ನಿಮ್ಮ ಸಜ್ಜೆಯೊಳಗೇ ಇರುತ್ತ ವೆ"ಂದು ಹೇಳಲು,ಅವರು ಲಗುಬಗೆಯಿಂದ ಸಜ್ಜೆಯನ್ನು ತೆರೆದು ನೋಡಲು ತಮ್ಮ ತಮ್ಮ ಲಿಂಗಗಳು ಅಲ್ಲಿದ್ದವು. ಎಲ್ಲರಿಗೂ ಸಾನಂದಾಶ್ಚರ್ಯ. ಆಗ ಶಿವಯೋಗಿ ಗಳನ್ನು ಶೆಟ್ಟರ ಮನೆಗೆ ಕರೆತಂದು ಅವರ ಪಾದಪೂಜೆ ಮಾಡಿ ಎಲ್ಲರೂ ಪ್ರಸಾದ ಸೇವಿಸಿದರು. ಯೋಗಿಯ ಅನುಗ್ರಹದಿಂದ ಶೆಟ್ಟರಿಗೆ ಸಂತಾನಯೋಗವುಂಟಾಯಿತು.

ಮಡಿವಾಳಯೋಗಿಯ ಕೀರ್ತಿಯನ್ನು ಕೇಳಿ ದೊಡವಾಡ ಬಸವಪ್ಪನೆಂಬ ಸದ್ಭಕ್ತನು ಮುರಗೋಡಕ್ಕೆ ಬಂದು,ಅವರ ಸನ್ನಿಧಿಗೆ ಪೊಡಮಟ್ಟು ತನ್ನನ್ನುದ್ಧರಿಸಿ ಕೃಪೆಮಾಡಬೇಕೆಂದು ಬೇಡಿಕೊಳ್ಳಲು, ಆತನಿಗೆ ಅಭಯಹಸ್ತವನ್ನಿಟ್ಟು ಹರಸಿದರು.

ಹೊಸೂರ ಗ್ರಾಮದ ಕುಲಕರ್ಣಿ ನಾರಾಯಣಪ್ಪ, ರಂಗಪ್ಪ ಎಂಬೀರ್ವರು ಯೋಗಿಗಳನ್ನು ತಮ್ಮೂರಿಗೆ ಬರಮಾಡಿಕೊಂಡು ಆ ಊರ ಭಕ್ತರಿಗೆ ಅವರ ದರ್ಶನ, ಬೋಧೆಗಳ ಲಾಭಮಾಡಿಕೊಟ್ಟರು. ಅಲ್ಲಿ ಯೋಗಿಗಳಿಗಾಗಿ ಒಂದು ಮಠ ಕಟ್ಟಿಸಿ, ತೇರನ್ನು ನಿರ್ಮಿಸಿ, ಪ್ರತಿವರ್ಷ ಯಾತ್ರೋತ್ಸವ ಮಾಡಹತ್ತಿದರು. ಒಕ್ಕುಂದದ ಶಿವಲಿಂಗನಾಯಕನೆಂಬವನು ಮಡಿವಾಳರ ಪಾದಕ್ಕೆ ನಮಸ್ಕರಿಸಿ ತಮ್ಮೂರಿಗೆ ದಯ ಮಾಡಿಸಬೇಕೆಂದು ಬೇಡಿಕೊಳ್ಳಲು, ಸ್ವಾಮಿಗಳು ಅಲ್ಲಿಗೆ ದಯಮಾಡಿಸಿದರು. ಅವರ ಸೇವೆಗಾಗಿ ತರಗಾರ ಶಿವಲಿಂಗ, ಹೂಗಾರ ಗಂಗಪ್ಪ, ಹಲ್ಗಿ ಮುದುಕಪ್ಪ ಈ ಮೂವ ರನ್ನು ನಾಯಕರು ನೇಮಿಸಿದರು. ಅವರು ಸೇವೆಗೈಯುತ್ತ ಆಲೋಚಿಸಿದ್ದೇನಂದರೆ "ಸ್ವಾಮಿಗಳು ಸಳಮಳ ಕಾಯ್ದ ನೀರನ್ನು ಜಳಕ ಮಾಡುವರಂತೆ. ನಾವು ಕೊಪ್ಪರಿಗೆ

ಯಲ್ಲಿ ಸಕಾಲಕ್ಕೆ ನೀರು ಕಾಸಿ ಪರೀಕ್ಷೆ ಮಾಡಬೇಕೆಂದು ಭಾವಿಸಿ ಹಾಗೆ ಮಾಡಿದರು. ಶಿವಯೋಗಿಗಳು ಸ್ನಾನಕ್ಕೆ ಬಂದು ಇದನ್ನು ತಿಳಿದುಕೊಂಡು "ನೀರು ತಣ್ಣಗಿವೆ, ಇನ್ನಿಷ್ಟು ಕಾಸಿರಿ"ಂದು ಅಪ್ಪಣೆ ಮಾಡಿದರು. ಅವರಿಗೆ ಆಶ್ಚರ್ಯವಾಗಿ ಮತ್ತಿಷ್ಟು ಕಾಸಿದರು. ಆ ಮೇಲೆ ಅವರ ಮೈಗೆಲ್ಲ ಎಣ್ಣೆ ಹೂಸಿ, ಆ ಸುಡು ಸುಡು ನೀರನ್ನು ಕವಲುಗಟ್ಟಿಗೆಗೆ ಮಗಿ ಕಟ್ಟಿ ಸುರುವಹತ್ತಿದರು. ಅಷ್ಟರಲ್ಲಿ ಆ ಮೂರರ ಮನೆಗೂ ಬೆಂಕಿ ಹತ್ತಿದ ಸಮಾಚಾರವು ಬಂದಿತು. ಆಗ ಆ ಮೂರ್ಖರು ಗಾಬರಿಯಾಗಿ ತಾವು ಮಾಡಿದ್ದಕ್ಕೆ ಪಶ್ಚಾತ್ತಾಪಬಟ್ಟು ಅವರ ಪಾದಕ್ಕೆರಗಿ ಕ್ಷಮೆ ಕೋರಿದರು. ಆಗ ಸ್ವಾಮಿಗಳು ತಣ್ಣೀರನ್ನು ಕೊಪ್ಪರಿಗೆಯಲ್ಲಿ ಹಾಕಿರೆನಲು, ಅವರು ಹಾಗೆಯೇ ಮಾಡಿದರು. ಅವರ ಮನೆಗೆ ಹತ್ತಿದ ಬೆಂಕಿಯು ನಂದಿಹೋಯಿತು.

ಒಂದು ದಿನ ಶಿವಪೇಟೆಯೆಂಬ ಗ್ರಾಮದ ಮಹಾಲಿಂಗ ಮೂರ್ತಿಗಳೆಂಬ ಚರವರರು ಶಿವಯೋಗಿಗಳನ್ನು ಕಂಡು ಸಾಷ್ಟಾಂಗವೆರಗಿ ತಮಗೆ ಒಂದು ಲಕ್ಷ ರೂಪಾಯಿಗಳನ್ನು ಕೊಡಬೇಕೆಂದು ಬೇಡಿಕೊಂಡರು. ಆದಕ್ಕೆ ಮಡಿವಾಳರು "ಮಹಿಮರೇ, ನಾವು ಹೊನ್ನು, ಹೆಣ್ಣು, ಮಣ್ಣನ್ನು ಬಿಟ್ಟ ವಿರಕ್ತರು. ನಮ್ಮಲ್ಲಿ ಧನವಿಲ್ಲ.ನೀವು ಚಿತ್ರದುರ್ಗಕ್ಕೆ ಹೋದರೆ ನಿಮ್ಮಿಷ್ಟಾರ್ಥವು ಸಿದ್ಧಿಸುವದು" ಎಂದರು. ಆಪ್ರಕಾರ ಮಹಾಲಿಂಗಮೂರ್ತಿಗಳು ಚಿತ್ರದುರ್ಗಕ್ಕೆ ದಯಮಾಡಿಸಿದರು. ಆ ಬೃಹನ್ಮಠದ ಶ್ರೀ ಜಗದ್ಗುರು ಮುರುಘರಾಜೇಂದ್ರ ಸ್ವಾಮಿಗಳು ಆಗ ಅಸ್ವಸ್ಥರಾಗಿದ್ದರು ತಮ್ಮ ಉತ್ತರಾಧಿಕಾರಿಗಳ ಬಗ್ಗೆ ಸದಾ ಚಿಂತಿಸುತ್ತಿದ್ದರು. ಅಷ್ಟರಲ್ಲಿ ಮಹಾಲಿಂಗಮೂರ್ತಿಗಳು ಬಂದು ಸಾಷ್ಟಾಂಗವೆರಗಿದುದನ್ನು ಕಂಡು ಆನಂದಿತರಾಗಿ ಅವರನ್ನೇ ತಮ್ಮ ಉತ್ತರಾಧಿಕಾರಿಗಳನ್ನಾಗಿ ಮಾಡಿ, ತಾವು ಲಿಂಗದೊಳಗಾದರು. ಮಡಿವಾಳ ಯೋಗಿಯು ಹೇಳಿದಂತೆ ಅವರ ಇಚ್ಛಿತಾರ್ಥವು ಫಲಿಸಲಿಕ್ಕೆ ಘನಸಂಪದವುಳ್ಳ ಮಠವೇ ಪ್ರಾಪ್ತವಾಯಿತು.

ಒಂದು ದಿನ ಮಡಿವಾಳರು ಶಿವಲಿಂಗನಾಯಕನನ್ನು ಮಧ್ಯರಾತ್ರಿಯಲ್ಲಿ ಎಬ್ಬಿಸಿ ಕಳ್ಳರು ನಿನ್ನ ಹೊಲದಲ್ಲಿದ್ದ ನಿಧಿಯನ್ನು ಅಂಜನ ಹಚ್ಚಿ ಕಡೆಗೆ ತೆಗೆದಿದ್ದಾರೆ ನೀನು ಬೇಗನೆ ಅಲ್ಲಿಗೆ ಹೋಗೆಂದು ಆಜ್ಞಾಪಿಸಿದರು.' ಆ ಪ್ರಕಾರ ನಾಯಕನು ಆಳುಗಳೊಂದಿಗೆ ಅಲ್ಲಿಗೆ ಬರಲು ಕಳ್ಳರು ಆ ನಿಧಿಯನ್ನು ಅಲ್ಲಿಯೇ ಬಿಟ್ಟು ಪಲಾಯನ ಮಾಡಿದರು. ನಾಯಕರು ಆ ನಿಧಿಯನ್ನು ಶಿವಯೋಗಿಗಳ ಪಾದಕ್ಕರ್ಪಿಸಿದರು. ಅವರು ಅದನ್ನು ಬಡಬಗ್ಗರಿಗೆ ದಾನಮಾಡೆನಲು, ಆತನು ಹಾಗೇ ಮಾಡಿದನು.

ಒಂದು ದಿನ ಮಡಿವಾಳರು ಮಧ್ಯರಾತ್ರಿಯಲ್ಲಿ ಪಂಚಾಕ್ಷರಿ ಧ್ಯಾನಮಾಡುತ್ತ ಸಾಗಿರುವಾಗ ಶಿವರುದ್ರಪ್ಪನೆಂಬ ಹಡಪಿಗನು ಅವರ ಧ್ಯಾನವನ್ನು ಕೇಳುತ್ತ ಬೆನ್ನು

ಹತ್ತಿದನು. ಗುರುಗಳು ಸಮೀಪದ ನದಿಯಲ್ಲಿ ಹಾರಿ ಮುಳುಗಿಬಿಟ್ಟರು. ಅಡಪಿಗನು ಗಾಬರಿಯಾಗಿ ಈ ಸುದ್ದಿಯನ್ನು ಊರಲ್ಲೆಲ್ಲ ಹರಡಿದನು. ಊರವರೆಲ್ಲ ಅಲ್ಲಿಗೆ ಬಂದು ನೋಡಲು, ಗುರುಗಳು ಬಯಲೊಳಗೆ ಶಿವನಂತೆ ಕುಳಿತಿದ್ದರು. ಹಡಪಿಗನು ಅವರ ಮೈಮೇಲೆ ಒಂದು ಗುಡಾರವನ್ನು ಹೊದಿಸಿದನು. ಉಳಿದವರು ಯಾವ ಉಪಚಾರಮಾಡದೆ ಹಿಂದಿರುಗಿದರು. ಅಂತಹ ಡಾಂಭಿಕ ಭಕ್ತರಿಗೆ ಶಿವನೊಲೆಯು ಕೊಂದು ಗುರುಗಳು ಅಪ್ಪಣೆಕೊಡಿಸಿದರು. ಕೆಲದಿನಗಳ ಮೇಲೆ ಜೋರಾಗಿ ಮಳೆ ಬಂದು ಊರ ಹಳ್ಳವು ಹೊರಸೂಸಿ ಊರೊಳಗೆ ಹೊಗಲು, ಜನರು ಹಾಹಾಕಾರ ಚಬ್ಬಿಸಿದರು. ಆಗ ಜನರೆಲ್ಲ ಮಡಿವಾಳ ಶಿವಯೋಗಿಯನ್ನು ಸ್ಮರಿಸಲು ಗುರುಗಳು ಗಂಗಾದೇವಿಯ ಸ್ತೋತ್ರ ಮಾಡಿ, ಕಾಯಿ ಯೊಡೆದು ನೀರಿನಲ್ಲಿಡಲು ಹಳ್ಳವು ಕ್ರಮೇಣ ಇಳಿದು ಹೋಯಿತು. ಜನರಿಗೆ ಬಂದ ಆಪತ್ತು ಬಯಲಾಯಿತು. ಶಿವಯೋಗಿಯ ಇಚ್ಛೆಯ ಪ್ರಕಾರ ಜನರು ಗಣತೃಪ್ತಿಯನ್ನು ಮಾಡಿದರು.

## ೧೨. ತಡಕೋಡ ಮೊದಲಾದ ಗ್ರಾಮಗಳಲ್ಲಿ ಸಂಚಾರ ಕೊನೆಗೆ ಗರಗಿಗೆ ಆಗಮನ.

ಗಣತೃಪ್ತಿಯಾದ ಮರುದಿನ ಮಡಿವಾಳರು ತಡಕೋಡಗ್ರಾಮಕ್ಕೆ ದಯ ಮಾಡಿಸಿದರು. ಅಲ್ಲಿ ಅವರನ್ನು ನರಸಿಂಹಭಟ್ಟ, ರಾಮಭಟ್ಟ, ಕೃಷ್ಣಭಟ್ಟರೆಂಬವರು ಇದಿರ್ಗೊಂಡು ಆದರದಿಂದ ಬರಮಾಡಿಕೊಂಡು ಉಪಚರಿಸಿದರು. ನಿತ್ಯ ಅವರ ಉಪದೇಶ ನಡೆಯಲಾರಂಭಿಸಿತು. ಹೀಗಿರಲು ಒಂದುದಿನ ರಾಮಭಟ್ಟರ ತಂದೆಯ ಶ್ರಾದ್ಧವು ಬಂದಿತು. ರಾಮಭಟ್ಟರು ಬ್ರಾಹ್ಮಣರಿಗೆ ಭೋಜನ ಸಿದ್ಧಮಾಡಿಸಿ ಮಡಿವಾಳಯೋಗಿಗಳನ್ನೂ ಆಮಂತ್ರಿಸಿದರು. ಬ್ರಾಹ್ಮಣರು ಯೋಚಿಸಿದ್ದೇನಂದರೆ “ಮಡಿವಾಳರು ಪಂಕ್ತಿಬಾಹಿರರು. ಅವರೊಡನೆ ಸರಿಪಂಕ್ತಿಯಲ್ಲಿ ಕುಳಿತು ಊಟ ಮಾಡುವದು ಹೇಗೆ?” ಎಂದು ಆಕ್ಷೇಪವೆತ್ತಿದರು. ಇದನ್ನು ತಿಳಿದು ಶಿವಯೋಗಿಯು ಅಂದು ಪಂಕ್ತಿಗೆ ಬಾರದೆ ಒಂದು ಪವಾಡವನ್ನೆಸಗಿದರು. ಪಂಕ್ತಿ ನಡೆದಾಗ ಪಾಕಶಾಲೆ ಯಲ್ಲಿ ಒಂದು ಕೊಯ್ದು ಕುರಿ ತಲೆಯು ಕಾಣಿಸಿಕೊಂಡಿತು. ಎಲ್ಲರೂ ಹೌಹಾರಿ ‘ರಾಮ ರಾಮಾ’ ಎಂದು ಬಾಯ್ಬಿಟ್ಟರು. ಆಗ ಬ್ರಾಹ್ಮಣರು ಮಡಿವಾಳಯೋಗಿಯು ಪಂಕ್ತಿಬಾಹಿರನೆಂದು ತಿಳಿದದ್ದು ಮಹಾಪರಾಧವಾಯಿತೆಂದು ಭಾವಿಸಿ, ಅವರ ಮರೆ ಹೊಕ್ಕು ಕ್ಷಮಾಯಾಚನೆ ಮಾಡಿಕೊಂಡರು. ಆಗ ಯೋಗಿಗಳು ಎಲಾ, ಕುರಿಯ ತಲೆಯು ಎಲ್ಲಿಂದ ಬರುತ್ತದೆ? ಅದು ಬಾಳೆಯಗೊನೆಯು. ಹೋಗಿ ನೋಡಿರೆನಲು ಅದು ಅವರ ಹೇಳಿಕೆಯಂತೆ ಬಾಳೆಯ ಗೊನೆಯಾಗಿದ್ದಿತು. ಆದರಿಂದ ಎಲ್ಲರಿಗೂ ಆಶ್ಚರ್ಯವಾಗಿ ಅವರ ಪವಾಡವನ್ನು ಕೊಂಡಾಡಿ ಪಂಕ್ತಿಸಾಗಿಸಿದರು.

ಒಂದು ನೆರೆಹಳ್ಳಿಯ ಗೌಡನಿಗೆ ಸಂತಾನವಾಗದಿರಲು ಆತನು ತನ್ನ ಹೆಂಡತಿಯೊಡನೆ ಗುರುಗಳ ದರ್ಶನಹೊಂದಿ ಸಾಷ್ಟಾಂಗಹಾಕಿ ತನ್ನ ಮನೆಗೆ ಅವರನ್ನು ಬರಮಾಡಿಕೊಂಡು ಉಪಚರಿಸಿದನು. ಆ ರಾತ್ರಿ ಗೌಡನ ಹೆಂಡತಿಯು ರತಿಯಿಚ್ಛೆಯಿಂದ ಮಡಿವಾಳರ ಬಳಿಗೆ ಬಂದು ಕಾಮಚೇಷ್ಟೆಗಾರಂಭಿಸಿದಳು. ಆಗ ಶಿವಯೋಗಿಯು ಆಕೆಯ ಕಡೆಯಿಂದ ಒಂದು ಪಾತ್ರೆಯನ್ನು ತರಿಸಿ ಅದರಲ್ಲಿ ವೀರ್ಯಬಿಟ್ಟು ಅದರಲ್ಲಿ ಅರಿವೆಯ ಚೂರುಗಳನ್ನು ಹಾಕಹೇಳಿದರು. ಆಕೆಯು ಹಾಗೆ ಮಾಡಲು ಆ ಅರಿವೆಯ ಚೂರುಗಳು ಬೆಂಕಿಹತ್ತಿ ಸುಟ್ಟು ಹೋದವು. ಅವಳಿಗೆ ಬಹಳ ನಾಚಿಕೆಯಾಗಿ ಗುರುಗಳ ಪಾದಕ್ಕೆ ಪೊಡಮಟ್ಟಳು. ಆಗ ಮಡಿವಾಳರು ನಿಮಗೆ ಗಂಡು ಸಂತಾನವಾಗುವದೆಂದು ಆಶೀರ್ವದಿಸಿ ಕಳುಹಿದರು. ಮುಂದೆ ಆಕೆಯು ಗಂಡು ಹಡೆದಳು.

ಮುಂದೆ ಗುರುಗಳು ನೇಗಿನಹಾಳೆಂಬ ಗ್ರಾಮಕ್ಕೆ ದಯಮಾಡಿಸಿದರು. ಆ ಊರಿನ ಉಳವಿ ಪಡೆಯಪ್ಪ, ಕೋಟಿಗೆಯ ಅಜ್ಜಪ್ಪ, ಮೊದಲಾದ ಪ್ರಮುಖರು ಸ್ವಾಮಿಗಳನ್ನಿದಿರ್ಗೊಂಡು ಅವರಿಗಾಗಿ ಕಟ್ಟಿಸಿದ ಮಠದೊಳಗೆ ಅವರನ್ನು ಇಳಿಸಿದರು. ಅಲ್ಲಿ ದಿನಾಲು ಭಕ್ತಾದಿಗಳು ಬಂದು ದರ್ಶನಾಶೀರ್ವಾದ ಪಡೆಯಹತ್ತಿದರು. ಒಂದು ದಿನ ಕುಪ್ಪಸದ ನಾಗಪ್ಪನೆಂಬವನು ಬಂದು ಸನ್ನಿಧಿಗೆ ನಮಸ್ಕರಿಸಿ, "ಬುದ್ಧೀ, ಕೂಸು ಅಡ್ಡಸಿಕ್ಕು ನನ್ನ ಹೆಂಡತಿಗೆ ಹೆರಿಗೆಯಾಗಲೊಲ್ಲದು ತಾವೇ ಗತಿಯೆಂದು" ಪ್ರಾರ್ಥಿಸಿಕೊಳ್ಳಲು ಗುರುಗಳು ತಮ್ಮ ಪಾದೋದಕದಲ್ಲಿ ಸ್ವಲ್ಪ ಬೂದಿಯನ್ನು ಹಾಕಿ ಆಕೆಗೆ ಕೊಡು ತಕ್ಷಣವೇ ಹಡೆಯುವಳು ಎಂದರು. ಆಪ್ರಕಾರ ಮಾಡಲಾಗಿ ಆಕೆಯು ಸುಸೂತ್ರವಾಗಿ ಗಂಡು ಮಗುವನ್ನು ಹೆತ್ತಳು. ಆ ಕೂಸಿಗೆ ಮಡಿವಾಳನೆಂಬ ಹೆಸರಿಟ್ಟರು.

ಬಳಿಕ ನಿಚ್ಚಣಿಯೆಂಬೂರ ಹಿರಿಯರಾದ ಗುರುಬಸಪ್ಪಾ ಪಾಟೀಲ, ಶಿವಲಿಂಗಪ್ಪ ಮೆಳ್ಳಿಸೆಟ್ಟಿ, ಶಿವಲಿಂಗಯ್ಯ ಪಟ್ಟದ, ಬೈಲಪ್ಪ ದಳವಾಯಿ ಇವರು ನೇಗಿನಹಾಳಿಗೆ ಹೋಗಿ ಸ್ವಾಮಿಗಳ ದರ್ಶನ ಮಾಡಿಕೊಂಡು ತಮ್ಮೂರಿಗೆ ದಯಮಾಡಿಸಬೇಕೆಂದು ಅವರನ್ನು ಬೇಡಿಕೊಂಡರು. ಶಿವಯೋಗಿಯು ಭಕ್ತರ ಮನಸ್ಸಿಗೆ ಸಂತೋಷವಾಗುವಂತೆ ಅಲ್ಲಿಗೆ ಬರಲು, ಊರವರು ಮಂಗಲವಾದ್ಯಗಳಿಂದ, ಲಲನೆಯರು ಆರತಿಗಳಿಂದ ಊರಲ್ಲಿ ತಳಿರುತೋರಣಗಳಿಂದ ಅವರನ್ನು ಸ್ವಾಗತಿಸಿದರು. ನಿತ್ಯ ಆ ಊರಲ್ಲಿ ಅವರಿಗೆ ಎಣ್ಣೆ ಬೆಣ್ಣೆಗಳನ್ನು ಮೈಗೆಹಚ್ಚಿ ತಿಕ್ಕಿ ಬಿಸಿನೀರಿನಿಂವ ಕೂಸಿನಂತೆ ಎರೆದು ಬೆಚ್ಚನ್ನ ಹಾಸಿಗೆಯ ಮೇಲೆ ಮಲಗಿಸುತ್ತಿದ್ದರು, ಸಣ್ಣಕ್ಕಿ ಅನ್ನವನ್ನು ಉಣ್ಣಿಸುತ್ತಿದ್ದರು.

ಮುಂದೆ ದೇವಲೊಳ್ಳಿಯೆಂಬ ಗ್ರಾಮದ ದೈವದವರು ಗುರುವಿಗಾಗಿ ಮಠವೊಂದನ್ನು ರಚಿಸಿ ನಿಚ್ಚಣಿಗೆ ಅವರನ್ನು ಕರೆಯಲು ಬಂದರು. ಸ್ವಾಮಿಗಳು ಅವರ

ಬಿನ್ನಹದ ಮೇರೆಗೆ ಅಲ್ಲಿಗೆ ದಯಮಾಡಿಸಿದರು. ಅವರ ನಿತ್ಯ ಲಿಂಗಾರ್ಚನೆಗೆ ವ್ಯತ್ಯಯ ಬಾರದಂತೆ ಭಕ್ತರು ನೋಡಿಕೊಂಡರು. ಮುಂದೆ ಗರಗದಿಂದ ಮರಿಸಿದ್ಧಲಿಂಗಪ್ಪ, ಎಲೆಗಾರ ಭೀಮಪ್ಪ, ವೀರಬಸಪ್ಪ, ಹಣಿಗಿ ದುಂಡಪ್ಪ ಎಂಬ ಪ್ರಮುಖರು ಬಂದು, ಗರಗಿಗೆ ದಯಮಾಡಿಸಬೇಕೆಂದು ಗುರುಗಳಿಗೆ ಬಹು ಭಯಭಕ್ತಿಯಿಂದ ಪ್ರಾರ್ಥಿಸಿಕೊಂಡರು. ಆಗ ಶ್ರೀಗಳು ನಿಮ್ಮೂರ ಬಸವೇಶ ದೇವಾಲಯದ ಬಳಿಯಲ್ಲಿ ನಮಗೊಂದು ಮಠವನ್ನು ಕಟ್ಟಿಸಿದರೆ ಬರುವೆವೆಂದರು. ಆಪ್ರಕಾರ ಒಳ್ಳೆ ಪ್ರಶಸ್ತವಾದ ಮಠವು ಸಿದ್ಧವಾಯಿತು. ಶ್ರೀಗಳನ್ನು ಬಂಡಿಯಲ್ಲಿ ಕುಳ್ಳಿರಿಸಿ ವಾದ್ಯವೈಭವದೊಡನೆ ಮೆರವಣಿಗೆಯಿಂದ ಗರಗಿಗೆ ಕರೆದುಕೊಂಡು ಬಂದರು.

ಅಲ್ಲಿ ಶಿವಯೋಗಿಗಳು ಅಮಳೈಕ್ಯದೊಳಿರಿಸಿದ ಇಷ್ಟಲಿಂಗವನ್ನು ನಿತ್ಯ ಪೂಜಿಸುತ್ತ ಪ್ರಾಣಲಿಂಗಾನುಸಂಧಾನ ಮಾಡುತ್ತ, ಭಾವಲಿಂಗದಲ್ಲಿ ಸಮರಸಹೊಂದುತ್ತ ನಿತ್ಯ ಶಿವಯೋಗ ಸಮಾಧಿಯಲ್ಲಿ ಮಗ್ನರಾಗಿರುತ್ತಿದ್ದರು. ದಿನಾಲು ಅರ್ಚನ, ಅರ್ಪಣ, ಅನುಭವಗಳು ನಡೆದೇ ಇದ್ದವು. ಅವರ ಸೇವೆಗೆ ಚರಸಿದ್ಧಲಿಂಗ ಮರಿದೇವರು, ರಾಮನಗೌಡ, ವೀರಯ್ಯ, ಕೃಷ್ಣಯ್ಯ ಇವರು ಸದಾ ಸನ್ನದ್ಧರಾಗಿದ್ದರು. ಮುದೇನೂರ ಕರಿಗೌಡರು, ರಾಣೇಬೆನ್ನೂರ ಗಗನಾಚಾರ್ಯರು, ಬ್ಯಾಡಗಿ ಚನ್ನಬಸಪ್ಪನವರು ಮೊದಲಾದವರು ವರ್ಷಕ್ಕೊಮ್ಮೆ ಗರಗಿಗೆ ಬಂದು ತಮ್ಮ ಸೇವೆಯನ್ನು ಸಲ್ಲಿಸುತ್ತಿದ್ದರು.

ಪರವೂರಿನಿಂದ ಶಿವಯೋಗಿಗಳ ದರ್ಶನಕ್ಕೆ ಬರಹೋಗುವ ಭಕ್ತಾದಿಗಳ ಸಲುವಾಗಿ ಗರಗದ ಸದ್ಭಕ್ತರು ಅನುಕೂಲವಾಗಲೆಂದು ಊರ ಮುಂದಿನ ಹಳ್ಳಕ್ಕೆ ಘಾಟವನ್ನು ಕಟ್ಟಿಸಿದರು, ಅನ್ನಸತ್ರವನ್ನೇರ್ಪಡಿಸಿದರು. ಯೋಗಿಗಳ ಬೋಧೆಯ ಶ್ರವಣ, ಮನನ, ನಿಧಿಧ್ಯಾಸದಿಂದ ಎಷ್ಟೋ ಭಕ್ತರು ಪಾವನರಾದರು. ಹೀಗಿರಲು ಒಂದು ದಿನ ನೇಗಿನಾಳದಿಂದ ಅಜ್ಜಪ್ಪಾ ಕೋಟಿಗೆ, ಶಾಂತಪ್ಪ ಎಲಿಗಾರ ಇವರು ಬಂದು ತಮ್ಮೂರ ದೇಸಾಯಿ ರುಕುಮಪ್ಪನು ನಪುಂಸಕನಿದ್ದು ಆತನಿಗೆ ಮಕ್ಕಳಾಗಿಲ್ಲ. ಅವನಿಗೆ ಪುರುಷತ್ವವನ್ನು ಕೊಟ್ಟು ಕಾಪಾಡಬೇಕೆಂದು ಬೇಡಿಕೊಂಡರು. ಶಿವಯೋಗಿಗಳು ಆತನಿಗೆ ಪ್ರಸಾದಕೊಟ್ಟು ಅನುಗ್ರಹಿಸಿದರು. ಮರುದಿನ ಬಂದವ್ವ-ರುಕ್ಮಪ್ಪ ಈ ದಂಪತಿಗಳು ಬಂದು ೧೦೧ ರೂ. ಗಳನ್ನು ಸ್ವಾಮಿಗಳ ಮುಂದಿಟ್ಟು ವಂದಿಸಿದರು. ಸ್ವಾಮಿಗಳು ಅವರ ಹಣೆಗೆ ವಿಭೂತಿ ಹಚ್ಚಿ, ಊಟಮಾಡಿಸಿ, ಕುದುರೆಯ ಪಾಗಾದ ಕೋಣೆಯಲ್ಲಿ ಅವರಿಬ್ಬರನ್ನು ಮಲಗಿಸೆಂದು ರಾಮಪ್ಪನಿಗೆ ಅಪ್ಪಣೆ ಮಾಡಿದರು. ಆ ರಾತ್ರಿ ರುಕ್ಮಪ್ಪನಿಗೆ ಪುರುಷತ್ವವುಂಟಾಗಿ ಮಡದಿಯೊಡನೆ ಸಂಭೋಗಸುಖವನ್ನು ಹೊಂದಿದನು. ಮರುದಿನ ಸ್ನಾನಮಾಡಿ ಮಡಿಯುಟ್ಟು ಶಿವಯೋಗಿಗೆ ಪೊಡ-

ಮಟ್ಟರು. ಬಂದವ್ವನಿಗೆ ನಾಚಿಕೆಯಾಗಿ ಕೆಳಗೆ ಮುಖಮಾಡಿದಳು. ಯೋಗಿಯ ಆಶೀರ್ವಾದ ಹೊಂದಿ ಅವರು ತಮ್ಮ ಊರಿಗೆ ಹೋದರು. ಮುಂದೆ ಅವರಿಗೆ ಒಂದು ಗಂಡು ಮಗು ಜನಿಸಿತು.

ನೇಗಿನಾಳದ ಇಂಚಲ ಬಸಪ್ಪನೆಂಬ ಬಡವನು ಗರಗಿಗೆ ಅಮಾವಾಸೆಗೆ ಬಂದು ಸ್ವಾಮಿಗಳ ದರ್ಶನ ಮಾಡಿಕೊಂಡು ಹೋಗುತ್ತಿದ್ದನು. ೧೬ನೆಯ ಅಮಾವಾಸೆಗೆ ಬಂದು, ಸ್ವಾಮಿಗಳಿಗೆ "ಬುದ್ಧೀ, ನಾನು ಬಡವ, ನನ್ನ ಹೆಂಡತಿಯು ಮಕ್ಕಳ ಸಲುವಾಗಿ ಕಳೆದ ೨೫ ವರ್ಷಗಳಿಂದ ಬಳಲುತ್ತಿರುವಳು. ನಮಗೆ ಒಬ್ಬ ವಂಶೋದ್ಧಾರಕ ಮಗನನ್ನು ಕೊಟ್ಟು ಅನುಗ್ರಹಿಸಬೇಕೆಂದು " ಬೇಡಿಕೊಂಡನು. ಗುರುಗಳು " ತಮ್ಮಾ, ನಿನ್ನಿಚ್ಛೆ ಈಡೇರುವದು. ನಿನಗೆ ಒಳ್ಳೆಯ ಮಗನು ಹುಟ್ಟುವನು. ಆ ಕೂಸನ್ನು ನಮ್ಮ ಕಡೆಗೆ ತಕ್ಷಣ ತೆಗೆದುಕೊಂಡು ಬಾ. ನಾನೇ ಹೆಸರಿಡುತ್ತೇನೆ"ಂದು ಹೇಳಿದರು. ಅಪ್ರಕಾರ ಆತನಿಗೆ ಗಂಡುಮಗುವಾಗಲು, ದಂಪತಿಗಳು ಆ ಕೂಸನ್ನು ಯೋಗಿಯಬಳಿಗೆ ತಂದೊಪ್ಪಿಸಿದರು. ಸ್ವಾಮಿಗಳು ಕೂಸಿಗೆ ನೀಲಕಂಠನೆಂದು ಹೆಸರಿಟ್ಟರು. ತಾಯಿಗೆ ಸೀರೆಯನ್ನುಡಿಸಿ, ಕೂಸಿಗೆ ಕಾಲ್ಗೆಜ್ಜೆಯನ್ನಿಡಿಸಿ ಕಳಿಸಿಕೊಟ್ಟರು. ನೀಲಕಂಠನು ಮುಂದೆ ವಿದ್ಯಾವಂತನಾಗಿ ಒಂದು ಶಾಲೆಯ ಮುಖ್ಯಾಧ್ಯಾಪಕನಾಗಿ ಹೆಸರುಪಡೆದನು. ಶಾ. ಶಕೆ ೧೮೬೨ರಲ್ಲಿ ಆತನು ಗತಿಸಿಹೋದನು. ಆತನ ಮಗ ಚಿನ್ನಪ್ಪಾ ಇಂಚಲ ಎಂಬಾತನು ಬೆಳಗಾವಿಯಲ್ಲಿ ಪ್ರಸಿದ್ಧ ವಕೀಲನಾಗಿರುವನು. ಈತನು ೫ ಸಾವಿರ ರೂಪಾಯಿ ವೆಚ್ಚಮಾಡಿ ಗರಗದಲ್ಲಿ ಭೋಜನಶಾಲೆಯೊಂದನ್ನು ಕಟ್ಟಿಸಿರುವನು. ಈತನು ಭಕ್ತಿವಂತನೂ ಧರ್ಮಿಷ್ಠನೂ ಆಗಿ ಸುಖಸಂತೋಷದಿಂದ ಕಾಲಕಳೆಯುತ್ತಿರುವನು.

## ೧೩. ಮಡಿವಾಳೇಶನ ಇತರ ಪವಾಡಗಳು

ಕ್ರಿಸ್ತಮತದ ಪಾದ್ರಿಯೋರ್ವನು ಅಜ್ಞ ಜನರಿಗೆ ಆಶೆ ತೋರಿಸಿ ಅವರನ್ನು ಮತಾಂತರಗೊಳಿಸಲು ಸಂಚರಿಸುತ್ತಿದ್ದನು. ಒಂದು ದಿನ ಆತನು ಗರಗದ ಮಡಿವಾಳೇಶನ ಬಳಿಗೆ ಬಂದು 'ನಿಮ್ಮ ದೇವರು ಕಲ್ಲುಗುಂಡು. ನಮ್ಮ ದೇವರು ಸಜೀವ ವಸ್ತುವು. ನಮ್ಮ ದೇವರು ಪತಿತರನ್ನು ಪಾವನ ಮಾಡುತ್ತಾನೆ ದೀನ ದಲಿತರನ್ನು ಎತ್ತಿ ಹಿಡಿಯುತ್ತಾನೆ. ಮರೆಹೊಕ್ಕವರನ್ನು ರಕ್ಷಿಸುತ್ತಾನೆ. ನಿಮ್ಮ ಕಲ್ಲೇನುಮಾಡಬಲ್ಲುದು ? ನಿಮ್ಮ ದೇವರಿಗಿಂತ ನಮ್ಮ ದೇವರು ಎಷ್ಟೋಪಾಲು ಮೇಲೆ'ಂದು ವಾದಿಸಿದನು. ಅದಕ್ಕೆ ಮಡಿವಾಳ ಯೋಗಿಯು "ನಿಮ್ಮ ದೇವರು ನಮ್ಮ ದೇವರ ಮಲವನ್ನು ಭುಂಜಿಸುತ್ತಾನೆ"ಂದರು. ಹಾಗಾದರೆ ನಿಮ್ಮ ದೇವರು

ಆವುದೆಂದು ಕೇಳಲು ಅವರು ಬೀಸುವ ಕಲ್ಲನ್ನು ತೋರಿಸಿದರು. ಪಾದ್ರಿಯು ಸ್ವಾಮಿಗಳ ಜಾಣತನಕ್ಕೆ ಬೆರಗಾಗಿ ಹೊರಟುಹೋದನು. ಅಂದಿನಿಂದ ಗರಗದ ಸೆರೆಹೊರೆಯ ಹಳ್ಳಿಗಳಲ್ಲಿ ಜನರನ್ನು ಮತಾಂತರಗೊಳಿಸುವದು ಆತನಿಂದ ಸಾಧ್ಯ ವಾಗಲಿಲ್ಲ.

ಒಂದು ದಿನ ಗಂಗಪ್ಪಾ ಕುರ್ಲಿ ಎಂಬ ಶ್ರೀಮಂತನು ಮಡಿವಾಳಯೋಗಿಯ ಬಳಿಗೆ ಬಂದು "ಬುದ್ಧೀ, ನಮ್ಮ ಮನೆಯ ಮಂಡಳಿಗೆಲ್ಲ ಪಿಶಾಚಿಬಾಧೆಯುಂಟಾ ಗಿದೆ ಅದನ್ನು ಪರಿಹರಿಸಿ ಕಾಪಾಡಬೇಕೆ"ಂದು ಬೇಡಿಕೊಂಡನು. ಅದಕ್ಕೆ ಮಡಿವಾಳರು "ಎಲೋ, ನೀನು ದಾಸೋಹಕ್ಕೆ ನೂರು ರೂಪಾಯಿ ತಂದು ಕೊಡು. ಅಂದರೆ ನಿನ್ನ ಮನೆಯ ಪಿಶಾಚಿಬಾಧೆಯು ನಿವಾರಣೆಯಾಗುವದು" ಎಂದರು. ಆತನು ಮಹಾ ಲೋಭಿಯೂ ಕೃಪಣನೂ ಇದ್ದುದರಿಂದ 'ಮಡಿವಾಳರು ಆಶೆಬುರುಕ ರಿದ್ದಾರೆ. ಅವರಿಗೆ ನೂರು ರೂಪಾಯಿ ಯಾಕೆ ಕೊಡಬೇಕೆಂ'ದು ಭಾವಿಸಿ ಸುಮ್ಮ ನಿದ್ದನು. ಆದರೆ ಆತನಿಗೆ ಪಿಶಾಚಿಯು ಬಡಕೊಂಡು ಕೈಸನ್ನೆ ಬಾಯಿಸನ್ನೆ ಸುರುವಾಗಿ ಇಲ್ಲಿ ಸತ್ತು ಹೋಗುವನೋ ಎನ್ನುವಂತಾಯಿತು. ಆತನ ಮಡದಿಯು ಗಾಬರಿ ಯಾಗಿ ಮಡಿವಾಳಸ್ವಾಮಿಯ ಬಳಿಗೆ ಬಂದು, 'ಎಪ್ಪಾ, ನನ್ನ ಗಂಡನಿಗೆ ದೆವ್ವ ಬಡಕೊಂಡು ಅತಿ ನಿತ್ರಾಣನನ್ನು ಮಾಡಿದೆ. ಬದುಕುವ ಆಶೆ ಇಲ್ಲ. ಕರುಣಿಸ ಬೇಕೆ'ಂದು ಸೆರಗೊಡ್ಡಿ ಬೇಡಿಕೊಂಡಳು. ಆಗ ಅವರು "ನೂರು ರೂಪಾಯಿ ಕೊಟ್ಟರೆ ಪಿಶಾಚಿಯ ಬಾಧೆಯನ್ನು ಬಿಡಿಸುತ್ತೇವೆ"ಂದರು. ಆಗ ಅವಳು ಲಗುಬಗೆ ಯಿಂದ ಮನೆಗೆ ಹೋಗಿ ರೂಪಾಯಿ ತಂದುಕೊಟ್ಟಳು. ಅವರು ಆಕೆಗೆ ವಿಭೂತಿ ಯನ್ನು ಕೊಟ್ಟು ಇದನ್ನು ನಿನ್ನ ಗಂಡನ ಮೈಗೆಲ್ಲ ಹಚ್ಚು. ದೆವ್ವವು ಬಿಟ್ಟು ಓಡುವದೆಂದರು. ಅವಳು ಹಾಗೆ ಮಾಡಲು ಪಿಶಾಚಿಯು ಎತ್ತೋ ಹೋಗಿಬಿಟ್ಟಿತು. ಆಗ ಗಂಗಪ್ಪನಿಗೆ ಬುದ್ಧಿ ಘಟ್ಟಿಯಾಗಿ ಪಕ್ವಾನ್ನ ಮಾಡಿಸಿ ಸ್ವಾಮಿಗೆ ಎಡೆಯನ್ನು ತಂದು ತನ್ನ ತಪ್ಪನ್ನು ಕ್ಷಮಿಸಬೇಕೆಂದು ಸಾಷ್ಟಾಂಗವೆರಗಿ ಬೇಡಿಕೊಳ್ಳಲು, ಅವರು ಆತನಿಗೆ ಆಶೀರ್ವದಿಸಿ ಬೀಳ್ಕೊಟ್ಟರು.

ಗುರ್ಲಹೊಸೂರಿನ ಪಡಯಚ್ಚಿನ ರುದ್ರಪ್ಪನೆಂಬವನು ಒಮ್ಮೆ ತನ್ನ ಹೆಂಡತಿ ಯನ್ನು ಕೂಡಿಕೊಂಡು ಶಿವಯೋಗಿ ದರ್ಶನಕ್ಕಾಗಿ ಗರಗದ ಮಠಕ್ಕೆ ಬಂದನು ಅಲ್ಲಿ ಪ್ರಸ್ಥಮಾಡಿಸಿ ಶಿವಯೋಗಿಯನ್ನು ತಣಿಸಿದನು. ಆಗ ಅವರು ಆತನಿಗೆ 'ಇಂದು ನೀನು ಇಲ್ಲೇ ಇರುವಿಯೋ ನಿಮ್ಮೂರಿಗೆ ಹೋಗುವಿಯೋ ?' ಎಂದು ಕೇಳಿದರು. ಅದಕ್ಕೆ ಆತನು 'ಬುದ್ಧಿ, ಹೊತ್ತುಮುಳುಗುತ್ತ ಬಂದಿದೆ. ಊರು ಮುಟ್ಟಲು ಮಧ್ಯರಾತ್ರಿಯಾಗಬಹುದು. ಇವತ್ತು ಇಲ್ಲೇ ವಸತಿಮಾಡಿ ನಾಳೆ ಹೋಗುವೆ'

ನೆಂದನು. ಅದಕ್ಕೆ ಯೋಗಿಯು "ರಾತ್ರಿಯಾದರೂ ಅಡ್ಡಿಯಿಲ್ಲ, ನಿಮ್ಮೂರಿಗೆ ಹೋಗಿಯೇ ಬಿಡಿರಿ. ಇಲ್ಲುಳಿಯಬೇಡಿರಿ" ಎನ್ನಲು ದೊಡ್ಡವರ ಮಾತು ಮೀರ ಬಾರದೆಂದು ಊರಿಗೆ ಬಂದು ನೋಡಲು ಕಳ್ಳರು ಆತನ ಮನೆಗೆ ಅದೇ ಕನ್ನಾ ಕೊರೆದು ಒಳಹೊಕ್ಕು ಸಾಮಾನುಗಳನ್ನು ಚಲ್ಲಾಪಿಲ್ಲಿ ಮಾಡಿದ್ದರು. ಮನೆಯವರ ಸದ್ದಾಗಲು ಕನ್ನದ ಕಿಂಡಿಯಿಂದ ಹಾಯ್ದು ಪಾರಾದರು. ಸುದೈವದಿಂದ ಒಂದು ಕಾಸು ಕೂಡಾ ಕಳವಾಗಿರಲಿಲ್ಲ. ಎಲ್ಲರೂ ಮಡಿವಾಳಯೋಗಿಯ ಮಹಿಮೆಯನ್ನು ಮನವಾರೆ ಕೊಂಡಾಡಿದರು.

ಒಮ್ಮೆ ಧಾರವಾಡ ಜಿಲ್ಲಾಧಿಕಾರಿಯಾಗಿದ್ದ ಯುರೋಪಿಯನ್ ಸಾಹೇಬನು ಕುದುರೆಯನ್ನೇರಿ ಗರಗಿಗೆ ಬಂದು, ಬರೇ ಲಂಗೋಟಿ ಹಾಕಿಕೊಂಡು ಕುಳಿತ ಮಡಿವಾಳ ಯೋಗಿಗೆ ಒತ್ತಾಯ ಮಾಡಿ ಬಟ್ಟೆಯ ತೊಡಹೇಳಿದನು. ಸ್ವಾಮಿಗಳು ಅನಿವಾರ್ಯ ವಾಗಿ ಬಟ್ಟೆಯನ್ನು ಧರಿಸಿಕೊಂಡರು. ಸಾಹೇಬರು ತನ್ನ ದರ್ಪಕ್ಕೆ ಮನದಲ್ಲಿ ಹಿಗ್ಗುತ್ತ ಒಂದು ಕೂಗಳತೆ ದಾರಿಯನ್ನು ದಾಟಿರಲಿಕ್ಕಿಲ್ಲ, ಆತನ ಮೈಮೇಲಿನ ಬಟ್ಟೆಗಳೆಲ್ಲ ಮಾಯವಾಗಿ ಅರೆಬತ್ತಲೆಯಿಂದ ಪಶ್ಚಾತ್ತಾಪಬಟ್ಟು ಮರಳಿ ಯೋಗಿಯ ಬಳಿಗೆ ಬಂದು, ಅವರಿಗೆ ತಾವು ತೊಟ್ಟ ಬಟ್ಟೆಯನ್ನು ಕಳೆಯಬೇಕೆಂದು ಬೇಡಿ ಕೊಂಡನು. ಅವರು ಕಳೆದೊಗೆದರು. ಆಗ ಸಾಹೇಬನ ಮೈಮೇಲೆ ಯಾವುದೋ ಮಾಯೆಯಿಂದ ಬಟ್ಟೆಗಳು ಬಂದುಬಿಟ್ಟಿದ್ದವು. ಸಾಹೇಬನು ಸ್ವಾಮಿಗಳಿಗೆ ನಮಸ್ಕರಿಸಿ ಅವರ ಮಹಿಮೆಗೆ ಬೆರಗಾಗಿ, ಅವರನ್ನು ಕೊಂಡಾಡುತ್ತ ಹಿಂದಿರುಗಿ ಹೋದನು. ಆಗ ಯೋಗಿಗಳು ನೆರೆದ ಜನರ ಮುಂದೆ "ಮೊದಲು ಅವನು ಒತ್ತಿದ, ನಾನು ಸರಿದೆ. ಹಿಂದುಗಡೆ ಶಿವನು ಒತ್ತಿದ, ಸಾಹೇಬನು ಸರಿದ. ಸೇರಿಗೆ ಸವ್ವಾಸೇರೇ ಮದ್ದು" ಎಂದು ವಿನೋದ ಮಾಡಿದರು.

ಒಂದು ದಿನ ಮಡಿವಾಳರು ದಿಗಂಬರರಾಗಿ ಸಮಾಧಿಗೆ ಕುಳಿತಾಗ ಒಬ್ಬ ದುಷ್ಟನು ಸಿಟ್ಟಿನಿಂದ ಅವರ ತಲೆಯ ಮೇಲೆ ಕೆಂಡವನ್ನು ತಂದಿಟ್ಟನು. ಆಗ ವೈಶಾಖ ಮಾಸದ ಬಿಸಿಲು, ತಲೆಯ ಮೇಲೆ ಕೆಂಡದ ತಾಪ. ಆಗ ಹಾದಿಹಿಡಿದು ಹೋಗು ತ್ತಿದ್ದ ಒಬ್ಬ ಸಜ್ಜನನು ಅವರನ್ನು ನೋಡಿ, ಓಡಿಬಂದು ಆ ಕೆಂಡವನ್ನು ಕಡೆಗೆ ತೆಗೆದೊಗೆದನು. ಕೆಂಡವನ್ನಿಟ್ಟ ಪುಂಡನು ಸುಟ್ಟುಕೊಂಡು ಸತ್ತುಹೋದನು. ಕೆಂಡ ವನ್ನು ತೆಗೆದೊಗೆದವನ ವಂಶವು ಸ್ವಾಮಿಯ ಕೃಪೆಯಿಂದ ಇಂದಿಗೂ ಅಭಿವೃದ್ಧಿ ಹೊಂದುತ್ತ ಸಾಗಿದೆ.

ಮುದೇನೂರ ಕರಿಗೌಡನೆಂಬವನು ಒಮ್ಮೆ ಯೋಗಿಗಳ ಬಳಿಗೆ ಬಂದು ಅವರ ಪಾದಕ್ಕೆ ಪೊಡಮಟ್ಟು ನಿಜಗುಣಾರ್ಯರ ಪದಗಳನ್ನು ತಾಳಲಯಕ್ಕನುಸರಿಸಿ ಬಹು

ಸೊಗಸಾಗಿ ಹಾಡಿದನು. ಆ ಪದಗಳನ್ನು ಕೇಳಿ ಗುರುಗಳು ಆನಂದಪರವಶರಾಗಿ ಕುಣಿಯುಹತ್ತಿದರು. ಆತನ ಹಾಡು ಮುಗಿದಾಗಳೆ ಅವರ ಕುಣಿತವು ನಿಂತಿತು. ಮಡಿವಾಳ ಯೋಗಿಯು ಕರಿಗೌಡನಿಗೆ 'ನಿನ್ನೂರಿನಲ್ಲಿ ಒಂದು ಸಮಾಧಿಯನ್ನು ಕಟ್ಟಿಸು. ನಾವು ಅಲ್ಲಿಗೆ ಬರುವೆವೆಂದರು. ಆ ಪ್ರಕಾರ ಆತನು ಒಂದು ಸುಂದರವಾದ ಸಮಾಧಿಯನ್ನು ಕಟ್ಟಿಸಿ, ಸಮಾಧಿ ಸಿದ್ಧವಾಗಿದೆಯೆಂದು ಪತ್ರ ಬರೆದು, ಆಳಿನ ಕೈಯಲ್ಲಿ ಕೊಟ್ಟು, ಕಳಿಸಿ ದಯಮಾಡಿಸಬೇಕೆಂದು ಕೋರಿದನು. ಹಿಂದುಗಡೆ ಅವನಿಗೆ ನಾನು ಸ್ವತಃ ಹೋಗದೆ ಪತ್ರ ಬರೆದೆನಲ್ಲಾ ! ಎಂದು ಪ್ರಾಯಶ್ಚಿತ್ತವಾಗಿ, ಸ್ವತಃ ಬರುವಷ್ಟರಲ್ಲಿ ಸ್ವಾಮಿಗಳಿಗೆ ಪತ್ರ ಮುಟ್ಟಿತ್ತು. ಕರಿಗೌಡನು ಗುರುಗಳಿಗೆ ಪರಿಪರಿಯಾಗಿ ಬೇಡಿಕೊಂಡನು. ಗುರುಗಳು "ನೀನು ಮೊದಲೇ ಒಕ್ಕಲಿಗ. ಜಗದ ರೀತಿನೀತಿಗಳು ನಿನಗೆ ತಿಳಿದಿಲ್ಲ. ನಡೆ ನಿಮ್ಮೂರಿಗೆ. ನಾನು ಬರಲಾರೆ. ಸಮಾಧಿಯಲ್ಲಿ ಒಂದು ಕಾಯಿಯನ್ನಿಟ್ಟು ಮುಚ್ಚಿಬಿಡು" ಎಂದು ಆಜ್ಞಾಪಿಸಿದರು. ಕರಿಗೌಡನು ನೊಂದುಕೊಂಡು ಊರಿಗೆ ಬಂದು ಅವರಾಜ್ಞೆಯಂತೆ ಸಮಾಧಿಯಲ್ಲಿ ಒಂದು ಕಾಯಿಯನ್ನಿಟ್ಟು ಮುಚ್ಚಿದನು.

ಒಂದು ದಿನ ಮಠದ ಚಿಕ್ಕ ಮರಿದೇವರು ಬೆಕ್ಕಿನಮರಿಯೊಂದನ್ನು ಹಳ್ಳದ ಮಡುವಿನಲ್ಲಿ ಒಗೆಯಲು ಅದು ಮುಳುಗುತ್ತ ಏಳುತ್ತ ಚಟಪಡಿಸಹತ್ತಿತು. ಅದನ್ನು ಶಿವಯೋಗಿಗಳು ಕಂಡು "ಅಜ್ಜಿ, ಬಾ ಬಾ ಎಂದು ಪ್ರೀತಿಯಿಂದ ಕರೆಯಲು ಅದು ಈಜುತ್ತ ಬಂದು ದಂಡೆಗೆ ಹತ್ತಿತು. ಗುರುಗಳು ಮರಿದೇವರಿಗೆ ದಯವೇ ಧರ್ಮದ ಮೂಲವೆಂಬ ಪಾಠ ಕಲಿಸಿದರು. ಮರಿದೇವರು ಪುನಃ ಅಂಥ ಕೆಲಸವನ್ನು ಸರ್ವಥಾ ಮಾಡುವದಿಲ್ಲೆಂದು ಶಪಥಮಾಡಿದರು. ಈ ಪ್ರಾಯಶ್ಚಿತ್ತಕ್ಕಾಗಿ ಗುರುಗಳು ಮರಿದೇವರಿಂದ ಏಕಾದಶ ರುದ್ರ ಪೂಜೆಯೊಡನೆ ಗಣತೃಪ್ತಿಯನ್ನು ಮಾಡಿಸಿದರು.

ನವಿಲುಗುಂದವು ಜನ್ಮಸ್ಥಳವಾದ ಪತ್ತಾರಕುಲದ ನಾಗಲಿಂಗಪ್ಪನೆಂಬ ಹೆಸರಾದ ಅವಧೂತ ಯೋಗಿಯು, ಒಮ್ಮೆ ಸಂಚರಿಸುತ್ತ, ಮಡಿವಾಳಸ್ವಾಮಿಯ ಮಠಕ್ಕೆ ಬಂದರು. ಇದನ್ನು ತಿಳಿದು ಮಡಿವಾಳಯೋಗಿಯು ಚೇಷ್ಟೆಮಾಡಬೇಕೆಂದು ಬಾಗಿಲ ಮುಚ್ಚಿ ಅಗಳಿ ಹಾಕಿ ಒಳಗೆ ಮಲಗಿಕೊಂಡರು. ಆಗ ನಾಗಲಿಂಗಪ್ಪನವರು ಬಂದು ಯೋಗಿಗಳ ಹೆಸರುಗೊಂಡು ಬಾಗಿಲ ತೆರೆಯೆಂದು ಕೂಗಿದರು. ಅದಕ್ಕೆ ಉತ್ತರ ಬಾರದಿರಲು ಅವರು " ಎಲೆ ಮಡಿವಾಳ, ಬಾಗಿಲ ತೆಗೆ " ಎಂದರು. ಅದಕ್ಕೆ ಮಡಿವಾಳಯೋಗಿಯು "ನೀರಾರು ? ಇಲ್ಲಿ ನಿನ್ನದೇನು ಕೆಲಸ ? ಬಂದದಾರಿಯಿಂದ ಹೋಗಿಬಿಡು. ನೀನು ನಾಗಲಿಂಗನಲ್ಲವೇ?" ಎಂದರು. ಆಗ ನಾಗಲಿಂಗಪ್ಪನು ಹಠಹಿಡಿದು ಕುಳಿತೇ ಬಿಟ್ಟನು. ಮಡಿವಾಳರು ನಿರ್ವಾಹವಿಲ್ಲದೆ ಕದ ತೆಗೆದರು.

ಆ ಇಬ್ಬರು ಯೋಗಿಗಳು ಪರಸ್ಪರ ದರ್ಶನಸಾಂಕೇತಿಕೋಕ್ತಿಗಳಿಂದ ಆನಂದಸಾಗರ ದೊಳಗೋಲಾಡಿದರು. ನಾಗಲಿಂಗಪ್ಪನು 'ಕೇಳು ಮಡಿವಾಳ, ನೀನು ಮುಂದೆ ನಡೆ, ನಾನು ಹಿಂದೆ ಬರುವೆನು'ಎಂದು ನುಡಿದು ಅವರಿಗೆ ನಮಸ್ಕರಿಸಿ ಹೊರಟುಹೋದರು.

ಒಂದು ದಿನ ಹೊಸಹಳ್ಳಿಯ ಬೂದಿಸ್ವಾಮಿಗಳು ಸಂಚರಿಸುತ್ತ, ಗರಗಿಗೆ ಬಂದು ಮಡಿವಾಳ ಯೋಗಿಯು ಮಂಚದ ಮೇಲೆ ಒರಗಿರುವದನ್ನು ಕಂಡು, ತಾವು ಬಾಯಿಯಲ್ಲಿ ಹಾಕಿಕೊಂಡ ಕಲ್ಲುಸಕ್ಕರೆಯ ಹರಳುಗಳನ್ನು ಮಡಿವಾಳರ ಬಾಯಿ ಯಲ್ಲಿ ಹಾಕಿ, ತೆಕ್ಕೆಯಲ್ಲಿ ಔಂಕಿ 'ನೀನೆ ನನ್ನ ತಂದೆ, ಬಂಧುಬಳಗ' ಎಂದು ಕೊಂಡಾ ಡಲು ಮಡಿವಾಳರು "ಏ ಬೂದ್ಯಾ, ನೀನು ತೆಕ್ಕಿಮುಕ್ಕಿ ಬಿದ್ದು ನನ್ನನ್ನು ಮಂಚದ ಮೇಲಿಂದ ಕೆಳಕ್ಕ ಕೆಡವೀಯೊ! ಜಿಡು, ಸರಿ ಹಿಂದೆ. ನೀ ಕಿವುಡ, ನಾ ಕುರುಡ" ಎಂಬ ಮರ್ಮೋಕ್ತಿಗಳನ್ನಾಡಿದರು. ಆಗ ಮಡಿವಾಳರು ಭಕ್ತರನ್ನು ಕರೆದು, "ಈ ಬೂದಿಸ್ವಾಮಿಗಳನ್ನು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ ಊರಲ್ಲಿ ಮೆರೆಸಿರೆಂ"ದರು. ಜನರು ಮಹದಾಜ್ಞೆಯಂತೆ ಹಾಗೇ ಮಾಡಿದರು. ಕೆಲಕೆಲವು ಯೋಗಿಗಳಿಗೆ ಬಾಲ್ಯಾ-ವಸ್ಥೆ, ಪಿಶಾಚಾವಸ್ಥೆ, ಉನ್ಮತ್ತಾವಸ್ಥೆ ಎಂಬ ಮೂರು ಅವಸ್ಥೆಗಳು ಪ್ರಾಪ್ತವಾಗು ತ್ತವೆ. ಬೂದಿಸ್ವಾಮಿಗಳು ಹಾಗು ಮುಳಗುಂದ ಮಹಾಂತಸ್ವಾಮಿಗಳು ಬಾಲ್ಯಾ-ವಸ್ಥೆಯವರು. ಎಮ್ಮಿಗನೂರ ಜಡೆಸ್ವಾಮಿಗಳಿಗೆ ಉನ್ಮತ್ತಾವಸ್ಥೆ ಉಂಟಾಗಿತ್ತು. ಕೋಡಿಕೊಪ್ಪದ ಹುಚ್ಚೀರಪ್ಪನಿಗೆ ಪಿಶಾಚಾವಸ್ಥೆಯು ಪ್ರಾಪ್ತವಾಗಿತ್ತು.

ಒಮ್ಮೆ ಅಗಡಿಯಿಂದ ಶೇಷಾಚಲದ ಬ್ರಾಹ್ಮಣಸ್ವಾಮಿಗಳು ಮಡಿವಾಳರ ಮಹತ್ವವನ್ನು ಕೇಳಿ, ಅವರ ದರ್ಶನಕ್ಕೆ ಬಂದರು. ಮಡಿವಾಳರು ಅವರಿಗೆ ಸಾಧು-ಮರ್ಯಾದೆ ಮಾಡಿ, ಪ್ರೇಮದಿಂದ ಮಾತಾಡಿ, ಊರೊಳಗ ಹೋಗಿರೆಂದು ಆಳಿನ ಸಂಗಡ ಕಳಿಸಿಕೊಟ್ಟರು. ಊರಲ್ಲಿ ಅವರಿಗೆ ಬಹುಮಾನ, ಕಾಣಿಕೆಗಳು ಯಥೇಚ್ಛವಾಗಿ ದೊರೆಯಲು ಅವರು ಆನಂದಿತರಾಗಿ ಮಠಕ್ಕೆ ಬಂದು ಶಿವಯೋಗಿಗೆ ಮಣಿದು ಅವರ ಕೃಪಾಶೀರ್ವಾದ ಪಡೆದು ತಮ್ಮೂರಿಗೆ ತೆರಳಿದರು.

ಒಂದು ದಿನ ಶಾಂತಮೂರ್ತಿಯಾದ ತರುಣನೋರ್ವನು ಕಾಯಿ-ಕರ್ಪೂರ ತಂದು ಯೋಗಿಯ ಮುಂದಿಟ್ಟು ಸಾಷ್ಟಾಂಗವೆರಗಿ ನಿಂದನು. ಆತನ ಹೆಸರು ಸಿದ್ಧಪ್ಪ. ಆತನ ಹುಟ್ಟಿದೂರು ಬಿದರೂರು. ಆತನ ವಾಸಸ್ಥಳ ಹುಬ್ಬಳ್ಳಿ. ಇವನ್ನೆಲ್ಲ ಯೋಗಿಗಳು ಅವನಿಂದ ತಿಳಿದುಕೊಂಡು 'ತಮ್ಮಾ, ನಿನಗೇನು ಬೇಕೆಂ'ದು ಕೇಳಿದರು. ಆತನು "ಬುದ್ಧೀ, ತಮ್ಮ ಸೇವೆ ಮಾಡಿ ಜನನ ಮರಣ ರೂಪದ ಭವವನ್ನು ನೀಗಿ ಕೊಳ್ಳಲು ಬಂದಿರುವೆ. ಕರುಣವಿಟ್ಟು ನನ್ನನ್ನು ರಕ್ಷಿಸಬೇಕೆಂ"ದು ಬೇಡಿಕೊಂಡನು. ಆಗ ಮಡಿವಾಳಯೋಗಿಯು "ನೀನು ಊರಲ್ಲಿ ದಿನಾಲು ಭಿಕ್ಷೆಬೇಡಿ ತಂದು ಆಪರರ್ಧ

ವನ್ನು ನನಗರ್ಪಿಸಿ ಉಳಿದರ್ಥವನ್ನು ನೀನು ಸ್ವೀಕರಿಸಬೇಕೆಂ"ದು ಆಜ್ಞಾಪಿಸಿದರು. ಆದಕ್ಕೆ ಸಿದ್ಧಪ್ಪನು ಸಂತೋಷದಿಂದ ಒಪ್ಪಿಕೊಂಡು ಕೆಲಪು ವರ್ಷ ಅವರ ಸೇವೆಯಲ್ಲಿ ತತ್ಪರನಾಗಿ, ಅವರು ಹೇಳುವ ಶಾಸ್ತ್ರ ತತ್ವಗಳನ್ನು ಕೇಳಿಕೊಂಡು ಕೃತಾರ್ಥನಾದನು. ಕೊನೆಗೆ ಗುರುಗಳು ಸಿದ್ಧಪ್ಪನಿಗೆ "ನಿನ್ನ ಪೂರ್ವಸುಕೃತದಿಂದ ನಿನಗೆ ಜ್ಞಾನವುಂಟಾಗಿದೆ. ನೀನು ಜೀವನ್ಮುಕ್ತನಾಗುವೆ. ನೀನು ಒಳ್ಳೆ ಕೀರ್ತಿವಂತನಾಗಿ ಬಾಳುವೆ" ಎಂದು ಹರಸಿ ಬೀಳ್ಕೊಟ್ಟರು. ಮುಂದೆ ಆತನು ಹುಬ್ಬಳ್ಳಿಯ ಸಿದ್ಧಾರೂಢನೆಂದು ಪ್ರಸಿದ್ಧಿಪಡೆದನು.

ಒಮ್ಮೆ ಮಡಿವಾಳಯೋಗಿಗಳು ಇಟಗಿಯೆಂಬೂರಿಗೆ ದಯಮಾಡಿಸಿದರು. ಅಲ್ಲಿಗೆ ಹಾಳಕೆರೆಯ ಅನ್ನದಾನಸ್ವಾಮಿಗಳು ಮಡಿವಾಳರ ದರ್ಶನಕ್ಕೆಂದು ರೋಣದ ವೀರನಗೌಡ, ಇಟಗಿ ಹೊನ್ನಪ್ಪ ಗೌಡರನ್ನು ಕೂಡಿಕೊಂಡು ಸ್ವಾಮಿಯ ಪಾದಕ್ಕೆ ಅಭಿವಂದಿಸಿ ನಿಂತುಕೊಂಡರು. ಮಡಿವಾಳರು ಆ ವಿರಕ್ತ ಅನ್ನದಾನಸ್ವಾಮಿಯ ಲಿಂಗತೇಜವನ್ನು ಕಂಡು ಆನಂದತುಂದಿಲರಾಗಿ 'ನೀನು ವಿರಕ್ತರೊಳು ಉನ್ನತ ಸ್ಥಾನ ಪಡೆಯುವೆ" ಎಂದು ಜ್ಞಾನೋಪದೇಶ ಮಾಡಿ, ತಮ್ಮ ತಲೆಯ ಮೇಲಿನ ಕಾವಿ ಟೊಪ್ಪಿಗೆಯನ್ನು ಅವರ ತಲೆಗೆ ಹಾಕಿದರು. ಅದು ತನ್ನ ಮಹಾಭಾಗ್ಯವೆಂದು ಸ್ವೀಕರಿಸಿ ಶ್ರೀ ಅನ್ನದಾನಸ್ವಾಮಿಗಳು ಲಿಂಗೈಕ್ಯರಾಗುವವರೆಗೂ ಆ ಟೊಪ್ಪಿಗೆಯನ್ನು ಕಾಯ್ದುಕೊಂಡಿದ್ದರು.

## ೧೪. ಮಡಿವಾಳರ ಕೊನೆಯ ದಿನಗಳು.

ಮಡಿವಾಳಯೋಗಿಗೆ ಮುಪ್ಪಡಸಿತು. ಕಣ್ಣು ಕಾಣಿಸದಾದವು. ಕಪೋಲಗಳು ಸುಕ್ಕುಗಟ್ಟಿದವು. ಆದಾಗ್ಯೂ ದಿನಾಲು ಅವರ ಬೋಧಪ್ರವಚನವು ಅವ್ಯಾಹತವಾಗಿ ನಡೆದೇ ಇತ್ತು. ಒಂದು ದಿನ ಅವರು ಮಠದ ಮರಿದೇವರನ್ನು ಕರೆದು "ನೀನು ದಿನಾಲು ತರುವ ಕಂತಿಭಿಕ್ಷದ ಕಜ್ಜವನ್ನು ಒಣಗಿಸಿ ಹರವಿಗಳಲ್ಲಿ ತುಂಬಿಡೆಂ"ದು ಆಜ್ಞಾಪಿಸಿದರು. ಮರಿದೇವರಿಗೆ ಆದರ ಅರ್ಥವಾಗಲಿಲ್ಲ. ಗುರುಗಳಪ್ಪಣೆಯಂತೆ ನಡೆದರು. ಒಂದು ದಿನ ಮೈಸೂರ ಕಡೆಯ ಸಿದ್ಧಲಿಂಗಪ್ಪನೆಂಬವನು ಯೋಗಿಗಳ ಪಾದಸೇವೆಗಾಗಿ ಗರಗಿಗೆ ಬಂದನು. ಆತನಮೇಲೆ ಗುರುಕೃಪೆಯಾಯಿತು. ಗುರುಗಳು ಆತನಿಗೆ ಮಾತಿಗೊಮ್ಮೆ ತೋಂಟದ ಸಿದ್ಧಲಿಂಗಾ ಎಂದು ಕರೆಯಹತ್ತಿದರು. ಆ ಸಿದ್ಧ-ಲಿಂಗನು ಹಬ್ಬಹುಣ್ಣಿವೆಗಳಲ್ಲಿ ಮಾಡಿದ ಹೋಳಿಗೆ ಕಡಬುಗಳನ್ನು ಸಹ ಒಣಗಿಸಿ ಗಳಿಗೆಗಳಲ್ಲಿ ತುಂಬಿಡುತ್ತಿದ್ದನು. ಮುಂದೆ ಕ್ರಿ. ಶ. ೧೮೭೭ರಲ್ಲಿ ಡೋಗಿಬರಬಿದ್ದು

ಎತ್ತನೋಡಿದತ್ತ ಜನಗಳು ಹಸಿವೆಯಿಂದ ಬಳಲಿ ಬೆಂಡಾಗಿ ಸಾಯುಹತ್ತಿದರು. ಆಗ ಸ್ವಾಮಿಗಳು ಮಠಕ್ಕೆ ಬಂದವರಿಗೆ ಒಣಗಿಸಿದ ರೊಟ್ಟಿಗಳನ್ನು ಹಂಚಿದರು. ಶಿವಯೋಗಿಗೆ ಮೊದಲೇ ಬರಗಾಲದ ಸೂಚನೆಯು ಗೊತ್ತಾಗಿದ್ದಿತು.

ಸಿದ್ಧಲಿಂಗಮರಿದೇವರು ಗುರುಸೇವೆಯಲ್ಲಿ ನಿತ್ಯ ತತ್ಪರರಾಗಿದ್ದರು. ಗುರುಗಳು ಗುಡುಗುಡಿ ಸೇದುತ್ತಿದ್ದರು. ಶಿಷ್ಯನು ಅದನ್ನು ಅಣಿಮಾಡಿಕೊಡುತ್ತಿದ್ದನು. ಕಣ್ಣು ಕಾಣದ ಗುರುವಿನ ಕೈಹಿಡಿದು ಮರಿದೇವರು ಶೌಚಾದಿಕಾರ್ಯಗಳಿಗೆ ಕರೆದೊಯ್ಯುತ್ತಿದ್ದರು. ಸ್ನಾನ ಶಿವಪೂಜಾದಿಗಳನ್ನು ಮಾಡಿಸಿ ಮುಂದೆ ಕುಳಿತು ತುತ್ತುಮಾಡಿ ಉಣಿಸುತ್ತಿದ್ದರು. ಊಟವಾದಮೇಲೆ ಮೆಲ್ಲಾಸಿನೊಳು ಮಲಗಿಸುತ್ತಿದ್ದರು. ಹೀಗಿರಲು ಒಂದು ದಿನ ಹುಬ್ಬಳ್ಳಿಯ ಪಾರುದ್ರ, ಪರಕಾಳಿ ಶಿವಪುತ್ರ, ವೀರಯ್ಯಾ, ಭಿಮ್ಮನಗೌಡಾ ಎಂಬವರು ಮರಿದೇವರಿಗೆ “ಸ್ವಾಮಿಗಳಿಗೆ ಮುಪ್ಪು ಆವರಿಸಿತು. ಯಾವಾಗ ಕೈಬಿಡುವರೋ ತಿಳಿಯದು. ನೀನು ಬೇಗನೆ ಅವರಿಂದ ಅನುಗ್ರಹ ಹೊಂದು” ಎಂದು ಹೇಳಿದರು. ಗುರುವಿಗೂ ಸಿದ್ಧಲಿಂಗನಿಗೆ ಉಪದೇಶ ಕೊಡಬೇಕೆಂಬ ಬಯಕೆಯುಂಟಾಗಿ ಆತನನ್ನು ಕರೆದು "ಸಿದ್ಧಲಿಂಗಾ, ನೀನು ನಮ್ಮ ಊಳಿಗವನ್ನು ಚೆನ್ನಾಗಿ ಮಾಡಿದೆ. ನಿನಗೆ ಶುಭಮುಹೂರ್ತದಲ್ಲಿ ಉಪದೇಶಕೊಡುವೆವು. ನೀನು ಮಾಲದಿಯ ಪ್ರಸ್ಥಮಾಡಿಸಿ ಗಣತೃಪ್ತಿಮಾಡು” ಎಂದು ಆಜ್ಞಾಪಿಸಿದರು. ಅದರಂತೆ ಮರಿದೇವರು ಪ್ರಸ್ಥವನ್ನೇರ್ಪಡಿಸಿದರು. ಕೆಲದಿನಗಳ ಮೇಲೆ ರಾಮನಗೌಡನನ್ನು ಕರೆಯಿಸಿ ಅಂದೇ ತಾವು ಸಿದ್ಧಲಿಂಗಪುರಿಗೆ ಉಪದೇಶ ಕೊಡುವುದಾಗಿ ಹೇಳಿ, ಆಪ್ರಕಾರ ಮಾಡಿದರು.

ಮಡಿವಾಳಯೋಗಿಗಳು ಸ್ವಮತದವರನ್ನು ಪುರಸ್ಕರಿಸಿ, ಅನ್ಯಮತದವರನ್ನು ಸರ್ವಥಾ ತಿರಸ್ಕರಿಸುತ್ತಿರಲಿಲ್ಲ. ತಡಕೋಡ ರಾಮಭಟ್ಟರು, ಚಿದಂಬರಸ್ವಾಮಿಗಳು, ಮುಸಲ್ಮಾನ ಚಮನಶಹ, ಇವರು ಸದಾ ಮಡಿವಾಳರ ಸಹವಾಸದಲ್ಲಿರುತ್ತಿದ್ದರು. ಘನಪಂಡಿತರೊಡನೆ ವಾಗ್ವಾದ ಮಾಡುವುದು, ಪ್ರಚಂಡವಾದ ಕುದುರೆಸವಾರಿ ಮಾಡುವುದು ಇವೆರಡು ಚಟಗಳು ಅವರಿಗೆ ಸ್ವಾಭಾವಿಕವಾಗಿದ್ದವು. ಇವರು ಕ್ರಿಸ್ತರ ಬೈಬಲ್, ಮುಸಲ್ಮಾನರ ಕುರಾನಗಳನ್ನು ಓದಿ ತಿಳಿದವರಾಗಿದ್ದರು. ಭಕ್ತರಿಗೆ ಅವರು ‘ಯಾವಾಗಲೂ ಸತ್ಸಂಗಮಾಡಿರಿ, ದೇವರಲ್ಲಿ ವಿಶ್ವಾಸವಿಡಿರಿ. ಕಾಮಕ್ರೋಧಾದಿಗಳಿಗೆ ವಶವಾಗಬೇಡಿರಿ. ಅಹಂಕಾರ ಮಮಕಾರಗಳನ್ನು ಬಿಡಿರಿ. ಪರನಿಂದೆ ಪರಪೀಡೆಗಳನ್ನುಚ್ಚರಿಸಬೇಡಿರಿ’ ಎಂದು ಉಪದೇಶಿಸಿದರು. ಬೇರೆಡೆಗೆ ಹೋಗದೆ ಗರಗದಲ್ಲಿಯೇ ತಮ್ಮ ಅವತಾರದ ಸಮಾಪ್ತಿಯನ್ನು ಮಾಡಲಿಚ್ಛಿಸಿದರು.

## ೧೫. ಮಡಿವಾಳೇಶ್ವರರ ಲಿಂಗೈಕ್ಯ

ಮಡಿವಾಳ ಶಿವಯೋಗಿಗೆ ಲಿಂಗೈಕ್ಯವಾಗುವ ಸಮಯ ಪ್ರಾಪ್ತಿಸಿತು. ಗರಗದ ಭಿಷ್ಟನಗೌಡನನ್ನು ಕರೆಯಿಸಿಕೊಂಡು ತಮ್ಮ ಲಿಂಗೈಕ್ಯದ ದಿನಗಳು ತೀರ ಸಮೀಪಿಸಿರುವವೆಂದು ತಿಳಿಸಲು, ಆತನು ಹೌಹಾರಿ "ಬುದ್ಧೀ, ಇನ್ನೂ ಹತ್ತು ವರ್ಷ ಬಾಳಿ ತಾವು ನಮ್ಮನ್ನುದ್ಧರಿಸಬೇಕೆಂ"ದು ಬೇಡಿಕೊಂಡನು. ಆಗ ಸ್ವಾಮಿಗಳು "ನಾವು ಇಂದಿಗೆಂಟನೆಯ ದಿನಕ್ಕೆ ಲಿಂಗೈಕ್ಯರಾಗುವೆವು. ಅದಕ್ಕಾಗಿ ನಮಗೊಂದು ಸಮಾಧಿಯನ್ನು ಸಿದ್ಧಗೊಳಿಸಬೇಕು" ಎಂದು ಅಪ್ಪಣೆಮಾಡಿದರು. ಸ್ವಾಮಿಗಳು ತೀವ್ರವೇ ಲಿಂಗೈಕ್ಯರಾಗುತ್ತಾರೆಂಬ ಸುದ್ದಿಯು ಎಲ್ಲ ಕಡೆಗೂ ಹಬ್ಬಿ ಜನಗಳು ಕಣ್ಣೀರಿಟ್ಟರು. ಹುಗರಕಿ ಅಯ್ಯಪ್ಪ ದೇಸಾಯರು ಸ್ವಾಮಿಗಳ ಆಜ್ಞಾನುಸಾರ ಎರಡು ಸಾವಿರ ರೂಪಾಯಿ ವೆಚ್ಚಮಾಡಿ ಸಮಾಧಿಕಾರ್ಯವನ್ನು ಪೂರೈಸಿದರು. ಈ ಕಾರ್ಯಕ್ಕೆ ಸ್ವಸ್ಥಳ ಪರಸ್ಥಳದ ಭಕ್ತರು ತಮ್ಮ ನೆರವು ನೀಡಿದರು. ಗುರುಗಳು ಭಕ್ತರನ್ನು ಕರೆಯಿಸಿ, "ನಾವು ಲಿಂಗೈಕ್ಯರಾದ ಬಳಿಕ ಕ್ಷೌರ ಮಾಡಿಸಿ, ಮೈದೊಳೆದು ಭಸಿತವ ಹೂಸಿ, ಬಂಡಿಯ ಮೇಲೆ ಕುಳ್ಳಿರಿಸಿ ಊರಲ್ಲಿ ಮೆರಿಸಿ ತಂದು ನನ್ನ ಶವವನ್ನು ಸಮಾಧಿಯಲ್ಲಿ ವಿಧ್ಯುಕ್ತವಾಗಿರಿಸಬೇಕೆಂ"ದು ಆಜ್ಞಾಪಿಸಿದರು.

ಗುರುಗಳು ಶಿವೈಕ್ಯರಾಗುವ ಸುದ್ದಿಯು ಕಾಳ್ಗಿಚ್ಚಿನಂತೆ, ಸುತ್ತು ನಾಡಲ್ಲೆಲ್ಲ ಪಸರಿಸಲು,ಜನರು ಅವರ ಅಂತಿಮ ದರ್ಶನಕ್ಕೆ ತಂಡತಂಡವಾಗಿ ಬರಲಾರಂಭಿಸಿದರು. ಗುರುಗಳು ಮರಿದೇವರನ್ನು ಕರೆಯಿಸಿ ಒಂದು ಜೋಗಸೆತುಂಬ ರೂಪಾಯಿಗಳನ್ನು ಕೊಟ್ಟು ಬಡಬಗ್ಗರಿಗೆ ದಾನಮಾಡಹೇಳಿದರು. ಅವರಿಗೆ ಭಕ್ತಿವಂತರಾಗಿ ಬಾಳಿರೆಂದು-ಪದೇಶಿಸಿದರು. ಹರಗುರುಚರಮೂರ್ತಿಗಳಿಗೆ ವಸ್ತ್ರದಾನ ಮಾಡಿದರು. ಬಡ ಹೆಣ್ಣುಮಕ್ಕಳಿಗೆ ಸೀರೆಯನ್ನು ಕೊಡಿಸಿದರು.

ಶ್ರೀಗಳು ಹುಗರಕಿ ದೇಸಾಯರನ್ನು ಕರೆದು ಸಮಾಧಿ ಮುಗಿದಿದೆಯೋ ಎಂದು ಕೇಳಿದರು. ಆತನು ಗದ್ಗದ ಕಂಠದಿಂದ ತಮ್ಮಾಜ್ಞೆಯಂತೆ ಪೂರ್ಣ ಸಿದ್ಧವಾಗಿದೆ ಎಂದು ಬಿಕ್ಕಳಿಸುತ್ತ ಉತ್ತರವಿತ್ತನು. ಆ ಮೇಲೆ ಭಕ್ತಾದಿಗಳಿಗೆ "ಇನ್ನು ೪೦ ವರ್ಷಕ್ಕೆ ನಾನು ಸಾಧುಜನರಲ್ಲಿ ಜನಿಸಿ ಈ ಮಠಕ್ಕೆ ಬರುವೆನು, ದೇವರು ನಿಮಗೆ ಕಲ್ಯಾಣ ಮಾಡಲಿ" ಎಂದಾಶೀರ್ವದಿಸಿ ಭಕ್ತಜಂಗಮರಿಗೂ ಬಡಬಗ್ಗರಿಗೂ ಪುರಿಗಡಬಿನ ಪ್ರಸ್ಥವನ್ನು ಮಾಡಿಸಿದರು. ಎಲ್ಲರ ಅರ್ಪಿತವಾದಮೇಲೆ ಪರಕಾಳಿ ಮರಿಗೆವ್ವನೆಂಬವಳಿಂದ ಹುಳಿಪಲ್ಲೆ ಉಸುಳಿ ಮುದ್ದೆ ಮಾಡಿಸಿಕೊಂಡು ಲಿಂಗಾರ್ಪಿತ ಮಾಡಿದರು. ನಂತರ ಮಂಚವನ್ನೇರಿ ಅದರ ಮೇಲೆ ಪವಡಿಸಿದರು. ಆ ಮೇಲೆ ಯೋಗಿಗಳು 'ಅಜ್ಜಾ, ಬಾವಾ' ಎಂದು ಗುರುನಾಮಸ್ಮರಣೆ ಮಾಡುತ್ತ ಲಿಂಗದಲ್ಲಿ

ಬೆರೆದು ಬೈಲಾದರು. ನಂತರ ಶಿವಭಜನೆ ಶಿವಕೀರ್ತನೆಗಳು ನಡೆದವು. ಗುರುಗಳ ಆಜ್ಞೆಯಂತೆ ಸಮಾಧಿಕಾರ್ಯವನ್ನು ಯಥಾವಿಧಿ ಸಾಂಗಗೊಳಿಸಿದರು.

ಈ ಪುರಾಣವನ್ನು ರಚಿಸಿದ ಲಿಂ. ಹುಕ್ಕೇರಿ ಸದಾಶಿವಶಾಸ್ತ್ರಿಗಳು ನಿಜವಾಗಿಯೂ ಪುಣ್ಯಶಾಲಿಗಳು. ಈ ಪುರಾಣದಲ್ಲಿ ಅನಾವಶ್ಯಕವಾದ ಉಪಕಥೆಗಳಿಗಾಗಲಿ ಸುದೀರ್ಘವಾದ ವೀರಶೈವ ತತ್ವವಿಚಾರಗಳಿಗಾಗಲಿ ಆಸ್ಪದ ಕೊಡದೆ ಕಥಾ ಪ್ರವಾಹವು ಕಡೆತನಕ ಅವ್ಯಾಹತವಾಗಿ ಸಾಗುವಂತೆ ಕವಿಗಳು ರಚಿಸಿರುವದರಿಂದ ಅದು ಓದುವವರ ಮತ್ತು ಕೇಳುವವರ ಮನಸ್ಸಿನಲ್ಲಿ ಅಭಿರುಚಿಯನ್ನು ಹುಟ್ಟಿಸಿ ಆನಂದಸಾಗರದಲ್ಲಿ ತೇಲಿಸಿಬಿಡುತ್ತದೆ. ಮಡಿವಾಳ ಸ್ವಾಮಿಗಳ ಚರಿತ್ರೆಯ ಘಟನೆಗಳು ಹಾಗು ಅವರು ಮಾಡಿದ ಪವಾಡಗಳು ಸಹ ಕಲ್ಪಿತವಾಗಿರದೆ ನಿಜವಾದ ಸಂಗತಿಗಳಾಗಿರುವುದರಿಂದ ಓದುಗರ ಮನಸ್ಸನ್ನು ವಿಶಿಷ್ಟ ಸೆಳೆಯುತ್ತಿವೆ. ಅವರು ಕಾವ್ಯವನ್ನು ಬಹು ಸುಲಭ ಸುಂದರ ಶೈಲಿಯಲ್ಲಿ ಬರೆದುದರಿಂದ ಎಲ್ಲರೂ ಓದಿ ತಿಳಿದು ಆನಂದ ಬಡಲು ಸಾಕಷ್ಟು ಆಸ್ಪದವಿದೆ. ಈಗಿನ ಕಾಲದಲ್ಲಿ ಇಂಥ ಪುರಾಣಗಳ ಅವಶ್ಯಕತೆ ಬಹಳವಾಗಿದೆ.



ಶ್ರೀ ಶಿವಯೋಗಿ

# ಮಡಿವಾಳೇಶ್ವರ ಪುರಾಣ

## ವಾರ್ಧಿಕ ಷಟ್ಪದಿ :

ಶ್ರೀ ಗುರುವೆ ಭವಸಾಗರೋತ್ತರಣ ವರತರಣಿ ।
ಶ್ರೀ ಗುರುವೆ ನಿರ್ವಾಣ ನಿರ್ಯಾಣ ಘನಸರಣಿ ।
ಶ್ರೀ ಗುರುವೆ ಅಜ್ಞಾನ ಸಂತಮಸತರಣಿ ಪರಿಹಸಿತ ಧನ
ಭೂಮಿತರಣಿ ॥
ಶ್ರೀ ಗುರುವೆ ಕರುಣಾತಿಭರಣನಪಗತಮರಣ ।
ಶ್ರೀ ಗುರುವೆ ಪರತತ್ವಸಾಧಾರಣನು ಜಗದಿ ।
ಶ್ರೀ ಗುರುವೆ ಸುಜ್ಞಾನಿಗಳ ಶಿರೋಮಣಿಯೆನಲ್ ಮಣಿವೆನವ
ನಡಿಗಳಿಗೆ ನಾಂ ॥೧॥

ಸೋಮ ನಿನ್ನಯ ನಾಮವೀ ಭೂಮಿಯೊಳು ಪತಿತ ।
ಪಾಮರರನೆಲ್ಲರಂ ಪಾವನಂಗೈದು ಮೇಣ್ ।
ಕಾಮಿತವನಿತ್ಯತ್ವದೊಳು ಮುಕ್ತಿಕಾಮಿನಿಯು ಕೈಗೂಡಿಸುವುದೆಂಬುವ ॥
ಈ ಮಾತುಗೇಳಿ ಶಿವ ನಿನ್ನ ಘನನಾಮವನು ।
ಪ್ರೇಮದಿಂ ಹೃದ್ಧಾಮದೊಳು ಜಪಿಸಿ ಭವವ ।
ರ್ವಾಮಗೊಳಿಸುವೆನಭವ ಪೊರೆಯೆನ್ನ ಮರೆಯದಿರು ಪುರಹರನೆ ನಿನಗೆರಗುವೆ ॥೨॥

ಶಿತಿಗಳನ ಜೀವಸತಿ ಮಂದಗತಿ ಪ್ರಥಿತಯುತಿ ।
ಪತಿವಿನುತಿರತಿ ಜಗತ್ತ್ರಿತಿಗೆ ಗತಿಯಖಿಲಸುರ ।
ಸತಿಯರಿಂ ನತಿಗೊಂಬ ಜಗತಿಯೊಳು ತನಗೆ ಪ್ರತಿಮಾನವಿರದಿಹ ದೇವಿಯು ॥
ಕ್ಷಿತಿಯಿರದ ಶ್ರುತಿಶಿರದ ಮಿತಿಗಳೆದ ನುಡಿಗಳಿಗ ।
ತಿಥಿಯಾಗದತಿ ಮಹಿಮಯುತೆ ಗಿರಿಜೆ ಜಗದಂಬೆ ।
ಪತಿಕರಿಸಲೆನ್ನನವಳತಿಗಳೆಯದಲೆ ಮಣಿವೆನತಿ ಜಯಾವತಿ ಪಾರ್ವತಿ ॥೩॥

ಹರನ ಸಭೆಯಲ್ಲಿ ತನಗವಮಾನವಾಯ್ತೆಂದು ।
ಮರಣಗುಡುವಧ್ವರವನೆಸಗಪೇಳ್ಕಿನತಖಿಲ ।
ಸುರಮುನೀಶರ ಬರಿಸಿ ಸವನಾರಂಭಿಸಲ್ಕದ ಕೇಳಿ ದಾಕ್ಷಾಯಿಣಿ ॥
ಬರುತಿರಲು ಮೊಗವೆತ್ತಿ ನೋಡದವಳಂ ತಿರ ।
ಸ್ಕರಿಸಿದ ಶಿವದ್ರೋಹಿದಕ್ಷನಂ ಸದೆದಿಕ್ಕ ।
ಮೊರೆಹೊಕ್ಕರಂ ಪೊರೆದು ಮೀಂಸೆನಿಸಿದ ವೀರಭದ್ರನಿಗೆ ವಂದಿಸುವೆನು ॥೪॥

ಭಾವಿಸಲ್ ಕ್ರತುಶಾಲೆಯೆಂಬ ಪೊಸ ಪೂಬನದಿ ।
ಪೂವಡಿಗನಂತೆವೊಲು ದಕ್ಷನ ಶಿರೋಬ್ಜಮಂ ।
ಪಾವಕನ ನಾಲಗೆಯ ಮಾಂದಳಿರ ಭಗ ಸೂರ್ಯಲೋಚನೇಂದೀವರವನು ॥
ಆ ವಾಣಿಯಾ ಘ್ರಾಣಚಂಪಕವ ಪೂಷಾರ್ಕ ।
ನಾ ವಿಮಲರದ ಕುಂದ ಸಂದೋಹಮಂ ಬಿಡದೆ ।
ಕೌವರಿಯನಾಯ್ದು ಕೊಯ್ದಂದಗೊಳಿಸಿದ ಚತುರ ಗಣನಾಥ ಪೊರೆಯೆನ್ನನು ॥೫॥

ಪೂಜಕರ ತೊಡರೆಡರನಡಗಿಸಲು ಘನ ವಿಘ್ನ ।
ರಾಜನೆಂದನ್ವರ್ಥ ನಾಮದಿಂ ಶೋಭಿಸುವ ।
ಮೂಜಗದ ಸುರನರೋರಗದ ಸಮುದಾಯದಿಂ ಪೂಜೆಗೊಂಡು ವಿರಾಜಿಪ ॥
ತೇಜದೊಡವೆರೆದ ಗಣರಾಜನಿಂ ಕೃತಿಗೆಡರು ।
ಮೂಡುವಂತೆಸಗಲಿಂದನವರತಮವನ ಪದ ।
ರಾಜೀವಕೆರಗಿ ಮನಕರಗಿ ನಾಂ ಬೇಡುವೆನು ಮನದಿ ಪ್ರಸಿದ್ಧಿಯನ್ನು ॥೬॥

ಖಂಡಪರಶುವಿನ ಚಿದ್ಧರ್ಮವದು ವಿಮಲಾಂಗ |
ಗೊಂಡು ಧರ್ಮಾರ್ಥ ಕಾಮವು ಮೋಕ್ಷ ಚರಣಗಳ |
ತಂಡಮಿರೆ ಬ್ರಹ್ಮಾಂಡದಂಡಲೆಯ ಪರಿಹರಿಸಿ ಸೊಗಬರಿಸಿ ನೆರೆ ಪರಸಿದ ||
ತುಂಡವೈದುಳ್ಳನಿಗೆ ವಾಹನಂ ತಾನಾದ |
ಚಂಡಕರ ಶತಕೋಟಿ ಕಾಂತಿ ಮಂಡಲವ ಕ್ಕೈ |
ಕೊಂಡ ವೃಷಭೇಂದ್ರ ಗತತಂದ್ರ ಗುಣಸಾಂದ್ರ ಗಣಚಂದ್ರ ಕೊಡು ಮಂಗಲವನು॥೭||

ವಾಣಿಯಂ ಪರಮ ಕಲ್ಯಾಣಿಯು ಕಮಲಜನ |
ರಾಣಿಯುಂ ಗಿರಿಸಮಶ್ರೋಣಿಯುಂ ಕೀರವ್ಯದು |
ವಾಣಿಯುಂ ವೀಣಾಂಕಪಾಣಿಯುಂ ವಿಬುಧರಮಣೀಮಣಿ ಭಾರತಿಯನು ||
ಜಾಣೆಯುಂ ವಿದ್ಯಾಪ್ರದಾಯಿನಿಯು ಧೀಖನಿಯು |
ಕ್ಷೋಣಿಯೊಳು ಸನ್ಮಾನನೀಯರೊಳಗಣಿಯರಂ |
ಮಾನವತಿಯುಂ ಸರಸ್ವತಿಯ ನಾಂ ಬೇಳ್ವೆ ಸತ್ಕವಿತೆಯೊಳು ಶುಭಗತಿಯನು ||೮॥

ಮಾಡೆಯ ವಿಷಾಯುಮಂ ನೆರೆಗೈವುತಂ ತತ್ಪ |
ಲಾಯನಮನಂಟಿಸಿ ತಜ್ಜಯಂ ಬಡಿಯುತಿರೆ |
ಕಾಯಜನ ಪಾಡೇನು ಕಲ್ಯಾಣಾಗವಿರಿಸಿ ಬಸವಂಗೆ ಶಿವತತ್ವವ ॥
ಶ್ರೀಯನಾಗಿಸಿ ಮೆರೆದು ಗೊಗ್ಗಯನು ಮೋಣು ಮು |
ಕ್ತಾಯಕ್ಕನೀಶ್ವರಿಗೆ ಬೋಧಿಸಿದ ಗುರುವ ಪ್ರಭು |
ರಾಯನಂ ಜ್ಞಾನಸಾರಾಯನಂ ಮಣಿದು ಬೇಡುವೆನು ನಾ ಭಕ್ತಿಯಿಂದ ॥೯॥

ಕೊಲ್ಲಿಪಾಕಿಯ ಸೋಮನಾಥ ಲಿಂಗದೊಳುದಿಸಿ |
ನಿಲ್ಲದೆಲ್ಲೆಡೆಯಲ್ಲಿ ಚರಿಸಿ ತಾನುದ್ಧರಿಸಿ |
ಕ್ಷುಲ್ಲಕನ ಖರ್ಪರನಹಂಕಾರವಂ ಮುರಿದು ಮಲಯಾದ್ರಿಗಾಗವಿಸುತೆ ॥
ಸಲ್ಲಲಿತ ಭಕ್ತಿ ಸಂಪುಲ್ಲನಹಗಸ್ತ್ಯನಿಗೆ |
ಸಲ್ಲುವಾ ಶಿವಲಿಂಗದುರುತತ್ವವಂ ತಿಳುಪಿ |
ತಲ್ಲಿಂಗದೊಳಗಡಕನಪ ರೇಣುಕಾಚಾರ್ಯ ಜಗದಾರ್ಯ ಸಲಹೆನ್ನನು ||೧೦॥

ಅನಿಮಿಷಯ್ಯನ ಕಠದಿಮೀಶನಾಣತಿ ವಿಡಿದ-।
ವನಿಯಲ್ಲಿಯುವತರಿಸುತನ ಬಯಸಿದ ಭೂಸು |
ರನ ಮಂಡಿಗೆಯು ಮಾದರಸನುದರದೊಳು ಪುಟ್ಟಿ ಸತ್ಯ ಸಂಗಮನಾಥನ |
ಜನವರಿಯೆ ಕೃಪೆವಡೆದು ಕಲ್ಯಾಣಕ್ಕೈದಿ ತ ।
ಜ್ಜನನಾಥ ಬಿಜ್ಜಳಗೆ ತೋರಿಸಿ ಪವಾಡಗಳ-|
ಸನಘ ವೃಷಭನೆ ಆಗಿ ಯೆಸೆವಂಗೆ ಬಸವಂಗೆ ವಂದಿಸುವೆ ನಾನಂದದಿಂ ||೧೧||

ಕಕ್ಕಯ್ಯ ಶರಣನಾ ಸುಪ್ರಸಾದವು ಬಸವ-।
ನಕ್ಕನೊಡಲಂ ಪೊಕ್ಕು ಬಳೆಯಲಾ ಕೊಂಡೆಯರ |
ಧಿಕ್ಕರಿಪ ನುಡಿಗೇಳಿ ಬಂದ ಬಿಜ್ಜಳನ ವಚನಕ್ಕೆ ಶಿಶು ಪಡಿನುಡಿಯಲು ॥
ದಕ್ಕಾಗಿ ನೃಪನ್ನೈದೆ ಗರ್ಭದಿಂದವತರಿಸಿ ।
ಚಿಕ್ಕ ಬಸವಣ್ಣನೆಂಬಕ್ಕರದ ಪೆಸರಿಂದ ।
ತಕ್ಕ ಶಿವಶರಣಜನಕುಪದೇಶಗೊಟ್ಟೆಸೆದ ಚೆನ್ನಬಸವಂಗೆರಗುವೆ ||೧೨॥

ದಡ್ಡಿಯೂರಿನ ಮಾಸ್ತಿಪೊಳೆಯು ಹಿರಿಯ ಮಠದೊಡೆಯು |
ದೊಡ್ಡತನು ಮೂಶರ್ಣಾಳು ಲಿಂಗಾರ್ಚನಾಪರನು |
ಗೊಡ್ಡ ಮಾತಲ್ಲವನು ಪರತರ ಶಿವಾನುಭವಿ ವಿರತಿ ಸರಸೀರುಹರವಿ ॥
ಎಡ್ಡ ಮೆನಿಸಿದ ತನ್ನ ದೇಶಿಕತ್ವದಿ ಮೆರೆದ ।
ದಡ್ಡನಾದೆನಗೆ ತಾನುಪದೇಶ ಗುರುವಾದ ।
ಗಿಡ್ಡೊಡಲನಹ ಮಹಾಲಿಂಗಮೂರ್ತಿಗೆ ಬಾಗಿ ಬೇಡುವೆನು ದಯುದುದಯುವ ॥೧೩॥

ಆರಾದ ಶಾಸ್ತ್ರಗಳ ಪಾರಗಂಡೆತ್ತಲನಿ |
ವಾರ ಕೀರ್ತಿಯು ಪಡೆದ ಚಾರು ಕವಿತಾಸುಂದ ।
ರೀರಮಣನಾದ ಕಂಗೊಳಿಪ ದಾವಣಗೇರಿ ಶೆಲಗಿಮಠಕಧಿಪನಾದ ||
ಸೂರಿಜನಮೂರ್ಧಮಣಿಯೆನ್ನ ವಿದ್ಯಾಗುರುವು |
ವೀಠ ಮಾಹೇಶ್ವರನು ಚಂದ್ರಶೇಖರನಾಮ |
ಧೀಠನಡಿದಾವರೆಗೆ ಮುಸಕರಣಿ ಹಾನೆರಗಿ ಬೇಡುವೆವನುಗ್ರಹವನು ॥೧೪||

ವಿರತಿವಿತರಣ ಶಾಂತಿ ಸುಖಿಭೂತ ಸದ್ದಯಾ |
ಪರತೆ ಕೊರತೆಯು ತೋರದುರುಲಿಂಗ ನಿಷ್ಠೆಯಿಂ |
ಪರಿ ಗುಣಗಳಿಂ ಮೆರೆವ ಸವದತ್ತಿ ಯೆಕ್ಕುಂಡಿ ಮಠದೊಡೆಯರುಭಯರಿವರು ||
ವರ ಮಹಾಲಿಂಗೇಶ ಸಿದ್ಧರಾಮೇಶರಿವ |
ರುರುದರ್ಶನಕೆ ಪೋದ ಸಮಯದೊಳಗುಭಯರುಂ ।
ಗರಗದಾ ಮಡಿವಾಳ ಶಿವಯೋಗಿವರ್ಯನ ಪುರಾಣಮಂ ರಚಿಸೆಂದರು ||೧೫||

ಅವರಾಜ್ಞೆಯಂತೆ ಜೀವನ್ಮುಕ್ತ ಮಡಿವಾಳ |
ಶಿವಯೋಗಿವರ್ಯನ ಪುರಾಣಮಂ ನೆಗಳುವಡೆ |
ಲವದನಿತು ಮತಿಯಿಲ್ಲದಾನೆತ್ತ ಭವದತ್ತಪುಗದ ತನ್ಮಹಿಮನೆತ್ತ ||
ತವೆ ತಿಳಿದೊಡಾತನೇ ಮತಿಗತಿಗೆ ದಾತನೆಂ |
ದವನಡಿಯ ಭಕ್ತಿಯದು ದೂಡಲಾಂ ತೊಡಗಿದೆನು |
ಸವನಿಸದು ಭಯಮಿನ್ನು ಭಕ್ತಿಜನನಿಯು ಬಲವು ಮುನ್ನಮೆನಗುಂಟಾಗಿರೆ ||೧೬||

ವರ ರೇಣುಕನ ಶಾಖೆ ವೀರಗೋತ್ರವು ಮಹ |
ತ್ತರ ಸೂತ್ರ ಪಡಿವಿಡಿಯೆದೇಕಾಕ್ಷರ ಪ್ರವರ |
ವಿರುವನ್ವಯದೊಳುದಿಸಿ ಬಳೆದ ಪಂಚಾಕ್ಷರನ ಸೂನುವೆನಿಸಿರ್ಪ ತಾನು ||
ಹರನ ಶರಣರ್ಕಳಡಿಯಹೂಳಿಗವ ಮಾಡುವನು |
ಚರನುಮೆನಿಸಿದ ಸದಾಶಿವ ಕವಿಯು ಪ್ರವಿಲಸ |
ಚ್ಚರಿತಯುತ ಮಡಿವಾಳ ಶಿವಯೋಗಿ ಗುರುವರನ ಕೃತಿವೇಳ್ದ ಸುಕೃತಿಯಹನು
||೧೭||

ಈ ಕಬ್ಬದೊಳು ಪ್ರಾಸ ಗಣ ನಿಯಮ ಲಕ್ಷಣಗ |
ಳೇಕಿಲ್ಲವೆನ್ನದಿರಿ ಶುಕ್ಲಪಕ್ಷ ದ್ವಿತೀ |
ಯಾಕಲಾಹೀನನಿಂದಮವಿನ ನೋಳ್ಪಂತೆವೋಲ್ ಪೂರ್ಣೇಂದುವಂ ನೋಡರು ||
ಈ ಕತೆಗೆ ಲಕ್ಷಣಗಳೇನಾನುಮಿಲ್ಲದೊಡು ।
ಮೀ ಕಾವ್ಯವೋದುಗರ ಬುದ್ಧಿಗೆ ಚಮತ್ಕೃತಿಯ ।
ನಾಕಾರ ಪಾಳ್ಗುಮದು ಕಾರಣಂಬುಧರಿಂದ ಸುಶ್ರಾವ್ಯವು ||೧೮||

ಮತಿಯಿಂದ ಸರಸಂಗೆ ಕೆರೆಯ ಪದ್ಮರಸಂಗೆ |
ಪ್ರತಿಭಾವಿಕಾಸಂಗೆ ಕವಿಕಾಳಿದಾಸಂಗೆ |
ಶಿತಿಕಂಠನನುಚರಗೆ ಕವಿವರಗೆ ಹರಿಹರಗೆ ಗುರುಲಿಂಗಚರಚರಣಿಗೆ ॥
ಜಿತಯಮನ ಲೆಂಕಂಗೆ ಕವಿರಾಘವಾಂಕಂಗೆ ।
ಪ್ರಥಿತತರ ಸೋಮರ್ಗೆ ಕವಿಸೋಮ ಭೀಮರ್ಗೆ ।
ರತಿಯೊಡನೆ ಪೊಡಮಟ್ಟು ಮನಗೊಟ್ಟು ಬೇಡುವೆನು ಕವನ ಸಾಹಿತಿಯನೆಲ್ಲಾ ॥೧೯॥

ಮುನ್ನಿನಾ ಕಬ್ಬಿಗರ ರನ್ನಕೈಪಿಡಿಯಾಗಿ |
ಮನ್ನಣೆಗೆ ಪಕ್ಕಾದ ರನ್ನನಂ ಜನ್ನನಂ ।
ಪೊನ್ನನಂ ಸೊಂಪಡರಿದಿಂಪಿಡಿದ ಕವಿತೆಯನುಂ ಪಡೆದ ಪಂಪಕವಿಯಂ ॥
ಇನ್ನುಭಯ ಕವಿತಾತಿದಕ್ಷನ ಷಡಕ್ಷರನ ।
ಪನ್ನತಿಗೆವಡೆದ ಲಕ್ಷ್ಮೀಶ ಕವಿಯಂ ಮತ್ತೆ ।
ಚೆನ್ನೆಸೆದ ಚೆನ್ನಕವಿ ಮಲ್ಲಿಕಾರ್ಜುನ ಬಸವ ಕವಿವರ್ಯರಂ ಪೊಗಳ್ವೆನು ॥೨೦॥

ಹೆರವರೊಳಗಣು ಮಾತ್ರ ಗುಣವಿರಲದಂ ಗಿರಿಗೆ |
ಸರಿಗಾಣುವರು ಸಂತರಧಮರದನೆಣಿಸದಲೆ ।
ಬರಿದೆ ಜರಿಯುವರವರ ಹುಟ್ಟುಗುಣವೆಂತರಿಯೆ ಸುಂದರಿಯ ಸುರತಸುಖವ ॥
ನೆರೆದು ನೆರೆ ತೋರಲಡನರಿವಷನೆ ಷರ್ಷಷರ |
ನುರುರಸಿಕನಲ್ಲದವರಂತೆಪೊಲು ಕಬ್ಬದೊಳ |
ಗಿರುವ ಗುಣಷನೆ ಸರ್ವಭಾಷಜ್ಞರುಪ ಪ್ರಾಜ್ಞರರಿವುದಿದು ಭೂಷಣವಲಾ ॥೨೧॥

ದೋಷವಿರದಿರಲನೆಂತು ನಾವಪ್ಪುಗೈವುದೆನೆ |
ಘೋಷಿಸುವೆ ನಾಂ ಕೇಳಿ ನೀರ್ವೆರೆದ ಪಾಲನತಿ ।
ತೋಷದಿಂದಂಚೆ ಬೇರ್ಪಡಿಸಿ ಪಾಲನೆ ಕುಡಿಗುಮಲ್ಲದದನೊಲ್ಲದಿರದು ॥
ದೋಷಾಧಿಪತಿ ಕಲಂಕಿಯುಮೆಂದು ಜಗದೊಳಗೆ ।
ದೂಷಿತದ ಪೆಸರೆರಡು ಚಂದಿರಂಗಿರ್ದೊಡಂ |
ಭೂಷಿತದ ವಿ.ಕ್ಕವನ ಪೆಸರರಿತು ಸುಖಿಪಂತೆ ಮತ್ಕಾವ್ಯಗುಣವರಿವುದು ॥೨೨॥

ಮೂವಣ್ಣಿನಿನಿರಸವ ಚೆನ್ನ ಕನ್ನಡವಕ್ಕಿ |
ವಿಸೇವಿಸಿ ತಣಿವನಾನುವೋಲ್ ಕೊತ್ತಣಿಗ |
ಆ ವಣ್ಣಿನಿಂಪನೇನರಿದಪವೆ ಜಗದೊಳಗೆ ಭಾವಜ್ಞರಸಿಕರಪ್ಪ ||
ಕೋವಿದರು ಸರಸ ಕವಿತೆಯ ಸೊಬಗನೆಲ್ಲವಂ |
ಭಾವದೊಳಗದನರಿದು ಮನದಣಿದು ತಣಿವಂತೆ |
ತಾವಜ್ಞರಪ್ಪ ಪಾಮರರದಂ ತಿಳಿದು ಮನದಣಿವಂತೆ ತಣಿಗೊಂಬರೇ ||೨೩||

ಪಿರಿಯ ಕಬ್ಬಿಗರನುಂ ಬಲ್ಲಂತೆ ಜರಿ ಜರಿದು |
ಹರಿಸಗೊಳುವರು ದುರುಳರೆಲ್ಲರಿಂತೆಂದೊ ತಾಂ |
ಕಿರಿಯ ಕಬ್ಬಿಗನೆನ್ನನಿಳಿಗೈಯದೆಂತವರು ಬಿಡುವರೆನಲೇಕೆ ಚಿಂತೆ ||
ಸರಸ ನಿಷ್ಪಕ್ಷಪಾತರು ಗುಣಜ್ಞರುಮೆಂದು
ಮೆರೆದ ಕೋವಿದ ಶಿಖಾಮಣಿಗಳಡಿದಾವರೆಯೊ |
ಳಿರದವರ ಪಳಿಗಳೆಲ್ಲವನ್ನಿರಿಸಿ ನಾಸಿರುವೆ ಸಂತಸದಿಂದಲಿ ||೨೪||

ಇಲ್ಲದದನಿನಿಸಾನುಮಾನಿಲ್ಲಿ ಬರೆದಿಲ್ಲ |
ಬಲ್ಲತನವೆಸೆಯಲೆಂದಾಂ ಸೊಲ್ಲಿಸಿಲ್ಲಿಲ್ಲ |
ಮಿಲ್ಲಿ ಬೀಡಿಯುವಶಿವ ರಾಮಲಿಂಗಯ್ಯನವರೊರೆದ ಚರಿತಾಧಾರದಿ ||
ಸೊಲ್ಲಿಸಿದೆನಂತಲ್ಲದೆಳ್ಳನಿತು ಬೇರಿಲ್ಲ |
ಪೆಲ್ಲಿದೆಯನಾಗಿಪ್ಪ ಮಡಿವಾಳ ಶಿವಯೋಗಿ |
ವಲ್ಲಭನು ತಾ ನುಡಿಸಿದಂದದಿಂ ನುಡಿವೆನಂತಲ್ಲದೆನ್ನಳವೆ ತಿಳಿಯೆ ||೨೫||

ಅನವದ್ಯ ವಿದ್ಯೆಗಿಂದಧಿಕಮುಹುದಾ ಕವಿತೆ |
ಜನವರಿಯಲಾ ಕವಿತೆ ಕರುಣಾಳು ಪರಶಿವನ |
ಘನತರಾನುಗ್ರಹವಿ ಬಕ್ಕುಮಿಂತಲ್ಲದೊಡದಿಲ್ಲವೆನಲಿನಗದೆತ್ತ ||
ಇನಿತಾದೊಡಂ ಶಿವನಗಿಂದಧಿಕರಹ ಶರಣ |
ಜನರಂಘ್ರಿಯುಗಳಗದ ಬಲದಿಂದ ದೊರೆದ ಪಾ |
ವನ ಪುಷ್ಪಸಾವದಿಂ ಬಿಸಿದೆ ನಾಂ ಸೇವ್ಯಮಿದು ಭವ್ಯತರಮತಿಯುತರಿಗೆ ||೨೬||

ತಂಬೆಲರ ಸೊಂಪು ಬೆಳ್ದಿಂಗಳಾ ತಂಪಲರ |
ಮುಂಬರಿವ ಕಂಪು ರನ್ನದ ಲಂಪು ಜೇಂಗೊಡದ |
ತುಂಬಿಂಪು ಕಮಲಗಂಧಿಯ ಮೈಯ್ಮೆಕಂಪು ತುಂಬಿಗಳಿಂಚರಂ ||
ಎಂಬಿವೆಲ್ಲವು ಮನಂಬುಗುವಂತೆ ಸದ್ವಾದಾ ।
ಕುಂಬಿನಿಯನುದ್ಧರಿಸ ಬಂದ ಶಂಭುವಿನ ಪರಿ ।
ಜಂಬಡೆದ ಮಡಿವಾಳಯತಿವರನ ಶಿವಯೋಗಿಕೃತಿ ಮನಂಬೊಕ್ಕು ಸಂತಸಗೈವುವು ||೨೭||

ಕೃತಿಗೊಡೆಯ ಶಿವಯೋಗಿಕೃತಿಯ ಪೆಸರವನ ಪೆಸ ।
ರತಿಭಕ್ತಿಯೊಡವೆರೆದ ಶಿವಶರಣರಾಲಿಪರು ।
ಮತಿಯಿಂದ ತಿಳಿವಡೀ ಕೃತಿ ಸುಕೃತಿಯಹುದೆಂದೊಡೆಂತಿದರ ಘನಮಹಿಮೆಯು ||
ಕ್ಷಿತಿಯೊಳಿದನಾರು ಗಡ ಬರೆವರೋರೆವರ್ಕೇಳ್ವ |
ರತಿ ಮುದದೊಳರ್ಚಿಸುವರವರೆಲ್ಲರಿಗೆ ತಿಳಿಯೆ ।
ಮತಿಯುತರು ಸತಿ ಸುತರು ಸಿರಿಯು ಮುಂತಾದ ಸುಖಭೋಗ ಸಾಧನಗಳಹವು ||೨೮||

ಪೀಠಿಕಾ ಸಂಧಿ ಪದಂಗಳು ೨೮ ಶುಭಂ—
ಶ್ರೀ ಶ್ರೀ ಶ್ರೀ

## ೧ನೆಯ ಸಂಧಿ

ಸೂಚನೆ:— ವರಮಲ್ಲಸರ್ಜನೂರಾದ ಕಿತ್ತೂರೊಳಗೆ ।
ಪರವಸ್ತು ಮಡಿವಾಳಯೋಗಿರೂಪಂ ಗೊಂಡು ।
ಧರಣಿ ಭಾಗವನೆಲ್ಲನುದ್ಧರಿಪ ಕತದಿಂದಲವತರಿಸಿದುದ ಪೇಳ್ವೆನು ॥

ನಾರಿಯುಂ ತೊಡೆದ ಮದನಾರಿಯುಂ ಶೇಷನಂ ।
ನಾರಿಯುಂ ಮಾಡಿದ ಪುರಾರಿಯುಂ ಧೃತಕಮಲ ।
ಚಾರಿಯುಂ ವ್ಯಪಹತ ಸುರಾರಿಯುಂ ಶಿಖರಿಸಂಚಾರಿಯುಂ ಭವತಾರಿಯುಂ ॥
ಸಾರ ನಂದೀಶನಂ ಕೀನಾಶನಾಶನಂ ।
ಸೂರಪ್ರಕಾಶನಂ ಕಾಶನೀಕಾಶನಂ ।
ಭೂರಿ ಭೂತೇಶನಂ ವಿಷ್ಣುಪದಕೇಶನಂ ನುತಿಸುವೆನು ಗಿರಿಜೇಶನಂ ॥೧॥

ಈ ಪುರಾಣಕ್ಕಾದಿ ಯಾವುದೆನೆ ಶ್ರೀದೇವಿ |
ತಾ ಪುಟ್ಟಿದೆಡೆ ಚಂದ್ರನುದ್ಭವದ ಬೀಡಮರ್ದ |
ಕಾಪಿನೆಡೆ ನಿರ್ಜರರ ವೃಕ್ಷಗಳಗೊತ್ತಮಿತ ಜಲಚರಗಳಾಡುಂಬೊಲಂ ||
ಆಪಗಾತತಿಯ ಬಾಳುವೆಯಮನೆ ರತ್ನ ಮು |
ಕ್ತಾಫಲಂಗಳ ನಾಡೆ ಬೆಳೆನಾಡು ಶಿಖರಿಗಳ |
ನಾ ಪೊಟ್ಟೆಯೊಳಗಿಟ್ಟು ತಾಯ್ನಾಡು ಪವಳಗಳನೆಲೆವೀಡುವೆಸಗುವಬ್ಧಿ ||೨||

ಗಿರಿಯಂತೆ ಬರುವ ಪೆರ್ದೆರೆಯಿಂದ ನೊರೆಯಿಂದ |
ತಿರು ತಿರುಗುತೇಳುವಾವರ್ತದಿಂ ಗರ್ತದಿಂ |
ಪರಿಪರಿಯ ಘನಮಕರನಿಕರದಿಂ ಸುಕರದಿಂ ನೀರ್ಪಾವುಗಳ ಪ್ರಕರದಿಂ ||
ಮಿರುಗುವೆಳೆ ಮುತ್ತುಗಳಲಂಪಿನಿಂ ಗುಂಪಿನಿಂ |
ಪಿರಿದು ಬೆಳೆದಿಹ ವಿದ್ರುಮಂಗಳಿಂ ಕಂಗಳಿಂ |
ಗಿರದೆ ರಂಜಿಸುವ ರನ್ನಂಗಳಿಂ ಪಿಂಗದೆ ಕಡಂಗಿ ಕಂಗೊಳಿಸಿತಬ್ಧಿ ||೩||

ನಿರುತ ಚಣಚಣದಲ್ಲಿ ಮೈದೋರುವವನತಿಯು |
ದಿರದೆ ಸಂತತವೊದಗುವುತ್ತುಂಗಭಂಗಮುಂ |
ತುರುಗಿ ಮೈತುಂಬೇಳ್ವ ಗುರುಳಿಗಳ ಹೊರಳಿಯುಂ ಬಾಯೊಳಗೆ ಬೆಳ್ನೊರೆಯದು ||
ಬರುವ ನದಿಗಳ ಬಾಯ ಟೊಣೆದುದಕಮಂ ಕೊಂಡು |
ಭರದಿಂದೆ ಪಾತಾಳಮೂಲದೊಳಗಿರಿಸಿತಾ- |
ನರರೆ ಆದ ನಾಗುಮೀಂಟದ ತೆರದಿ ಗೈದೊಡಲ ಕಿಚ್ಚಿನಬ್ಧಿಗೆ ತಕ್ಕುದು ||೪||

ಆ ಜಲದಿ ಮಧ್ಯದೊಳು ರಾಜಿಸುವ ಮಣಿಗಣದ |
ರಾಜಿಯಿಂ ವಿಹರಿಸುವ ಸುರರಿಂದ ವೀಣೆಯನು |
ಬಾಜಿಸುವ ಪಿನ್ನರಾಂಗನೆಯರಿಂದಿನೆಯರಿಂ ಚೆಲೆದ ಯಕ್ಷಾಂಗನೆಯರಿಂ ||
ಮಾಜವಲೆ ಬಲವಂದರ ವಿರಾಜರಿಂ ಮೇಣು |
ಸೋಜಿಗದ ಸಿದ್ಧರಸ ವಾಪಿಗಳಿನೇಗಳುಂ |
ಮೂಜಗದ ಕಂಗಳಿಗೆ ಮಂಗಲವ ಸಂಗಳಿಸಿ ಕಂಗೊಳಿಸಿತಾ ಮೇರುವು ||೫||

ಆ ಮೇರುವಿನ ದಕ್ಷಿಣಾಶೆಯೊಳು ನದಿಗಳಿಂ ।
ದಾ ಮಹಾಸುಕ್ಷೇತ್ರ ತೀರ್ಥಂಗಳಿಂ ಬಹುಲ ।
ರಾಮಣೀಯಕದ ಪೂಬನಗಳಿಂ ವನಗಳಿಂ ವಿಲಸದುಪವನಗಳಿಂದ ॥
ಶ್ಯಾಮ ಶಾದ್ವಲಗಳಿಂ ಪೊಲಗಳಿಂ ಶ್ರೀಫಲಗ |
ಳಾ ಮಂಜುಪುಂಜದಿಂ ಗಿರಿಗಳಿಂ ದರಿಗಳಿಂ |
ವ್ಯೋಮಚುಂಬಿತ ನಾರಿಕೇಳಗಳ ಮೇಳದಿಂ ಭಾರತವು ರಾರಾಜಿಕುಂ ॥೬॥

ಎಲ್ಲ ಕೈಗಾರಿಕೆಯ ಬಲ್ಲ ಬಹುಜನಗಳಿಂ ।
ದೆಲ್ಲ ಜಾತಿಯರಿಂದಮೆಲ್ಲ ಧಾತುಗಳಿಂದ ।
ಮೆಲ್ಲ ಖಗಮೃಗಜಾತಿರಾಜಿಯಿಂ ರಾಜಿಸುವ ಭೂಜಾತನಿವಹದಿಂದ ॥
ಎಲ್ಲ ತೆರದಿಂ ಬೆಳೆವ ಕಾಳುಗಳ ಮೇಳದಿಂ |
ದೆಲ್ಲ ಫಲಮಂಜರೀ ವಿವಿಧಸುಮಪುಂಜದಿಂ ।
ದೆಲ್ಲೆಡೆಯೊಳಿರದೆ ಬೆಳೆದೆಲ್ಲಮೋಷಧಿಗಳಿಂ ಭಾರತವು ಕಂಗೊಳಿಪುದು ||೭||

ಈ ಭಾರತದ ಪಾರತಂತ್ರ್ಯಮಂ ಪರಿಹರಿಸ |
ಲಾ ಭೋಸ ನೆಹರು ಸುಮಹಾತ್ಮಗಾಂಧಿಯರು ಮೊದ ।
ಲಾಭಾಸಮಾನ ಕೀರ್ತಿಯ ಮೂರ್ತಿಗಳು ಪ್ರಾಣಧನದಾಸೆಯುಳಿದೆಲ್ಲರು ॥
ಭೂಭಕ್ತರೆನಿಸಿ ತದ್ಭಾರತಾಂಬೆಗೆ ಬಂದ ।
ಕ್ಷೋಭಮಂ ಪರಿಹರಿಸಿ ತಲ್ಲಾಭದೊಡಗೂಡಿ ।
ಯೀ ಭೂಮಿಯೊಳಗೀಗಳಿರುತಿರ್ಪರೆಂದೊಡೀ ಭಾರತದ ಪೆಂಪಮೆಂತೊ ॥೮॥

ಮೌನಿ ಸುಜ್ಞಾನಿ ವಿಜ್ಞಾನಿಯವಧಾನಿ ಬಹು |
ದಾನಿ ಧನಿ ಸೇನಾನಿ ಮುಂತಾದ ಜನರಿಂದ ।
ಕ್ಷೋಣಿಪರು ಮಂತ್ರಿಗಳು ದೇಶಮುಖರುಂ ತೊಡಗಿ ಸಾಮಂತರಾಯರಿವರು ॥
ಮೌನಿಗಳು ಸಾತ್ವಿಕರು ತಾತ್ವಿಕರು ಭಕ್ತಿಪ್ರ ।
ಧಾನರಹ ಸದ್ಭಕ್ತಜನರು ಶಿವಶರಣ ಸಂ ।
ತಾನವದು ದೀನಜನಪಾಲಕರು ಮುಂತಾದ ಜನರಿಹರು ಭಾರತದೊಳು ॥೯॥

ಭಾರತದ ತೆಂಕಲೊಳು ಬಿಂಕದಿಂ ಬೆಳೆದಿಪ್ಪ ।
ಸಾರೇಕ್ಷುಗಳಿಗೆ ನೀರ್ಗುಡುವ ಕಾಸಾರಗಳ ।
ವಾರದಿಂ ಪಣ್ಣಿಡಿದ ಬಾಳೆದೋಟಂಗಳಿಂ ಪೊಸ ಕೌಂಗು ತೆಂಗಿನಿಂದ ॥
ಮೇರೆಗಾಣದೆ ಪರಿವ ತೊರೆಗಳಿಂ ಕೆರೆಗಳಿಂ ।
ಮೀರಿ ಪೂತಿರುವ ಗಿಡಬಳ್ಳಿಯಾರವೆಗಳಿಂ ।
ತೋರಪಣ್ದುಂಬಿ ಶೋಭಿಸುವ ಮಾಮರಗಳಿಂ ಕರ್ನಾಟದೇಶವೆಸಗುಂ ॥೧೦॥

ಕನ್ನಡಾಂಬಾಮಣಿಯು ರನ್ನಕೈಪಿಡಿಯಿದುವೆ ।
ಮುನ್ನಿನಾರ್ಯರ ಗಣ್ಯಪುಣ್ಯ ಭೂತಲವಿದುವೆ ।
ಪನ್ನತಿಕೆಯಿಂದಾಳಿದವನಿಪರ ಭೋಗದಿಳೆ ತಾ ಪರತಪದ ಸೀಮೆ ॥
ತನ್ನ ಪತಿಯೇ ದೈವವೆಂದರಿದ ಸುಗುಣ ಸಂ ।
ಪನ್ನೆಯರ ಕನ್ನೆಯರ ಪಡೆದವನಿತಲವಿದುವೆ ।
ಇನ್ನುಳಿದ ಮೇಲಾದ ಪೂಜ್ಯರುದಿಸಿದ ಭೂಮಿಯೆನಿಸುವುದು ಕರ್ನಾಟವು ॥೧೧॥

ಕಾವೇರಿ ತೊಡಗಿ ಗೋದಾವರಿಯ ಪರ್ಯಂತ ।
ಮಾವಾಸವೆನಿತನಿತು ಕರ್ನಾಟದೇಶವೆಂ ।
ದಾವಗಂ ಪೇಳ್ವರಿತಿಹಾಸವನು ಬಲ್ಲಜನರಿಂತಿರ್ಪ ಕರ್ನಾಟವ ॥
ಭಾವಿಸಲ್ಕಿದಕಾವದೇಸವೆಣೆ ಬಪ್ಪುದಯ್ ।
ನಾವೇಳ್ವೆನರಿತಂತೆ ಪೊಲಿದರ ಸಂಪದವ ।
ಭೂವಧುವು ಪಣೆಗಿಟ್ಟ ಬಾವನ್ನ ಬಟ್ಟೆನೆಲು ಶೋಭಿಪುದು ಕರ್ನಾಟವು ॥೧೨॥

ಜಡಿಯೆಂಬರಾ ಮಳೆಗೆ ಪಳಿಯೆಂಬರಂಬರಕೆ ।
ಕಡಿಯೆಂಬರಂಗನೆಯರೊಡಲತ್ರಿವಳಿಗೆ ಕರಂ ।
ಮೊಡೆಯೆನ್ನುವರು ಸಸ್ಯಮಂಜರಿಗೆ ಬಿಡದೆ ತಡಿಯೆಂಬುವರು ನದಿಯ ತಟಕೆ ॥
ಪಿಡಿಯೆಂದು ಬಲ್ಲವರು ಪೆಣ್ಣಾನೆಗೊರೆವರಯ್ ।
ಮುಡಿಯೆಂಬರಾಲವಾಲಕೆ ಮತ್ತಮೇಳಿಯೆಂದು ।
ನುಡಿವರಾತಂತುವಿಂಗಿಂತಲ್ಲದಿಲ್ಲವಾ ಕರ್ನಾಟ ದೇಶದೊಳಗೆ ॥೧೩॥

ಭಾಸಿಪೀ ಕರ್ನಾಟ ಮಧ್ಯದೊಳು ಸಿರಿಯಿಂದ ।
ಲಾ ಸದಾಶಿವಭಕ್ತಿ ಸತ್ಕ್ರಿಯಾರ್ಚನೆಗಳ ವಿ ।
ಕಾಸದಿಂ ಸೂರಿ ಕವಿಸಮುದಯ ವಿಲಾಸದಿಂ ವಾಗ್ಮಿಗಳ ಸಹವಾಸದಿಂ ॥
ಸೌಸವಕಡರ್ಪಾದ ತಾವರೆಗಳಿಡಿಕಿರಿದ ।
ಕಾಸಾರವಾರದಿಂ ಪಾಳಿವಿಡಿದಾಮ್ರಗಳ ।
ಸಾಸಿರಂಬೆತ್ತು ತಾನೆಸೆದತ್ತು ಕಿತ್ತೂರಸಾಮುದ್ರುತ್ತಮ ಪತ್ತನಂ ॥೧೪॥

ಕಿತ್ತೂರಪುರಿ ತನಗೆ ಮತ್ತೊಂದು ಸರಿಮಿಗಿಲು ।
ಪತ್ತನವದಿಲ್ಲೆಂಬ ಬಿತ್ತರದ ಪೊಸ ಜಸಂ ।
ಬಿತ್ತೆಸೆವುದದಕೊಡೆಯನಹ ಮಲ್ಲಸರ್ಜನಾಮಕ ದೇಶಮುಖನಿರ್ಪನು ॥
ಮತ್ತವಗೆ ಚೆನ್ನಮ್ಮ ರುದ್ರಮ್ಮರೆಂಬುವರು ।
ಮತ್ತ ಕಾಶಿನಿಯರೀರ್ವೆಂಡಿರಿವರೊಡಗೂಡಿ ।
ಚಿತ್ತಜನವೋಲ್ ಬಾಪುಸಾಹೇಬನೆಂಬ ಸುತನಿರುತಿರಲು ಕರವೆಸೆದನು ॥೧೫॥

ಅವರೀರ್ವರೊಳು ಚೆನ್ನೆ ಚೆನ್ನಮ್ಮನಿಗೆ ತನೂ ।
ಭವನಿಲ್ಲದಿರಲವಳು ಹದಿಬದಿಯ ಧರ್ಮದಿಂ ।
ಶಿವಭಕ್ತಿಯೊಡವೆರೆದು ವೀರಸತಿಯೆನಿಸಿ ಸುಖಮಿರಲಿತ್ತ ರುದ್ರಮ್ಮನು ॥
ಶಿವಲಿಂಗಪೂಜಕನ ವರಮಲ್ಲಸರ್ಜನೆಂ ।
ಬುವನ ಧವನವನಂಘ್ರಿ ಭಕ್ತಿಯುತೆಯೆನಿಸಿ ಚಿ ।
ಕ್ಕವನ ತಕ್ಕವನ ಸುತ ಬಾಪುಸಾಹೇಬನೊಡಗೊಂಡು ಸುಖಮಿರ್ದಳವಳು ॥೧೬॥

ರುದ್ರಮ್ಮಜನಯಿತ್ರಿಯಾತ್ಮಜಗೆ ಶಿವಲಿಂಗ ।
ರುದ್ರಸರ್ಜನುಮೆಂದು ಪೆಸರೊಂದು ಬೇರಿಹುದು ।
ಭದ್ರಮುಯ ಬಾಪುಸಾಹೇಬನೆಂಬುದಿದೊಂದು ಪೆಸರೆರಡುಮಿರ್ಪವವಗೆ ॥
ಭದ್ರಮುಖನಪ್ಪಾತ್ಮಜಾತಂಗೆ ಸರ್ವತೋ ।
ಭದ್ರದಾಯಕ ವಿದ್ಯೆಗಲಿಸಲಿಚ್ಛಿಸಿ ವೀರ ।
ಭದ್ರಸಂತ ಸಮ ವಿಕ್ರಮನಾಗಿ ದೇಸಾಯಿ ಭೋಗ ಭಾಗ್ಯದೊಳಿರ್ದನು ॥೧೭॥

ಆ ಮಲ್ಲಸರ್ಜನೊಂದಿಗೆ ಶ್ರೀ ಮಡಿವಾಳ ।
ನಾಮದ ವಿರೂಪಾಕ್ಷ ಗುರಸಿದ್ಧ ರಾಹ್ವಯದ ।
ಸ್ವಾಮಿಗಳು ಮರ್ತೂಜಿವಲ್ಲಿಯೆಂಬುವ ಫಕೀರನು ನಾಲ್ವರೈತಂದರು ॥
ಆ ಮಹಿತ ಮೂರ್ತಿಗಳ ನಾಲ್ವರಾಗಮನವದು |
ಶ್ರೀ ಮಲ್ಲಸರ್ಜನಕೊಡಂಕೆಗುರೆ ಮುಟ್ಟುತಿರೆ ।
ಪ್ರೇಮದಿಂದಿದಿರ್ಗೊಂಡು ಭಯಭಕ್ತಿಯೊಡಗೊಂಡು ನಡೆಗೊಂಡು
ಕರೆತಂದನು ॥೧೮॥

ಬಂದ ಮಹಿಮರ ಕಾಯದೊಂದಂದಮಂ ಮೇಣು ।
ಪೊಂದಿರ್ಪ ಸದ್ಬ್ರಹ್ಮಚರ್ಯದನುವಂ ಕಾಣು ।
ತಿಂದುಧರಭಕ್ತನಹ ಮಲ್ಲಸರ್ಜನು ಚಿದಾನಂದಮಯ ಮೂರ್ತಿಗಳನು ||
ತಂದು ಸಿಂಹಾಸನದಿ ಕುಳ್ಳಿರಿಸಿ ಮನವಿರಿಸಿ ।
ವಂದಿಸುತೆ ಕುಶಲಾನುಯೋಗಮಂ ಮಾಡಲವ ।
ರೆಂದರಾ ಗುರುಗಳಾವೃತ್ತರದ ದೇಶದವರೆಂದೂರ್ಪೆಸರೊರೆಯದೇ ॥೧೯॥

ಎಂದುದರಿದಾ ಮಲ್ಲಸರ್ಜನರಿದರಿದೆಂದು ।
ತುಂಡದೊಳು ಹೋರಹೊಮ್ಮಿ ಥಳಥಳಿಪ ಶಿವಕಳೆಯು ।
ಸುಂದರಾಂಗದೊಳಿಟ್ಟ ಕಾಷಾಯ ಶಾಟಿಗಳ ಕುಂದದಿರ್ಪಂದವನ್ನು ॥
ಪೊಂದಿದಕ್ಷಯದ ಸದ್ವೈರಾಗ್ಯ ಭಾಗ್ಯಮಂ ।
ಸಂದ ನಿರಹಂಕಾರ ಘಟಿತ ಸುಜ್ಞಾನಮಂ ।
ಬಿಂದುಮಾತ್ರಾಮರ್ಪವಂಟದುರು ಶಾಂತಿಯುಂ ಕಂಡವರನುಪಚರಿಸಿದಂ ॥೨೦॥

ಪೂಜ್ಯರನಿಬರ್ಗಿವರ್ಗೆ ಮಲ್ಲಸರ್ಜನು ತಾನು ।
ಮಾಜ್ಯದಧಿಶರ್ಕರಾಕ್ಷೀರ ಸೂಪಾದಿ ವರ ।
ಭೋಜ್ಯವಸ್ತುವನಿತ್ತು ಸಂತತಂ ತಣಿಸಿಯುಪಚರಿಸಿದನು ಪಲದಿವಸವು ||
ಭಾಜ್ಯವಾಗದ ಸದಾ ಯೋಜ್ಯವಹ ಯೋಗಸಾ ।
ಮ್ರಾಜ್ಯಸುಖಭೋಗ ಫಲಭೂತ ಲಿಂಗಾಂಗ ಸಾ ।
ಯುಜ್ಯದನುಭವವೊಡನೆ ಸಂತತಂ ಸುಖಿಪರು ಮೂವರಾ ಸದ್ಗುರುಗಳು ॥೨೧॥

ಓರ್ವೆ ಹುಬ್ಬಳ್ಳಿಪುರ ಸದ್ಭಕ್ತಜನರೆಲ್ಲ ।
ಪೇರ್ಮೆಯಿಂ ಬೆತ್ತು ಕಿತ್ತೂರವರ ಪುರದೊಳಗೆ ।
ಮಾರ್ಮಿಕರು ಸಾತ್ವಿಕರು ತಾತ್ವಿಕರು ಮಾಯಿಕರು ವಿರತಕುಲಮಣಿತಿಲಕರು ।।
ನೂರ್ಮಾತದೇಂ ಮಲ್ಲಸರ್ಜಭೂಪನ ಮಹಾ ।
ಧಾರ್ಮಿಕನ ಸದ್ಭಕ್ತಿರತರು ಲಿಂಗಾರ್ಚನಾಂ ।
ತರ್ಮುಖರು ಶಿವಯೋಗಸಮ್ಮುಖರು ಸ್ವಾಮಿಗಳು ಮೂವರಿರುತಿರ್ಪುದರಿದು ।।೨೨।।

ಬಂದವರು ಮೂವರಡಿಗಂಡು ವಂದಿಸಿ ಮಹಾ ।
ನಂದದಿಂ ಪ್ರಸ್ತುತವನಾಡುತ್ತಮಾ ಭಕ್ತ ।
ರಿಂದುಧರರೂಪ ಗುರುಮಡಿವಾಳ ಸ್ವಾಮಿಗಳ ಮುಂದೆ ನಿಂದಿಂತೆಂದರು ।।
ಬಂದಿಹೆವು ನಿಮ್ಮಡಿಯ ಕಾಣಲ್ಕೆ ಗುರುವೆ ನೀ ।
ನಿಂದು ನಮ್ಮಿಷ್ಟವನು ಪೂರೈಸು ಸಚ್ಚಿದಾ ।
ನಂದನಂ ವಿರತಿಘನಕಂದನಂ ವಿರತನಂ ದಯಪಾಲಿಸಯ್ ಮಹಿಮನೆ ।।೨೩।।

ಎನೆ ಕೇಳಿ ಮಡಿವಾಳಶಿವಯೋಗಿ ಭಕ್ತರಾ ।
ಮನದೆಣಿಕೆ ಕೈಸಾರುವಂದದಿಂ ಬೆಸಸಿದನು ।
ಘನಭಕ್ತ ಮಲ್ಲಸರ್ಜರುಮೆಮ್ಮೊಳತಿ ಭಕ್ತಿಯನೆ ಇಟ್ಟ ಕತದಿಂದಲಿ ।।
ಸನುಮತಿಯನನುನಯದೊಳವರಿತ್ತೊಡಾ ಬಳಿಕ- ।
ಮನುಕೂಲವಾಗುವಂತೆಸಗುವೆನು ನಿವಗಾನು ।
ನೆನೆಯದೇನೊಂದನುಂ ಮಲ್ಲಸರ್ಜನ ದೇಶಮುಖನನ್ನು ಕೇಳ್ವೋಗಿರಿ ।।೨೪।।

ಎಂದ ಮಾತಿಗೆ ಮನಂದಂದು ಬಂದಿಹ ಭಕ್ತ ।
ವೃಂದಮದು ಗುರುಭಕ್ತ ಮಲ್ಲಸರ್ಜರ ಬಳಿಗೆ ।
ಬಂದು ನಿಲಲವರನವನಂದು ಕುಳ್ಳಿರಿಸಿ ನೀವಾರು ಮೇಣೇವಂದಿರಿ ।।
ಎಂದೆನಲು ಗುರುಭಕ್ತ ಮಲ್ಲಸರ್ಜರೆ ಎಮ್ಮ ।
ದೊಂದೂರು ಹುಬ್ಬಳ್ಳಿ ಬಂದಿಹೆವು ನಿಮ್ಮ ಬಳಿ ।
ಗೊಂದಿಪುದು ಹದನವೇನೆನೆ ನಿಮ್ಮ ಭಕ್ತಿಯೊಳು ಸಂದಿಹರು ವಿರತರೆಂದು ।।೨೫।।

ಕೇಳಿ ಬಂದಿಹೆವವರೊಳೋರ್ವ ಚರಮೂರ್ತಿಯಂ |
ಬಾಳ ಮಾತೇನೆಮ್ಮೆಯೂರಮಠದೊಡೆತನಕೆ |
ಕೇಳ ಬಂದಿಹೆವಾವು ಕಳುಹುವವರಂ ಜೀಯ ಬೀಳುಗಳೆಬೇಡೆಮ್ಮನು ||
ಪೇಳಿದುದ ಗೇಳುತಂ ಮಲ್ಲನೃಪನವರ್ಗೆ ತಾ |
ನೇಳಿರಯ್ ತಳುವೇತಕಾ ಮೂರ್ತಿಗಳ ಬದಿಗೆ |
ಕೇಳಿಯಿಂ ಪೋಗುವಾ ನಡೆಯಿರೆನುತವರೊಡನೆ ಬಿಡದಲ್ಲಿಗೈತಂದನು ||೨೬||

ಶಿವಯೋಗನಿರತರಹ ವಿರತರ್ಗೆ ಬಿಡವೆರಗಿ ।
ಶಿವಭಕ್ತಮಣಿ ಮಲ್ಲಸರ್ಜನುಂ ಮಡಿವಾಳ |
ಶಿವಯೋಗಿಗಳೆ ಕೇಳಿ ಹುಬ್ಬಳ್ಳಿಮಠದಾಧಿಪತ್ಯಕ್ಕೆ ಚರಮೂರ್ತಿಯಂ ॥
ಇವರು ಕರೆದುಯ್ಯಲೈದಿಹರು ವರಗುರುಸಿದ್ಧ |
ಶಿವಯೋಗಿಯಂ ಕಳುಪವೇಳ್ಕೆನಲ್ ಮಡಿವಾಳ |
ಶಿವಯೋಗಿ ಕರೆಯಬಂದವರೊಡನೆ ಗುರುಸಿದ್ಧಯೋಗಿಯಂ ಕಳುಹಿಸಿದನು ||೨೭||

ಪಲದಿನದೊಳುಪ್ಪಿನ ಬೆಟಗೇರಿಯೂರವರು
ನೆಲದೆರೆಯರಹ ಮಲ್ಲಸರ್ಜರೆಡೆಗೈತಂದು |
ಲಲಿತತರದರಮನೆಯೊಳಿರುವೋರ್ವ ವಿರತನಂ ವರವಿರತಿನಿರತನನ್ನು ॥
ಒಲುಮೆಯಿಂದಿತ್ತೊಡೆಮ್ಮೂರ್ಗೆ ಬಲುಶೋಭೆ ನಿ ।
ಷ್ಫಲಗೈಯಬೇಡೆನಲು ದೇಶಮುಖನವಗೇಳಿ |
ಮಲರಹಿತ ಸತ್ಕ್ರಿಯಾಪರ ವಿರೂಪಾಕ್ಷಚರಮೂರ್ತಿಯಂ ಕುಡಲುಯ್ದರು ||೨೮||

ಮತ್ತಮಾ ಮತ್ತೂರಜನೆಂಬವಲ್ಲಿಯಸಾಗ |
ಕಿತ್ತೂರೊಳಿಹ ಮುಸಲ್ಮಾನರೆಲ್ಲರು ಕೂಡಿ ।
ಚಿತ್ತಜಾರಿಯಭಕ್ತ ದೇಶಮುಖರಾಣತಿಯಪೆತ್ತವರು ಕರೆದುಯ್ದರು ॥
ಇತ್ತ ಮಡಿವಳಯತಿಯನೆತ್ತ ಕಳುಹಿಸದೆ ತಾ |
ನುತ್ತಮದ ಮಠಗಟ್ಟಿಕೊಟ್ಟಲ್ಲಿಯೇ ಮುದಂ ।
ಬೆತ್ತು ಶಿವಭಕ್ತಮಣಿ ಮಲ್ಲಸರ್ಜನು ದೇಶಮುಖನವನಿರಿಸಿಕೊಂಡ ||೨೯||

ನಿತ್ಯನಿತ್ಯದೊಳವರ್ಗೆ ಭೃತ್ಯಭಾವಂದೋರಿ |
ಸ್ತುತ್ಯವಹ ಸಂಭ್ರಮದಿನರಮನೆಗೆ ಕರೆದುಯ್ದು ।
ವ್ಯತ್ಯಯಂ ದೋರದಲೆ ಸುಪ್ರಸಾದಂಗೊಳಿಸಿ ಮಗುಳ್ದು ಬಿಜಯಂಗೈಸುವಂ ||
ಸತ್ಯ ಶಮ ದಮ ಶಾಂತಿ ವಿರತಿ ಸತ್ಕ್ರಿಯೆಯು ಪಶು-।
ಪತ್ಯರ್ಜನೆಯು ಮೊದಲುಗೊಂಡು ವರಗುಣಗಣಂ ।
ಬೆತ್ತಿತ್ತು ಮಡಿವಾಳ ಶಿವಯೋಗಿಯೆಸೆದನಯ್ ಲಿಂಗಾಂಗತತ್ವವಿದನು ॥೩೦॥

ಮುಂಜಾವದೊಳಗೇಳ್ದು ಮೊಗದೊಳೆದು ಸೊಗದಳೆದು ।
ನಂಜುಂಡನಂಗವಹ ಲಿಂಗಕ್ಕೆ ನೀರೆರೆದು ।
ಮಂಜು ಭಸ್ಮವ ತಳೆದು ತಾನಲಸನತಿಗಳೆದು ಲಿಂಗವನು ನುತಿಪನಿಂತು ॥
ಮಂಜುಳದ ಕಂಗಳಂಗಳದಿ ನೆರೆಮೆರೆವನೇ ।
ಪಿಂಜರಿಯದೆನಗೆ ನೀ ಮೈದೋರು ದಯೆ ಬೀರು ।
ಮಂಜ ಹೃತ್ಕಂಜಕಿಂಜಲ್ಕದೊಳು ರಂಜಿತನೆ ಭೂರಿ ತೇಜಃಪುಂಜನೆ ॥೩೧॥

ಅಂಗೈಯ ಪಂಜರದೊಳಲೆದು ಕುಣಿವರಗಿಳಿಯೆ ।
ಸಂಗನುರುಶರಣರ್ಕಳೊಡನುಂಬ ಚಿತ್ಕಳೆಯೆ ।
ಪಿಂಗದಲೆ ಸಜ್ಜೀವನೆಯತ್ತಣಿಂ ಲಿಂಗಯ್ಯ ಏಳಯ್ಯ ನೀನೆಂಮ್ಮಯ್ಯನೆ ॥
ಕಂಗಳೆರಳಂಗಳೊಳು ಕಂಗೊಳಿಪ ಲಿಂಗಯ್ಯ |
ಜಂಗಮವೆ ಮುಖವಾದ ಮಂಗಲದ ಲಿಂಗಯ್ಯ ।
ಸಿಂಗರದ ಶೃಂಗಾಟಕದ ನಡುವೆ ಲಿಂಗಯ್ಯ ಸಿಂಗರಿಪೆ ದಮ್ಮಯ್ಯನೆ ॥೩೨॥

ಎನ್ನ ಕಂಗಳ ಗುರಿಯೆ ಎನ್ನಯಂಗದ ಸಿರಿಯೆ ।
ಎನ್ನ ಸ್ನೇಹಿನ ಬೆಳಸು ನೀನೆನ್ನ ಹೊಂಗಳಸು ।
ಎನ್ನರಿವಿನೊಬ್ಬುಳಿಯೆ ಪೊಂಬಾಳೆಯೆಳೆಸುಳಿಯೆ ಏಳಯ್ಯ ಲಿಂಗಯ್ಯನೆ ||
ಎನ್ನೆದೆಯ ಮಣಿದೀಪ ಸರ್ವಾಂಗದ ಕಲಾಪ |
ಎನ್ನ ಚಿಂತಾಮಣಿಯೆ ಎನ್ನ ಸೊಗಸಂದಣಿಯೆ ।
ಎನ್ನ ಕರಕರದೀಪ ಭುವನಕೆಲ್ಲಕೆ ಭೂಪ ಏಳಯ್ಯ ಲಿಂಗಯ್ಯನೆ ॥೩೩॥

ಇಂತು ತನ್ನಿಷ್ಟಶಿವಲಿಂಗದುನ್ನತಿಯ ನೋ ।
ರಂತೆ ಬಣ್ಣಿಸಿ ಬಳಿಕ ಮಡಿವಾಳ ಶಿವಯೋಗಿ ।
ಮುಂಜೆ ಪ್ರಾತಃ ಶೌಚ ವಿಧಿಯನೆಲ್ಲವಗೈದು ಪೂದೋಟಮಂ ಪುಗುತಲಿ ॥
ಸಂತಸದಿ ಪತ್ರ ಪುಷ್ಪಂಗಳಂ ನೆರೆ ತಿರಿದು ।
ಸಂತರೆರೆಯನು ಮುಗುಳ್ದು ಮಠಕೈದಿ ಶಿವಪೂಜೆ ।
ಯಂ ತಳುವದೆ ಸದಾಶಿವನನುಭವದೊಳಿಪ್ಪುದಿದು ನಿತ್ಯನಿಯಮವ ಕಾರ್ಯವು ॥೩೪॥

ಒಂದುದಿನ ಮಡಿವಾಳ ಶಿವಯೋಗಿ ಪೂದೋಟ ।
ಕೆಂದು ನಡೆತರಲಲ್ಲಿ ಪೂದೋಟದೊತ್ತಿನಲಿ ।
ಕಂದನಾಕ್ರಂದನ ಧ್ವನಿ ಕಿವಿಯನುಗಲು ಬಿಸವಂದವೆನುತತ್ತ ನಡೆದು ॥
ಬಂದು ನಿರುಕಿಸಲೆಳೆಯಬಾಳೆಸುಳಿಯೆಲೆಯ ಮೇ ।
ಲಂದದುತ್ತಾನಮುಖವಾಗಿ ತಾನೊರಗಿರುವ ।
ಸುಂದರದ ಕಂದನಂ ಲೋಚನಾನಂದನಂ ನೋಡಿದನು ಮನಬಂದನು ॥೩೫॥

ಏನಿದೇನಿದು ರೂಪದೇನಿದೆತ್ತಣ ಶಿಶುವ ।
ದೇನಿದೆನ್ನಯ ಮನವ ಕವರ್ದಪುದು ಗೃಹಿಯಂತೆ ।
ನೂನಮಾ ಪರಶಿವನೆ ಶಿಶುರೂಪದಿಂದಿಲ್ಲಿ ಮೈದೋರ್ದನಿದು ನಿಳದು ॥
ಏನಿದಿಂತಲ್ಲದೊಡೆ ವಿರತನಾದೆನ್ನ ಮನ ।
ವೇನಿದೀ ಶಿಶುವಿನೊಳು ನಿರತವಪ್ಪುದೆ ತಿಳಿಯಲಾ ।
ನೀಲಲೋಹಿತನ ನಿಯತಿಯಂ ಮಿರ್ವರಾರ್ಮನುಮುನಿಸುರಾದಿಗಳೊಳು ॥೩೬॥

ಸಿಂಧುಬಲ್ಲಾಳನೆಂತೆಂಬ ಸದ್ಭಕ್ತನತಿ ।
ಬಂಧುರದ ಭಕ್ತಿಗಾತನ ಸತಿಯು ಮುಗ್ಗಲೊಳು ।
ಸಿಂಧುರಾಸುರನ ಕೊಂದಿಂದುಧರನಂದು ತಾಂ ಕಂದನಾಗಿರಲಿಲ್ಲವೇ ॥
ಸಿಂಧುರಾಸ್ಯನ ಪಿತನು ಬಿಜ್ಜಮಾದೇವಿಗೆ ವ- ।
ಸುಂಧರೆಯುದರಿಯೆ ತಾಂ ಕಂದನಾಗುತೆ ಕಂಬು- ।
ಕಂಧರೆಯ ನಿಹಕ್ಕೆ ಮೋದದಿಂದಲಿ ಬಂದು ಮೊಲೆಯುಣ್ಣುತುದ್ಧರಿಸನೆ ॥೩೭॥

ಆ ಪರಿಯೊಳಿಂದಮರರಾಪಗೆಯ ಪೊರ್ದನೀ |
ರೂಪದೀ ಶಿಶುವು ತಾನಾಗುತ್ತಮೆನ್ನನು ವಿ ।
ಲಾಪದ ನಿಮಿತ್ತದಿಂ ಬರಮಾಡಿತೆಂದೆನಲು ಜಾವಳವ ಶಿಶುಗಪು ದೇ ॥
ಭೂಪವಿತ್ರಾರ್ಥಮಿಾರೂಪುದಾಳುತ್ತೆ ಗಿರಿ ।
ಜಾಪತಿಯೆ ಬಂದನೆಂಬಂದಮಂ ಶಿಶುವು ನೋ ।
ಳ್ಪ ಪಾಮರರಿಗಾದೊಡಂ ತಾನು ಮಾಡದಲೆ ಬಿಡುವುದೇನಿದೆಂತೆಂದನು ॥೩೮॥

ಗುರುವರನು ಮಡಿಲೊಳಗೆ ಶಿಶುಗೊಂಡು ಮಠಕಂದು |
ಹರಿತಂದು ಲಿಂಗಮಂ ಸಂಸ್ಕರಿಸಿ ಬಳಿಕವನ ।
ತರುಳನುರುಶಿರದಲ್ಲಿ ಕರವಿರಿಸಿ ಪಣೆಯಲ್ಲಿ ಭಸಿತವಿಟ್ಟಾಲಿಂಗಮಂ ॥
ಭರದಿ ಕಂಧರದಲ್ಲಿ ಧರಿಸಲಾ ಬಳಿಕ ಶಿಶು ।
ನೆರೆಸಾಣೆಗಿಟ್ಟ ನವಮಣಿಯಂತೆ ಪೋಲ್ ತಾನು ।
ಮೆರೆದತ್ತು ಬಳಿಕಿತ್ತ ಗುರುಸತ್ತಮನು ಚಿತ್ತದೊಳು ಮುದಂಬೆತ್ತು ತಾನು ॥೩೯॥

ಸುಂದರ ಜಯಂತ ನಲಕೂಬರರ ಮಿಾರಿದ ಮು ।
ಕುಂದನಂದನನ ಚೆಲುವಂ ದಳೆದು ಕಂಗೊಳಿಪ |
ಕಂದನಂದವ ಕಂಡು ಮುದದಿಂದ ತಚ್ಛಿಶುವನಂದೊಯ್ದು ನರವುನೆಗೆ ತಾ ॥
ಅಲ್ಲಿ ಬಲ್ಲಿದ ಮಲ್ಲಸರ್ಜನಾ ಪಸುಳನಂ ।
ಬುಲ್ಲವಿಸಿ ತಾನೆತ್ತಿ ಸಿಕ್ಕರೀತಿಯ ಯೋಗಿ ।
ವಲ್ಲಭನ ಗುರುವರನ ಮಾತಿನಿಂದರಿವಾಗ ರುದ್ರಮ್ಮರಾಣಿಯನ್ನು ||೪೦||

ಬರಮಾಡಲಾಕೆ ಗುರುವರರ ಪದಕೆರಗಿ ನಿಂ ।
ದಿರಲವಳ ಮಡಿಲೊಳಗೆ ಗುರ್ವಾಜ್ಞೆಯಂತೆ ತ |
ನ್ನರಪನೆಳೆಶಿಶುವು ನಿನ್ನಸುವಿದೆಂದುಸುರಿತ್ತು ರಕ್ಕೆಗೈಯೆಂದು ಪೇಳಿ ||
ಭರದಿಂದ ಮೇಣೊಂಟೆಗಾವಲನ ಸುದತಿಯಂ ।
ಕರೆತರಿಸಿ ನೀನೆಮ್ಮ ಸಂಬುಗೆಗೆ ಪಾತ್ರಳೆಂ |
ದರಿದಿಹೆವು ನೀನುಮಿಾ ಪಸುಳಂಗೆ ಪಾಲ್ಪೆಂಣೆಯಿತ್ತೆತ್ತಿ ಪಾಲಿಪ್ಪುದಾ ||೪೧॥

ಎಂದೀರ್ವರಂಗರುಹಿ ಕಳುಹಲವರದರಂತೆ ।
ಕಂದನಂ ಪಾಲ್ಪೆಣ್ಣೆಯನ್ನೂಡಿ ಕಾಪಾಡಿ ।
ಮುಂದೆ ಹನ್ನೆರಡು ದಿನಪೋದಗಲಾ ಮಗುವಿಂಗೆ ಮಣಿದೊಟ್ಟಿಲವನಿಟ್ಟರು ॥
ಸುಂದರಿಯರಾ ಪುರಂಧ್ರಿಯರು ಮುತ್ತೈದೆಯರು ।
ಚೆಂದವನ್ನೊಳಕೊಂಡ ಕುಂಚಿಗೆ ಕುಲಾಯಿಗಳ ।
ತಂದು ಬಾಯಿನವಿಡಿದು ತಮ್ಮಕ್ಕಳೊಡವೆರೆದ ಹೆಮ್ಮಕ್ಕಳೈತಂದರು ॥೪೨॥

ಕಟ್ಟಿದಿರೊಳಳವಟ್ಟ ತೊಟ್ಟಿಲವ ಸಿಂಗರಿಸಿ ।
ನೆಟ್ಟನೇ ಪಸುಳನಂ ಪಟ್ಟಿರಿಸುತದರೊಳಗೆ ।
ಪಟ್ಟಸಾರಿಯರೆಲ್ಲ ಬಾಯಿನವ ಮುಂದಿಟ್ಟು ಪಾಡಿದರು ಜೋಗುಳವನು ॥
ದಿಟ್ಟಿಮೂರರ ಕಂದ ಜೋ ಸಚ್ಚಿದಾನಂದ ।
ಬಟ್ಟ ಬಯಲದ ಮೂರ್ತಿ ಜೋ ಕೀರ್ತಿಸಂಪೂರ್ತಿ ।
ಯಟ್ಟಹಾಸದಿ ಮಾಯೆಯಟ್ಟಿಸುವ ದಿಟ್ಟ ಜೋ ಜೋಯೆಂದರಾ ಕಂದಗೆ ॥೪೩॥

ಇಂತು ಜೋಗುಳವಾಡಿ ಸೀಮಂತಿನಿಯರೆಲ್ಲ ।
ಮುಂತೆ ಕಂದನಿಗಾವ ಪೆಸರೆಂದು ರುದ್ರಮ್ಮ ।
ಗಂತರಿಸದಲೆ ಕೇಳಲಾಕೆ ಪತಿಯುಂ ಕೇಳಲವನಾಗ ಪತಿರಾಯನು ॥
ಚಿಂತಿತಂಗುಡುವ ಮಡಿವಾಳಯೋಗಿಯ ಕೃಪೆಯ ।
ನಾಂತ ಪಸುಳಂಗವರ ಪೆಸರನಿಡಲುಚಿತಮೋ ।
ದಂತುಸುರೆ ನಿಖಿಲಾಂಗನೆಯರಂದು ಮಡಿವಾಳನೆಂದೊಸೆದು ಪೆಸರಿಟ್ಟರು ॥೪೪॥

ಬಂದ ಚೆಂದುಟಿಯರು ವಧೂಟಿಯರು ಬಾಯಿನವ ।
ನೆಂದು ಕೈಕೊಂಡು ಬಂದಂದದಿಂ ತೆರಳಲ್ಕೆ ।
ಸುಂದರಿಯು ರುದ್ರಮ್ಮ ಸಲಹಿದಳು ಕಂದನಂ ಮಡಿವಾಳನೆಂದೆಂಬನಂ ॥
ತಂದೆಯುಪ ಮಲ್ಲಸರ್ಜನು ತಾನು ಮೇಲ್ಮೇಲೆ ।
ಬಂದು ಕಂದನನೆತ್ತಿ ಬುಲ್ಲವಿಸಿ ತಬ್ಬುಬ್ಬಿ ।
ಚೆಂದದಿಂದೆದೆಗಿಟ್ಟು ಮುದ್ದಿಟ್ಟು ಪೊಂಪುಳಿಗಳಳವಟ್ಟು ಮುದವಟ್ಟನು ॥೪೫॥

ಶರವಣದೊಳುದಿಸಿ ಮೇಣ್ ಸುರಗಣದಿ ನೆರೆದು ತಾಂ |
ಶರಜನ್ಮಬಾಹುಲೇಯನುಮೆಂದು ತನ್ನ ಪೆಸ ।
ರೆರಡಾಗೆ ರುದ್ರಾಣಿ ಪೊಲೆಯುಣಿಡಿ ತಾನುಯ್ಯೆ ಪಾರ್ವತೀತನಯನೆಂದು ॥
ಮೆರೆದ ಗುಹನಂದದೀ ತರುಳ ನೆಲೆಯೊಳು ಪುಟ್ಟಿ |
ಗುರುವರನ ಕೈಸೇರಿ ರುದ್ರಬ್ಬಮಾರಾಣಿ |
ಯುರ ಪೊಲೆಯುಣ್ಣುತೆ ತಾಂ ಬಳೆದು ಗುರುಮಡಿವಳರ ನಾಮವಾಂತೆಸೆದಿರ್ದನು ||೪೬||

ಪೂತಳಾಗಿರುವೆನ್ನ ಮಾತೆ ಗಿರಿಜಾತೆ ತಾಂ ।
ನೀತಿಯಿವನೊಳಗಿಲ್ಲಮೆಂದೆನ್ನನತಿಗಳೆಯೆ |
ಭೂತಳದೊಳೆತ್ತಲು ಕುಪುತ್ರನೊಳವಾದೊಡು ಕುಮಾತೆ ತಾನೇನಿರುವಳೇ ॥
ಈತೆರದ ನಾಣ್ನುಡಿಯುದಿರ್ಪ ಕತದಿಂ ದೇವಿ |
ತಾ ತಿಳಿದು ಬೆಂಬತ್ತಿದೆನ್ನನು ನಿರಾಕರಿಸ |
ದಾತುರದಿ ಪ್ರೀತಿಯಿಂ ಪಾಲಿಸಲಿ ಭುವನಜನಯಿತ್ರಿಯೆನ್ನನು ಗೌರಿಯು ॥೪೭||

ಶ್ರೀ ಶಿವಾದ್ವೈತಪರವಿದ್ಯಾನವದ್ಯಾತಿ ।
ವೈಶದ್ಯವಿದ್ಯೋತಮಾನನ ಮಹಾಲಿಂಗ ।
ದೇಶಿಕ ಶಿಖಾಮಣಿಯ ಪಾಣಿಕಂಜಾತ ಸಂಜಾತನು ಕವೀಶದಊತಂ ॥
ಆ ಸದಾಶಿವಕವಿಯು ಭೂಸದಾಶಿವನ ಯೋ |
ಗೀಶನ ನಿರಾಶನ ವಿಪಾಶನುರುಮಡಿವಾಳ ।
ದೇಶಿಕನ ಸುರುಚಿರ ಪುರಾಣದೊಳಗೊಂದಾದ ಸಜ್ಜಾದಜನನ ಸಂಧಿ ||೪೮॥

ಅಂತು ಸಂಧಿ ಒಂದಕ್ಕಂ ಪದಂಗಳು ೭೫ ಕ್ಕಂ ಮಂಗಳಂ
ಶ್ರೀ ಶ್ರೀ

## ೨ನೆಯ ಸಂಧಿ

ಸೂಚನಾ:— ಬಾಲಲೀಲಾಜಾಲ ಲೋಲನಾಗುತೆ ಪಲವು ।
ಕಾಲಗಳೆದಾ ಮೇಲೆ ಸಾಲೆಯೊಳಗಕ್ಷರದ ।
ಮೂಲವರಿದಾ ಬಳಿಕ ಸಕ್ಕದಂ ಗಲಿತನಾ ಮಡಿವಾಳ ಮರಿದೇವನು ॥

ಸಾಂಬನಂ ತ್ರಿಜಗದವಲಂಬನಂ ವಿಧೃತವಿಧು ।
ಬಿಂಬನಂ ಕೃತಹರಿಕಲಂಬನಂ ಸದ್ಗುಣಕ ।
ದಂಬನಂ ಮಹಿಮನಿಕುರುಂಬನಂ ಮಾಯಾವಿಡಂಬನನನಮಲನಂ ನಾಂ ॥
ತ್ರ್ಯಂಬಕನನಘಜಯ ವಿಡಂಬಕನನುಮೆಯ ಮುಖ ।
ಚುಂಬಕನನುಚಿತ ಹೇರಂಬನ ಸುಪಿತನನಾ ।
ಶಾಂಬರನನಭವನಂ ಬಿಡದೆ ಶಿವನಂ ಭಜಿಸಿ ಬಾಳುವೆಂ ಭವಭವದೊಳು ॥೧॥

ರಾಕೇಂದುಮುಖಿ ಮಲ್ಲಸರ್ಜರ ಮಹಾರಾಣಿ ।
ಯಾಕಾಶಫಲವೆನಿಸುವಾ ಪಾಕನಂ ಸುಕೃತ ।
ಪಾಕವಿರೆ ಲೋಕಪತಿ ಜೋಕೆಗೈಯಲು ಕೊಟ್ಟನೆಂದುರ್ಕಿರಕ್ಕಿಸುವಳು ॥
ಆ ಕೂಸಿನಳ್ಕೆಯುಂ ಜಕ್ಕುಲಿಸಿ ನಗಿಸಿ ಮೋ ।
ಣಾ ಕಂದನಳಗುಡದೆ ಮಾತೆಯುಡುವಳು ಬಿಡದ ।
ಲಾಕೆ ಬಾಯೊಳು ಬಾಯನಿಟ್ಟು ಮುದ್ದಿಡುತೆ ಕಣ್ದುಂಬಿ ತಾನೀಕ್ಷಿಸುವಳು ॥೨॥

ಪೊಗರುಗುವ ಪುಲಿಯುಗುರು ಮಾಗಾಯಿಯುರಳಿಲಿಯು ।
ಸೊಗಸಿನಿಂದುಲಿವ ಕಾಲ್ಗೆಜ್ಜೆಯುಂದುಗೆ ಮೊದಲು ।
ಬಗೆಬಗೆಯ ಬಗೆಪಂದ ಬಾಲದೊಡವುಗಳಿಲ್ಲವರ ಮನೆಯೊಳರೆಯಿಪ್ಪವೆ ॥
ಒಗುಮಿಗೆಯಿನವಸೆಲ್ಲ ಬಾಲಮಡಿವಾಳನಿಗೆ ।
ಝುಗಝುಗಿಸುವಂತಿಡಿಸಿ ಪೊಂಬಟ್ಟೆಯಿಂ ತೊಡಿಸಿ ।
ಮಗುವಿನಂಗಂಗುಡು ಬಿಡದೆ ಸಂತಸಗೊಂಡು ನಿಜಸುತನ ಮರೆದಿಪ್ಪಳು ॥೩॥

ದಿಟ್ಟಮೂರನರೂಪವಳವಟ್ಟ ಶಿಶುವು ತಾಂ ।
ತೊಟ್ಟಿಲೊಳು ಪಟ್ಟಿರ್ದು ಕೈಮುಟ್ಟಿಗೈದಾಡೆ ।
ದುಟ್ಟ ಮಾಯೆಯ ತಲೆಯ ನವಿರ ಬಿಡದೆಳೆವೆನೆಂಬನುವನುರೆ ತೋರಿಸುವುದು ।
ಕಟ್ಟಳರಿಂದ ಕಾಲೆರಡೆತ್ತಿಯಾಡುತಿರೆ ।
ಕೆಟ್ಟನೆನಿಸಿದ ಕಾಲನೆದೆಗೊದೆದು ಬಿಡದೆ ತಾ ।
ನಟ್ಟಿಸುವ ಮಾಳ್ಕೆಯಿಂ ತೊಟ್ಟನೇ ನೋಳ್ಪವರ ದಿಟ್ಟಿಗುರೆ ತೋರಿಸುವುದು ॥೪॥

ಭ್ರೂಣನೀ ಪರಿ ಮಾಳ್ಪ ಬಾಲಲೀಲೆಗಳೆಲ್ಲ ।
ರಾಣಿ ರುದ್ರಮ್ಮನಿಗೆ ಪ್ರಾಣಸವ ವಾಗುತಿರ ।
ಲೋಣಿಯವರೆಲ್ಲರಿಗೆ ಮುದ್ದಾಗುತಿರಲವಗೆ ನಾಲ್ಕೈದು ವರುಷಗಳೆಯೆ ।
ಕ್ಷೋಣಿಪತಿ ಮಲ್ಲಸರ್ಜನು ತಾನು ಜಣಜಣಕೆ ।
ಕಾಣುತವನಂ ಬಿಡದೆ ಮನವೊಪ್ಪಿ ಬಿಗಿದಪ್ಪಿ ।
ಜಾಣನಾಗುವನೆಂದು ಮಾಣದೂಹಿಸಿ ತಾನು ಹರಿಸಗಡಲೊಳಗಿಳಿವನು ॥೫॥

ಇನ್ನೊರೆವೆನಾನವನ ಬಾಲಕನ ಚಪಲತೆಯ ।
ತನ್ನೋರಗೆಯ ಮಕ್ಕಳೊಡನಾಡುತಿರ್ಪನಂ ।
ಮುನ್ನಮವರಾಡುತಿಹ ಚಿಣಿಕೋಲು ಬಗರಿಗಳ ಸೆಳೆದೋಡಿ ಪೋಗುತಿಹನು ॥
ಚುನ್ನವಾಡುವನವರ್ಗೆ ಗಾಳಿಮಾತುಗಳಿಂದೆ ।
ಬನ್ನಬಡಿಸುವನವರ ತಲೆಕುಕ್ಕಿ ಪೊಯ್ದು ಸಂ-।
ಪನ್ನನಂತಿಹನು ಪೇಣವರೆಲ್ಲರರಮನೆಗೆ ದೂರುವರು ದಿನದಿನದೊಳು ॥೬॥

ಮಲ್ಲಸರ್ಜರು ಮಗುವೆ ಮಡಿವಾಳ ನೀಂ ಕೇಳು |
ಕ್ಷುಲ್ಲಕರ ತುರುವಲಿಗಳೊಡನಾಡದಿರು ಬರಿದೆ ।
ಪೊಲ್ಲ ಕೆಲಸವನೊಲ್ಲದಿರು ಪೊರಗೆ ಪೋಗದಿರು ಗಾವಿಲನುಮಾಗಬೇಡಯ್ ॥
ಇಲ್ಲಿ ಬಾ ನಿನಗೆ ನಾನೀವ ಮಾವಣ್ಣುಗಳ|
ನಿಲ್ಲದೀಯುವೆನೆನಲ್ ತಾತನೀನೀಗ ಕೇ |
ಳೆಲ್ಲ ಸುಳ್ಳೆಪ್ಪುದೆಂದುಸುರಿ ಮಡಿವಾಳನುಂ ಮತ್ತೆ ಪೊದಲಂತಿರ್ದನು ॥೭॥

ಇಂತವನ ಸಂತತಂ ಮಾಳ್ಪ ಚಪಲತೆಗಂಡ
ನಂತರೂರ್ಜನರು ಬಂದೆರಗಿ ದಊರಲ್ಕೆ ನಿ |
ಶ್ಚಿಂತನಹ ಶಿವಯೋಗಿ ಮಡಿವಾಳಸರ್ಗುರುವು ದೇಸಾಯಿ ರುದ್ರಪ್ಪರ ॥
ಸಂತೈಸಿ ಮಡಿವಳನ ನಿಜಮಠಕೆ ಕರೆದೊಯ್ದು ।
ಸಂತವಿಟ್ಟಚ್ಛಿತ್ರಾರ್ಥವ ಕೊಟ್ಟು ಪೊರೆಯಲ |
ತ್ಯಂತ ಭಕ್ತಿಯು ಗುರುವಿನಲ್ಲಿ ಬಳೆಯಲ್ಕವನು ಮಠದಲ್ಲಿಯೇ ನಿಂದನು ||೮||

ಚಿಕ್ಕವನು ಗುರುವರನಿಗಜ್ಜ ಅಜ್ಜಾ ಎಂದು ।
ತಕ್ಕನುಡಿಯಿಂ ಕರೆದು ತಾನವನ ಮಾತನ್ನು |
ಮಿಕ್ಕದಲೆ ವಶವರ್ತಿಯಾಗಿರ್ದೊಡಂ ತನ್ನ ಚಪಲತೆಯ ಬಿಡಲಿಲ್ಲವು ||
ಅಕ್ಕರಿಂದವನನ್ನು ಪಕ್ಕದೊಳಗಿಕ್ಕಿ ಕಡು ।
ರಕ್ಕಿಸಿದ ಮಡಿವಾಳ ಶಿವಯೋಗಿಮಣಿಯುತನ ।
ಗಕ್ಕುವಂತ್ಯದ ಕಾಲವರಿತು ಕಲ್ಮಠದ ಪ್ರಭುದೇಶಿಕರ ಬದಿಗೆ ಬಂದು ॥೯||

ವಿರತನಿಕರಪ್ರಭುವೆ ಪ್ರಭುಗುರುವೆ ಮಡಿವಾಳ ।
ತರುಳನಸುವಿನ ತಿರುಳು ಪರಿಸರನ್ನದಹರಳು ।
ಕರದೊಳಿಪ್ಪರಗಿಳಿಯಿದೆನ್ನ ಸೈಪಿನ ಬೆಳೆಯಿದಿಳೆಗಿಂದುವಿನ ಕಳೆಯು ತಾ ॥
ಕರಮರಿದು ಪಾಲಿಸಿದೆನಿವನನೀಗಳೆ ನಿಮ್ಮ ।
ಕರದೊಳಿತ್ತಿಹೆ ಗುರುವೆ ಪೊರೆ ದಯಾಳುವೆ ನೀವು |
ಪರನಾಜ್ಞೆಯಾದುದೆನಗದರಿಂದೆ ನಾಂ ಬಂದೆ ನೀವೆ ಗಡ ಸರ್ವಸ್ವವು ॥೧೦॥

ಎಂದುಸುರಿ ಬಾಲನಂ ಕರೆದೊಯ್ದು ಸ್ವಮಠಕ್ಕೆ
ತಂದು ಗುರುಮಡಿವಾಳ ಶಿವಯೋಗಿಮಣಿಯು ಪೇ
ಳ್ದಂದದಿಂ ಮುಂದೆರಡು ತಿಂಗಳವು ಕಳೆಯೆ ತಾಂ ಲಿಂಗೈಕ್ಯನಾಗುತಿರಲು ॥
ಅಂದು ದೇಸಾಯಿ ಮೊದಲಾದ ಜನರೆಲ್ಲರುಂ
ಬಂದು ಶವಮಂ ವಿಧಿಯದೆಂತಂತೆ ಸಂಸ್ಕರಿಸಿ
ಮುಂದೆ ಮಂಗಳವಾದ್ಯವೊಳಗಲಾ ಚೌಕಿಮಠದೊಳಗಣ ಸಮಾಧಿಯಲ್ಲಿ ॥೧೧॥

ಲಿಂಗೈಕ್ಯನಾ ಲಿಂಗಮಯದಂಗವನ್ನಿಳುಹಿ
ಸಾಂಗಮೆನೆ ಪೂಜಿಸುತೆ ಮಂಗಲಾರತಿಯೆತ್ತಿ
ಮಂಗಲದ ಪುಷ್ಪಾಂಜಲಿಯ ಕೆದರಿ ಪೂರೈಸಿ ಮರಳಿದರು ಜನರೆಲ್ಲರು ॥
ಸಿಂಗರದೊಳೀಗಳುಂ ಜನರೆಲ್ಲ ಗದ್ದುಗೆಯ
ನಂಗವಿಸಿ ಪೂಜಪರು ಬಿಡದೆಂದೊಡೀ ಜಗದೊ
ಳಂಗಜಾರಿಯರೂಪಿ ಜಂಗಮನ ಗದ್ದುಗೆಯನಾರು ಪೂಜಿಸದಿಪ್ಪರು ॥೧೨॥

ಇತ್ತಲಾ ಚಿಕ್ಕ ಮಡಿವಾಳಬಾಲಕನು ತಾ
ನುತ್ತಮ ಪ್ರಭುಗುರುಗಳೊತ್ತಿನಲಿ ಬಳೆವುತಿರ
ಲತ್ತ ಪ್ರಭುಗುರುವಿವನನಸುಮೆಂದು ರಕ್ಕಿಸಲು ತನ್ನ ಚಪಲತೆ ಪೋಗದೆ ॥
ಅತ್ತಿತ್ತಮೂರೊಳಗಿವಂ ಪೋಗಿ ಬಾಲಕರ
ವೊತ್ತದೊಡವೆರೆದವರ ಕೃತ್ಯಗಳನಡಹೊಯ್ದು
ಮತ್ತವರ ಕತ್ತಿನೊಳು ಕೈಯಿಕ್ಕಿ ದೂಡಿರದೆ ನೆತ್ತಿಯಂ ಟೊಣೆದೋಡುವ ॥೧೩॥

ಹರಣವಳಿದೊಡು ಪರರ್ಗೆ ಕೈಯಾನದಿಪ್ಪಧಟು
ಮರಳಿ ಪೋಹಿಸದ ಛಲವಿಡಿದ ಘನತರ ವಿರತಿ
ಪರವಧುವ ನೋಡಲೀಯದ ಮನದ ಬಿಗುಹು ಮೋಹಲ್ಲಿ ಹುಸಿಯದ ಸತ್ಯವು ॥
ಮೆರೆವ ನಿಷ್ಕಪಟದಾಶ್ರಮಧರ್ಮದೊಳು ರತಿಯು
ಧರೆಯೊಳೆಲ್ಲಕ್ಕಮತ್ಯಧಿಕಮೆನಿಸುವ ಶಾಂತಿ
ಗುರುವರ ಪ್ರಭುವಿನೊಳಗನವರತಮೆಲ್ಲವುಂ ಕರಮೆಸೆದು ಮೆರೆದಿಪ್ಪವು ॥೧೪॥

ಸತತವೆಸೆಪ ಶಿವಾನುಭವದ ಘನ ವಿಭವಮುಂ
ವಿತತ ದುರ್ವಿಷಯಕರಿಗದ ಕರಣವಿಜಯಮುಂ
ಯತಿತತಿಯನುತಿಗೊಂಬ ಕಾಯ್ಪಿಲ್ಲದಿಹ ತಪವು ದಂಭವಿಲ್ಲದ ಜಪವದು॥
ತಿಳಿವೆರೆದ ಸತ್ಕ್ರಿಯೆಯು ಗತಿಗೇಡಿಯೊಳ್ ಭಯವು
ಮಿತಿ ಮೀರಿದುರುದಯವು ಪ್ರತಿಯಿರದ ಭವಜಯವು
ಶಿತಿಕಂಠನವತಾರವಿಡಿದ ಪ್ರಭುಗುರುವಿನೊಳು ಪ್ರತಿದಿನವು ಮೆರೆದಿಪ್ಪುವು ॥೧೫॥

ಇಂತಪ್ಪ ಪ್ರಭುಮಹಾಗುರುಗಳಿಗೆ ಮಡಿವಾಳ
ನಿಂತೆಂಬ ಬಾಲಕನು ಬಿಡದೆ ಬಾಬಾ ಎಂದು
ಸಂತಸದಿ ಕರೆಕರೆವನವದಿರುವಮ್ಮವನ ತವೊಮ್ಮಳಗೊತು ತಿಳಿವರೆನಲು ॥
ಚಿಂತಿತಾರ್ಥಂ ಗುಡುವ ಪರಮ ಚಿಂತಾಮಣಿಯು
ಕಂತುಮದಮರ್ದನನ ಲೋಕರಕ್ಷಾಮಣಿಯು-
ನಂತ ಮಹಿಮಾಕರನು ರೂಪಜಿತಹಿಮಕರನುಮೆಂದವನನರಿದಿಪ್ಪರು ॥೧೬॥

ಮಡಿವಾಳಬಾಲಮಣಿ ತಾಂ ಮಾಳ್ಪ ಚೇಷ್ಟೆಗಳ
ಗಡಣಮದು ನಿಜ ಮಹಿಮರಾಶಿ ತೇಜಃಪುಂಜ
ದೊಡಮೆರೆದ ಬಿಡಿ ಕಿಡಿಗಳೆಂಬಂತೆ ಪರಿಣಮಿಸಿ ಪೊರಬೀಳಲನುವಾದುದು ॥
ಜಡಮತಿಯ ದೃಷ್ಟಿಗದು ಚೇಷ್ಟೆಯಾಗಿದೆರ್ಡೊಡಂ
ಕಡು ಜಾಣನಿಗೆ ಮಹಿಮ ಕಲೆಯಾಗಿ ಕಾಣ್ಬುದೆನ
ಲೊಡನೆ ಮಹಾಡಣಗಾಳಿ ಕಿಡಕಾದೊಡಂ ಬಳಿಕ ಫಲಕಾರಿಯಾಗಿಪ್ಪುದು ॥೧೭॥

ಮತ್ತಮಿಾಪೂರೊಡೆಯ ಮಲ್ಲಸರ್ಜನೃಪಾಲ
ನತ್ತ ಹಾನ್ಗಲ್ ಮೆಂಗಿ ಚನ್ನಬಸವಪ್ಪರೆಂ
ಬುತ್ತಮರು ಶಾಸ್ತ್ರಿಗಳು ನಾಗಲಾಂಬೆಯು ಸತಿಯುಳೊಡನಿರಲ್ಕೈತಂದರು ॥
ಇತ್ತಮಿಾದೇಸಾಯಿ ಸಂಸ್ಕೃತಾಧ್ಯಾಪನದ
ಕೃತ್ಯವನ್ನಿತ್ತವಗೆ ಕಲ್ಮಠದೊಳಿರ ಹೇಳಿ
ತತ್ತತ್ಪದಾರ್ಥಗಳನನುಕೂಲಿಸುತ್ತಮಾಶ್ರಯಗೊಟ್ಟನವರ್ಗೆ ತಾನು ॥೧೮॥

ಆರು ಶಾಸ್ತ್ರದಿ ತನಗದಾರು ಸರಿದೊರೆರೆಂ
ದಾ ರುಚಿರ ಮೈಸೂರ ರಾಜಸಭೆಯೊಳಪಾರ
ಚಾರು ಕೀರ್ತಿಯು ಪಡೆದ ಸೂರಿಮಣಿಯುಹ ಚನ್ನಬಸವಾಖ್ಯ ಶಾಸ್ತ್ರಿಯಿವನು ॥
ನಾರಿಯಿಂಕೆಗೆ ಜಗದಿ ಹದಿಬದೆಯು ವ್ರತದೊಳಾ
ನಾರಿಯರು ಸರಿಬಾರರಿಂತೆಂಬುವುನ್ನತಿಯು
ನೇರಿ ಮೆರೆದಿಪ್ಪವರ ನಾಗಲಾಂಬೆಯುವೆರಸು ಕಲ್ಮಠದೊಳಿರುತಿಪ್ಪನು ॥೧೯॥

ಕಾವ್ಯ ಚಂಪೂ ಬಾಣ ನಾಟಕಾಲಂಕಾರ
ಸೇವ್ಯ ಸಾಹಿತಿಯನ್ನು ಕೆಲರು ಪಾಠಕರು ಸಂ
ಭಾವ್ಯವಹ ವ್ಯಾಕರಣ ತರ್ಕಾದಿ ಶಾಸ್ತ್ರಗಳನೋದುವರು ಕೆಲ ಜನಗಳು ॥
ಭೂವ್ಯಕ್ತವಾಗುವಂತೀ ಪರಿಯೊಳೆಲ್ಲರು ಮ
ನೋವ್ಯಥೆಗೆ ಲಕ್ಷಗುಡದಂತೋದುತಿಪ್ಪರೆನೆ
ಭೂ ವ್ಯೋಮ ಪಾತಾಳದೊಳಗೀ ಪ್ರಗಲ್ಭನಿಗೆ ಸರಿಯಿಲ್ಲವಯ್ ಬಗೆವಡೆ ॥೨೦॥

ಎಂಬ ಕೀರ್ತಿಗಳನ್ನು ನಂಬಿರ್ದ ಪಂಡಿತರು
ಜಂಬ ಬಡೆಯುದೆ ನಾಗಲಾಂಬೆಯೊಡಗೂಡಿ ತಾಂ
ನಂಬುಗೆ ಮನಂಬುಗಲು ಲಿಂಗಪೂಜೆಯನೆಸಗಿ ಮಠದ ಪ್ರಭುಗುರುಗಳಡಿಗೆ ॥
ಕಂಬಿಟ್ಟು ಹಂಬಲಿಸಿ ದೇಸಾಯರಿಗೆ ಸಮ್ಮ
ದಂಬಡಿಸಿ ಸರ್ವವಿದ್ಯಾರ್ಥಿಗಳಿಗಾ ವಿದ್ಯೆ-
ಯಂ ಕಲಿಸಿ ಸಜ್ಜನನ ಮಂತ್ರಿಯಿಂತೆಂಬುವೋಲ್ ಕಾಂಬುವರ ತಂಗೆಸೆದರು ॥೨೧॥

ಸಾಂಬನವತಾರಿ ಪ್ರಭುವರನು ಮರಿದೇವನಂ
ತಾಂ ಬಯಸಿ ನಾಗಲಾಂಬೆಯು ವಶಕೆ ಕೊಡಲವಳು
ಕಾಂಬುವರ ಕಣ್ಗೆ ಜಗದಂಬೆ ಎಂಬಂತಾಗಿ ಸಲಹುತಿರ್ದಳು ಬಿಡದಲೆ ॥
ಪಂಬಂದುದೋ ಸುಕೃತವಾಕೆ ತನ್ನೊಡಲಣುಗ
ನೆಂಬಾತತೆಗೆಯೆಂಬ ಮಾಳ್ಕೆಯಿಂದಂದು ತಾ
ನಿಂಬಿಡಿದ ಸಂತಸಂ ಬಡೆದವನ ನೋಡಿ ಕಾಪಾಡಿ ಮುದ್ದಾಡುತಿಹಳು ॥೨೨॥

ಮತ್ತಮಿತಣ್ಣುರೊಳಗೆ ಮಡಿವಾಳ ಮರಿದೇವ
ನೆತ್ತಲುಂ ಚರಿಸುತ್ತಮೊಡನಾಡಿಗರ ಬಾಲ-
ರೊತ್ತಿಗೈತರುತಮವರ್ಗುಪಹತಿಯನೊಡರಿಸಲು ಮನೆಯವರು ಮಠಕೆ ಬಂದು ॥
ಬಿತ್ತರಿಸಲದ ಕೇಳಿ ಪ್ರಭುಗುರರುತ್ತಮರು ಬೇ
ಸತ್ತವನ ಕೇಳಲದಕವನೊಡಂಬಡದಿರಲು
ಮತ್ತವನ ಕೋಣೆಯೊಳು ಪುಗಿಸಿ ಕದಮಂ ನೂಂಕಿ ಬೀಯಗವನೊತ್ತಿರ್ದನಂ ॥೨೩॥

ವರಕವಿಯು ರಸಿಕಕವಿ ತ್ವರಿತಕವಿ ಎಂದೆನಿಸಿ
ಮೆರೆದಿಪ್ಪ ರುದ್ರಕವಿ ಮಡಿವಾಳಮರಿದೇವ
ನುರುಲೀಲೆ ಕೇಳಿ ತಾಂ ನೋಡಲಿಚ್ಛಿಸಿ ಮಠಕೆ ಬಂದು ಗುರುವಿಗೆ ವಂದಿಸಿ ॥
ತರುಳ ಮಡಿವಾಳಮರಿಯೇಗೆಯ್ವನೆಲ್ಲಿಹನು
ಕರೆಯಿರೀಗಾತನಂ ನೋಡಬಂದಿಹೆನೆನಲು
ಗುರುವರರು ಬೀಯಗವ ತೆಗೆದೀಕ್ಷಿಸಲ್ಕಲ್ಲಿ ಕೋಣೆಯೊಳಗವನಿಲ್ಲವು ॥೨೪॥

ಅದನರಿದು ಗುರುವರರು ರುದ್ರಕವಿಗಿಂತೆಂದ
ರದುಬುತವು ಮಡಿವಾಳ ಮರಿಯ ಕಿಡಿಗೇಡಿತನ
ಪೊದಗಿಸಲು ಬೆಸತ್ತು ನಾನವನ ಕೋಣೆಯೊಳು ಪುಗಿಸಿ ಬೀಯಗವನಿರಿಸೆ ॥
ಚದುರ ನಿನಗೀಗವನ ತೋರಿಪ ನಿಮಿತ್ತದಿಂ
ಕದವ ತೆರೆದೀಕ್ಷಿಸಲ್ಕವನಿಲ್ಲದುದ ನೋಡ
ಲಿದು ಚೋದ್ಯವೆಂದೀರ್ವರಾಗಳವನಂ ಪುಡುಕಲೊಳಯಿಂಕೆ ಪೋದರವರು ॥೨೫॥

ನಾಗಲಾಂಬೆಯು ಕಂಡು ಗುರುವೆ ಪುಡುಕಿಪುದೇನಿ-
ದೀಗಳೊಳಗುಂಬುವನು ಮಡಿವಾಳಮರಿಯೆನ
ಲ್ಕಾ ಗುರುಪ್ರಭುವೊಳಗೆ ಪೋಗೆ ಬಾಬಾಯೆಂದು ಮಡಿವಾಳನೋಡಿ ಬಂದು ॥
ಬಾಗಿ ಬಿಗಿದಪ್ಪುತಿರಲಾ ಗುರುಗಳವನನನು
ರಾಗದಿಂ ತೆಗೆದಪ್ಪಿ ಗದ್ದವಿಡಿದಲುಗಿಸುತ-
ಮಾಗಲಾನಂದಾಶ್ರುವುಣ್ಮೆ ಪೊಂಪುಳಿ ಪೊಣ್ಮೆ ಕಯ್ಗಣ್ಮೆ ಗದ್ಗದವದು ॥೨೬॥

ಎಲೆ ಮಗುವೆ ಮಹಿಮಾಂಕ ನಿನ್ನನೀ ಜಗದೊಳಗೆ
ತಿಳಿಪಡೇಂ ನಾಡಾಡಿಗನೆ ಅಲ್ಲ ಬಿಡು ಜಗ
ತ್ಕುಲವ ವ್ಯಾಪಿಸಿದ ಪರಶಿವನೆ ನೀನಲ್ಲನೊಡದೆಂತಪ್ಪುದಂತರ್ಧಿಯು
ನೆಲಸಿ ನೀನಲ್ಲಿ ಬೇರೆಡೆಯಲ್ಲಿ ತೋರುತಿಹೆ
ಛಲರೆ ನಿನ್ನಂತಾರುವೊಳರೆ ಚೆನ್ನಿಗನೆ ಬಾ
ಪಲವಾತಪೇಂ ತಪಃಫಲವದೆನ್ನಯ ನಿನ್ನರೂಪಾಗಿ ಬಂದಿರ್ಪುದು ॥೨೭॥

ಬಾಲಕೃಷ್ಣನು ಮೇಣು ಬಲಭದ್ರನೀರ್ವರುಂ
ಲೀಲೆಯಿಂದಂಗಳದೊಳಾಡುತಿಪ್ಪವಸರದಿ
ಪೇಳಲೇನಾ ಕೃಷ್ಣ ಮಣ್ದಿಂಬುದಂ ಕಂಡು ಅಣ್ಣ ತಾಯ್ಗದನೊರೆಯಲು ॥
ಕೇಳಿ ತಾಯಣುಗನಂ ಕೇಳೆ ಪುಸಿಯೆಂಬ ನೋ
ಪಾಲಪನವಂ ತೆರೆಯೆ ಬಾಯೊಳಗೆ ಬ್ರಹ್ಮಾಂಡ
ಜಾಲವಿರಲದ ಕಂಡು ಮಾತೆ ಬಣ್ಣಿಸಿದಂತೆ ಗುರುವರನು ಬಣ್ಣಿಸಿದನು ॥೨೮॥

ಎನ್ನಕಣ್ಣನ ತಂಪಿನಮೃತಾಂಜನವೆ ಬಾರ
ಎನ್ನ ಹೃತ್ಕಂಜರಂಜನಕಂಜ ಸಖನೆ ಬಾ
ಎನ್ನ ಮುದ್ದಿನಕಣಿಯೆ ಎನ್ನ ಸಿದ್ಧಿಯ ಮಣಿಯೆ ಬಾ ಎನ್ನ ಕಟ್ಟಾಣಿಯೆ ॥
ಮನ್ನಿಸುತ್ತಿಂತವನ ಬಣ್ಣಿಸುತೆ ತಾನೆತ್ತಿ
ಚೆನ್ನಿಗನ ಬುಲ್ಲವಿಸಿ ಸಂತೈಸಿ ಗುರುವರನು
ಮುನ್ನಿನಂತಾತ್ಮಲಿಂಗಾರ್ಚನೆಯನೆಸಗುತಂ ಬಿನದದಿಂದಿರುತಿರ್ದನು ॥೨೯॥

ರುದ್ರಕವಿಯಾದೊಡಂ ಭದ್ರಮಡಿವಾಳನ-
ಕ್ಷುದ್ರಮಹಿಮೆಯ ಕಂಡು ಬೆರಗಾಗುತಂ ಜಗದು-
ಪದ್ರವಂ ಕಳೆಯೆ ಬಂದಾ ರುದ್ರನಂಶವೆಂದ್ಬೆರಗುತರಮನೆಗೆ ಪೋದ ॥
ಭದ್ರತೇಜಃಪುಂಜರಂಜಿತದ ನಿಜ ಮುಖದ
ಮುದ್ರೆಯಿಂದಾದೊಡಂ ಕಿತ್ತೂರ ಜನರ ಜಡ
ನಿದ್ರೆಯಂ ಕಳೆಯಲುಜ್ಜುಗಿಸಿದನು ಮಡಿವಾಳನಘರಿಪುಗೆ ಕರವಾಳನು ॥೩೦॥

ಏವೇಳ್ವೆನೊಂದುದಿನ ಮಡಿವಾಳಬಾಲಕನು
ಪೂವಿಡಿದ ತೋಟಕೆಂದೊಡನಾಡಿಗಳ ಕೂಡಿ
ಸಾವಧಾನದೊಳೈದಿ ಬಗೆಬಗೆಯ ಪೂಗಳಂ ನೋಡುತ್ತ ಮುಂಬರೆವರ ||
ಪಾಪೊಂದು ಕಳ್ಳನೇ ಮಂದಿರಲ್ಕಳ್ಕದಲೆ
ಪಾವಿನಾ ಬಾಲದುದಿವಿಡಿದು ತಾನೆಳೆದೆಳೆದು
ಸಾವಿಗಂಜುವ ಜಾಲರೆಡೆಗಿಡಲ್ಕವರಯ್ಯೊ ಸತ್ತೆವೇದೋಡೆ ಮರಳಿ ||೩೦||

ಮತ್ತಮುರಗನ ಬಾಲವಿಡಿದು ಬಿಸುಟುತೆ ಪಿಡಿದು
ಮತ್ತೆ ಬಿಸುಟುತ್ತಿಂತು ಭುಜಗನೊಡನಾಡುತಿರ-
ಲಿತ್ತಲೊಡನಾಡಿಗರು ಮಠಕೈದಿ ಗುರುವರರಿಗೊರೆಯಲವರೈತಂದರು ||
ಒತ್ತರದಿ ಬಪ್ಪ ಪ್ರಭುಗುರುವರಂಗಾ ಫಣಿಯ
ನೆತ್ತಿ ಬಾಬಾ ನೋಡು ನೋಡೆಂದು ತೋರಿಸು-
ತತ್ತ ಬರೆ ಬಿಡು ಫಣಿಯ ಬಿಡು ಬಿಡೆನೆ ಬಿಟ್ಟೋಡಿ ಬಂದನಾ ಗುರುವಿನೆಡೆಗೆ ||೩೧||

ಬಂದ ಬಾಲನನೆತ್ತಿ ಕಂದ ಕೇಳೆಲೆ ಮಗುವೆ
ದಂದಶೂಕವ ಪಿಡಿವರೆಲೆ ಮರುಳೆ ಮಠಕೆ ನಡೆ
ಯಿಂದು ಮೊದಲಾಗಿಂತು ಗೈಯದಿರು ನೀನೆಂದು ಮಠಕೆ ಬರಲಾ ಗುರುಗಳು ||
ಅಂದಿನಾ ವಾರ್ತೆಯಂ ನಾಗಲಾಂಬೆಯು ಕೇಳಿ
ಯಿಂದುಧರರೂಪನಿವನಹುದಹುದು ನಿಜವು ಬಿಸ
ಮಂದಮೇನುತಾನಂದದಿಂದ ಕಂದನನಪ್ಪಿ ಮೈದಡವಿ ಒಣ್ಣಿಸಿದಳು ||೩೨||

ಸರ್ಪಲೀಲೆಯನೂರೊಳಿರ್ಪ ಸರ್ವರು ಕೇಳಿ
ದರ್ಪಕಾರಿಯೆ ಬಲ್ಲನೇತಕೆನೆ ಕಿರುವಯದೊ
ಳಿರ್ಪ ಮಡಿವಾಳಮರಿಯಂತಪ್ಪ ಸುಮಹಿಮಾಶಾಲಿಯಾಗಿಹನು ತಾನು ||
ಆರ್ಪರೀಕ್ಷಿಸಲಾರ್ಪರೆಂದರೇಬರೊರೆಯೆ ಪರಿ
ತರ್ಪರೆಲ್ಲರು ಯಿಂತು ನಡೆವೆರಗಿ ಸಲೆ ಮರಳಿ
ಬರ್ಪಕಾಲದೊಳಾದೊಡಾತನಘಟಿತ ಕೃತಿಯ ನೆನೆವುತ್ತಮೈತಂದರು ||೩೪||

ಇನಿತುವಂ ಕಿರುಹರೆಯದೊಳಗೆನಿತೊ ಮಹಿಮೆಯಂ
ಬಿನದದಿಂದಮರ್ಚನವನು ಬಿಸವಂದವೆನುತೆಲ್ಲ
ಜನಗಳೊಬ್ಬುಳಿಗೂಡಿ ಪಲವಾಡಿ ಬಣ್ಣಿಪುದಿದಚ್ಚರಿಯದೇನಿದರೊಳು ॥
ಚಿನುಮಯನ ರೂಪರೊಳಗಿನಿತನಿತೆನಿಪ್ಪವನು
ತನುವುಂಟೆ ತಿಳಿಯಲಿಲ್ಲಲ್ಲಿಗೈ ನಾಂ ಪೇಳು
ವೆನು ಗರ್ಭದೊಳಗುದಯದೊಳು ಬಾಲ್ಯದೊಳು ಯೌವನದೊಳು
ಮವತಾರಿಸಮನು ॥೩೫॥

ಪಿಂತೆ ಪ್ರಲ್ಹಾದನೆಂಬುವನು ಜನನಿಯ ಗರ್ಭ
ದಂತರಾಳದೊಳಿರ್ದು ದೇವರ್ಷಿ ನಾರದನ
ನಂತ ಬೋಧೋಕ್ತಿಯನು ಕೇಳಲಿಲ್ಲವೆ ಮೇಣು ವ್ಯಾಸಾಖ್ಯ ಮುನಿವರ್ಯನು ॥
ಇಂತು ಮಾತೆಯ ಗರ್ಭದತ್ತಣಿಂದುದಿಸಿ ಸಮ
ನಂತರದೊಳೆತ್ತಲುಂ ಚರಿಸಲಿಲ್ಲವೆ ಮೇಣು
ಕಂತುಹರನಾಜ್ಞೆಯಿಂ ರೇಣುಕನು ಲಿಂಗದಿಂ ಜನಿಸಿದಾಕ್ಷಣ ಚರಿಸನೆ ॥೩೬॥

ಅದು ಕಾರಣಂ ತಿಳಿಯಲವತಾರಿ ಮಹಿಮನಿಧಿ-
ಗುದಯಮಾತ್ರದಿ ತಿಳಿವು ವಿರತಿಯುಪರತಿ ಸಮನಿ
ಪುದು ವಯಸ್ಸಿನ ನಿಯಮಮುದವಶ್ಯವಾಗಿ ಬೇಕೆಂಬುದಿದು ಪುಸಿ ಧರೆಯೊಳು ॥
ಪದುಳದಿಂ ಮಡಿವಾಳಮರಿ ಕಿರಿಯನಾದೊಡಂ
ಪದೆದು ಘನತರ ಘಣೆಯ ಬಾಲವಿಡಿದೆಳೆವುತುಂ
ಎಡೆಯಾಡುತಿಹನೆಂದೊಡೇಂ ಮಹಿಮನೆಂದೆಲ್ಲ ಜನರಿಂತು ಬಣ್ಣಿಸಿದರು ॥೩೭॥

ಶ್ರೀಕರ ಶ್ರಾವಣದ ಮಾಸದೊಳಗಂದೋರ್ವ
ಗೋಕಾವಿಯತ್ತಣಿಂ ಪಟ್ಟದಾರ್ಯರು ಮಠಕೆ
ಲೋಕೋತ್ತರ ಪ್ರಭಾವಾನ್ವಿತ ಪ್ರಭುಚರಣವನು ಕಾಣಲೈತಂದಿರೆ ॥
ಆ ಕರುಣಿ ಸದ್ಗುರುವುಮವರನುಪಚರಿಸೆ ಗೋ
ಕಾಕದವರೊಳಪೊಕ್ಕು ವಿಂದು ಶಿವಪೂಜೆಯಂ
ಬೇಕೆನಿಪ ವಸ್ತುವಿಂ ಗೆಯ್ಯುತಿರಲನಿತಕ್ಕೆ ಮಡಿವಾಳ ಮರಿದೇವನು ॥೩೮॥

ಪೂಜೆಯೊಳ್ವನೆವೊಕ್ಕು ನಿರುಕಿಸಲು ನಿಖಿಲವನು
ರಾಜಮಂತ್ರವ ಜಪಿಪ ಪಟ್ಟದಾರ್ಯರ ಕೈಯ
ರಾಜಿಸುವ ಲಿಂಗವನ್ನಿರದೆ ಕದದೋಡ ಪ್ರಭುರಾಜನೋಹೋ ಎನ್ನುತೆ ॥
ಮಾಜದಲೆ ನೀಡದಂ ಮಡಿವಾಳ ನಿಲು ನಿಲೆಂ
ದೋಡಿ ಮಿಗೆ ಬೆಂಬತ್ತಲಿತ್ತ ಮಡಿವಾಳಮರಿ
ತಾ ಜವದಿ ಪಿತ್ತಲದ ಬಾವಿಯಂ ದುಮ್ಮಿಕ್ಕಿ ಮುಳುಗಿದಂ ಮೇಲೇಳದೆ ॥೩೯॥

ಅಕಟಕಟ ಬಾವಿಯೊಳು ಬೀಳ್ದನೆಮ್ಮಯ ಬಾಲ
ನಕಟಕಟ ಬೇಗ ಬನ್ನಿರಿಯೆಂಬ ಹುಯ್ಯಲವ-
ನಾಕರ್ಣಿಸೆಲ್ಲರುಂ ಕೈಯೊಡನೆ ಕೂಡುತಾ ಬಾವಿಯೊಳು ಹುಡುಕುತಿರಲು ॥
ವಿಕಲತೆಯನಾಳ್ದ ನಾಗಾಂಬೆಯಕಟಕಟೆನ್ನ
ಸುಕುಮಾರ ಮೃತನಾದನಯ್ಯೋಯೆಂದೆದೆ ಹೊಯ್ದು
ವಿಕರಿಸುತ್ತಳುತಿರಲ್ಕಿತ್ತಣಿಂ ಬಂದನೆಂಬುದನಾರಿಗಿರಿಗುಡದಲಿ ॥೪೦॥

ಮಡಿವಾಳನೆಲೆ ತಾಯೆ ನೀನೇತಕಳುವೆ ಬಿಡು
ಬಿಡು ಮಂದಿ ಕೂಡಿರ್ಪುದೇಕೆನುತೆ ಬಿಗಿದಪ್ಪ-
ಲೊಡನವಳು ಮಗುವಿನಂ ಕಾಣುತಸು ಬಂದಂತೆಪೋಲಾಗಿ ಜನರೀಕ್ಷಿಸೆ ॥
ಪುಡುಕುತಿಹ ಬಡವ ತನ್ನೆಡೆಗೆ ಕಡವರ ತಾನೆ
ಬಿಡದೈದೆ ಪಿಡಿವಂತೆ ಪಿಡಿದೆತ್ತಿ ಮುದ್ದಿಟ್ಟು
ಸಡಗರಿಸುತಲೆ ಮಗುವೆ ಮೃಡನಂಶಿಕನೆ ನೀನು ಜಾವಳನದೆಂತಾಗುವೆ ॥೪೧॥

ಎಲ್ಲಿ ಲಿಂಗವದೆಲ್ಲಿ ನೀನೆಲ್ಲಿ ಬಾವಿ ತಾ
ನೆಲ್ಲಿ ಬೀಳುವಿಕೆ ಮತ್ತೆಲ್ಲಿ ಬರುವಿಕೆ ಮಗನೆ
ಸೊಲ್ಲಿಸಲದೆಲ್ಲವಿದಮಾನುಷದ ಕೃತಿಯಹುದು ನಾಡಾಡಿಗರದಾಗದು ॥
ತಲ್ಲಲನೆಯೆಂದಿಂತು ತುತಿಸೆ ಪ್ರಭುಗುರುವರರು
ನಿಲ್ಲದೈತಂದವನ ಚುಬುಕವಂ ಪಿಡಿದೆತ್ತಿ
ಬುಲ್ಲವಿಸಿ ಮಗುವೆ ಇಂದಿನ ದಂದವದು ನಿನಗೆ ಸಲ್ವುದಿತರರ್ಗಾಗದು ॥೪೨॥



ಭಾರತ ಸ್ವಾತಂತ್ರ್ಯದ ಬೆಳ್ಳಿಚುಕ್ಕಿ

ವೀರರಾಣಿ ಕಿತ್ತೂರು ಚೆನ್ನಮ್ಮ



ಕಿತ್ತೂರು ರಾಜಮನೆತನದವರ ಸಮಾಧಿಗಳು, ಕಿತ್ತೂರ



ಕಿತ್ತೂರು ರಾಣಿ ಚೆನ್ನಮ್ಮನ ಸಮಾಧಿ, ಬೈಲಹೊಂಗಲ

ಗುರುಮಠದೊಳಿಪ್ಪ ಗುರುಪಟ್ಟದಾರ್ಯರ ಕೈಯೊ
ಳಿರುವಂದದಿಂವಗಲದಂತಿಪ್ಪ ಲಿಂಗವಿರು
ತಿರಲರ್ಚನಂ ಗೈದು ಪೊರಗೆ ಬರಲವರುವಿಽ ಮಡಿವಾಳನುರು ಮಹಿಮೆಗೆ ।।
ಬೆರಗುವಡೆದಿರಲುಳಿದ ಜನದ ಜಂಗುಳಿಯುಂ ಕಂ
ಡೆರಗಿ ಮಡಿವಾಳ ಮರಿದೇವನುರು ಮಹಿಮಸಾ-
ಗರನೆಂದು ಬಣ್ಣಿಸುತ್ತಂದು ಮೊದಲವನಲ್ಲಿ ಭಯಭಕ್ತಿಯಿಂದಿರ್ದುದು ॥೪೩॥

ಒರ್ಮೆ ಶ್ರೀ ಮನ್ಮಲ್ಲಸರ್ಜದೇಸಾಯಿರತಿ
ಧಾರ್ಮಿಕ ಪ್ರಭುಮಹಾಗುರುಗಳಡಿದಾವರೆಗೆ
ಕೂರ್ಮೆಯಿಂ ನಮಿಸಲೈತರ್ಪುದರಿವಾ ಗುರುಸ್ವಾಮಿಗಳು ಮರಿದೇವನಂ ॥
ನರ್ಮೋಕ್ತಿವೆರಸು ನಿನ್ನನು ಪಾಲಿಸಿದ ತಂದೆ
ಧರ್ಮಿಷ್ಠ ದೇಸಾಯಿಯೈತರುತ್ತಿಹರವರ್ಗೆ
ಮಾರ್ಮಿಕನೆ ಬೇಗ ನೀನಾಸನವನಿರಿಸೆಂದು ಬೆಸಗೈದರಸವಸದೊಳು ॥೪೪॥

ಎಂದ ಮಾತಂ ಕೇಳಿ ಗುರುವೆ ಬಾಬಾ ಎನಗೆ
ತಂದೆಯವನೋ ಮೇಣು ನಾನವನ ತಂದೆಯೋ
ಚೆಂದದಿಂ ಪೇಳೆಂದು ಕೇಳ್ವಿನಂ ಸನಿಹದಿಹ ಮಲ್ಲಸರ್ಜನು ಕೇಳುತೆ ॥
ಬಂದು ಗುರುವಿಂಗೆರಗಿ ಕಂದನಂ ಬಿಗಿದಪ್ಪಿ
ವಂದಿಸಿ ಮಹಾಮಹಿಮ ಕೇಳು ನೀ ವಿಶ್ವಕ್ಕೆ
ತಂದೆಯಹ ನಿನಗೆ ನಾಂ ತಂದೆಯೆಂತಪ್ಪೆನೈ ಎನಗೆ ನೀನೇ ತಂದೆಯು ॥೪೫॥

ಇಂತೆಂದು ಪೇಳುತಾತನಿಗೆರಗಿ ನಿಮ್ಮಿಷ್ಟ
ವೆಂತಿರ್ಪುದದನೊರೆದೊಡಃನೀವೆ ತಪ್ಪದೆನ
ಲಂತದಂ ಕೇಳ್ದವನು ಬೊಗಸೆದುಂಬನಿತನಿಶಮೆನಗೀಃವುದಯ್ ॥
ಇಂತೊರೆಯಲಂತಾಗಲೆಂದುಸುರಿ ದೇಸಾಯಿ
ಸಂತಸದಿ ಕೋಶಪತಿಯಪ್ಪ ಶಿವಲಿಂಗಗೋ
ರಂತಾಜ್ಞೆಗೈಯುತಿರಲಂತವನೊಡಂಬಟ್ಟು ನಿತ್ಯವಿಾವುತ್ತಿರ್ದನು ॥೪೬॥

ಇತ್ತ ಮರಿದೇವನುಂ ನಿತ್ಯದೊಳು ತನಗಿತ್ತ
ವಿತ್ತವೆಲ್ಲವನೂರನಾಥರ್ಗೆ ಬಡವರ್ಗೆ
ಚಿತ್ತಬಂದಂತಿತ್ತು ತಾನೊಂದು ಕಾಸವುಮನಾಶಿಸದುಪೇಕ್ಷಿಸುವನು ||
ಪತ್ತನದ ಜನರಿವನ ಚಿತ್ರಚಾರಿಯರೂಪ
ವೆತ್ತ ಪುರುಷಂಗೆತ್ತು ಭಯಭಕ್ತಿಯೊಡನವನ
ನೆತ್ತೆತ್ತಿಯಾಡಿಸುವರಿಂತಪ್ಪ ಬಾಲನಂ ನಾವೆಲ್ಲಿ ಕಂಡುದಿಲ್ಲ ||೪೭||

ಲೋಕದೊಳಗವತಾರಿ ಪುರುಷಂಗೆ ಸತ್ಕುಲವು
ಸಾಕನಿತು ಹರೆಯು ಸನ್ಮತಿಯು ಮೊದಲಾದಿವಂ
ಬೇಕೆಂಬುದೀ ನೇಮ ಮುಂತಿಲ್ಲವೈ ಮೋಣು ಬೇಕೆಂಬುದಾವುದೆನಲು ||
ಏಕಶಿವನಂಶವುಂ ಪಿಂದಣ ತಪಃ ಫಲವಿ-
ಪಾಕವೆರಡುಂ ಬೇಕು ಬೇರೊಂದರೊದವೇತ
ಕೀ ಕುಮಾರನು ಕಿರಿಯನಾದೊಡಂ ಶಿವನಂಶವಿಪ್ಪ ಕತದಿಂ ಮಹಿಮನು ||೪೮||

ಈ ಮಹಿತ ಮಹಿಮನಂ ಕಣ್ಮನಂ ದಣಿವಂತೆ
ಪ್ರೇಮದಿಂ ನೋಡಿ ಕೊಂಡಾಡಿ ಮುದ್ದಾಡಿಯೂ
ರಾ ಮಂದಿ ಎಲೆ ತಂದೆ ನೀಂ ಬಂದೆಯೆನಲಾಗಿ ಬಿಡದಿಂತು ಬಣ್ಣಿಸಿದರು ||
ಗೋಮಿನಿಯವೋಲಿರ್ಪ ಕಾಮಿನಿಯರುಂ ಬಿಡದ-
ಲಾ ಮಹಿಮನನ್ನೆತ್ತಿ ಪ್ರೇಮದಿಂದೆದೆಗೊತ್ತಿ
ಭೂಮಾತೆಯೇ ನಿನ್ನ ಪೆತ್ತಳಲ್ಲದೆ ಲೋಕಮಾತೆ ನಿನಗಿಲ್ಲೆಂದರು ||೪೯||

ಒಂದು ದಿನಮುತ್ತರದ ದೆಶೆಯತ್ತಣಿಂ ವಿತತ
ವೃಂದಪತಿಯಪ್ಪ ಪ್ರಭುಗುರು ಮಹಾಂತನ ಕಾಣ
ಲೆಂದೋರ್ವ ವಿರತಮಣಿ ವಿರತಿಖನಿ ಪರಿಚಿತನು ಸದುಚಿತನು ಬರೆ ಬೇಗನೆ ||
ಕುಂದದಾನಂದದಿಂ ಪ್ರಭುಗುರುಗಳುಪಚರಿಸಿ
ಬಂದ ಮೂರ್ತಿಯನಂದು ನಮಿಸಿ ಲಿಂಗದಪೂಜೆ
ಗೆಂದೊಳಗೆ ಕಳುಹಲವರಂದು ಲಿಂಗಾರ್ಚನದ ಗೈಮೆಯೊಳು ತೊಡಗಿರ್ದರು ||೫೦||

ಕಂದ ಮಡಿವಾಳ ಮರಿದೇವಗೈತಂದವರ
ಮುಂದೆ ಕುಳಿತರ್ಚನೆಯ ಸೊಬಗನೀಕ್ಷಿಸುವ ತ
ನ್ನಂದವಂ ತೋರಿ ಕೆಲಪೊಳ್ತುಗಳೆಯಲು ಬಳಿಕ ಮೆಲ್ಲನಲ್ಲಿಂದೇಳುತೆ ॥
ಮುಂದರ್ಚಿಪರ ಕೈಯ ಲಿಂಗವಂ ಸೆಳೆದೋಡೆ
ಹಿಂದೆ ಪ್ರಭುಗುರುವರರು ಬೆತ್ತ ವಿಡಿದೋಡುತ್ತೆ
ಬಂದೆ ನಾಂ ಬಂದೆ ಕೊಡು ಲಿಂಗವಂ ನೋಡೆಂದು ಬೆಂಬತ್ತಲಾ ಬಾಲನು ॥೫೧॥

ಇನ್ನು ಬಾಬಾ ಇವರುಮೆನ್ನ ಪೊಡೆಯುವರೆಂದು
ತನ್ನ ತಾಯಾದ ನಾಗಾಂಬೆಯೆಡೆಗೋಡಿ ತಾ
ಬೆನ್ನಮರೆವುಗಲಾಕೆ ಮಗುವೇತಕಂಜಿರುವೆ ಪಿಂದೆ ಬಾಬಾ ಬಪ್ಪನು ॥
ಅನ್ನೆಗಂ ಗುರುಪರರು ಬೆತ್ತವನ್ನೆತ್ತುತ್ತೆ
ಮುನ್ನ ಕೊಡು ಲಿಂಗವಂ ನೀನೀಗಳೊಲ್ಲವೊಡೆ
ಬನ್ನಬಡಿಸುವೆನೆಂದು ಸನಿಹಕ್ಕೆ ಬರಲವರು ನಾಗಲಾಂಬೆಯು ಕೇಳ್ದಳು ॥೫೨॥

ಏನು ಮುನಿಸಿವನ ಮೇಲೇನು ಮಾಡಿಹನಣುಗ-
ನೇನದೆಲ್ಲವ ಪೇಳ್ವುದೆನೆ ಪ್ರಭುಸ್ವಾಮಿಗಳು
ತಾನೀಗಳೈದಿರ್ಪ ಸ್ವಾನುಭವಿಜಂಗಮವು ಪೂಜೆಗೈವವಸರದೊಳು ॥
ಪಾಣಿಲಿಂಗವ ಕೊಂಡು ಬಂದಿರ್ಪನಿವನೆನಲ್
ಮಾನಿನೀಮಣಿ ನಾಗಲಾಂಬೆಯೆಲೆ ಬಾಲಕನೆ
ನೀನಿಂತು ಜಂಗಮದ್ರೋಹವಂ ಮಾಳ್ಪರೇಂ ಕೊಡು ಬೇಗ ತಲ್ಲಿಂಗವ ॥೫೩॥

ತರುಳ ಮಡಿವಾಳ ನೀಂ ಚರವರರ ಕೈಯೊಳಿಹ
ಹರಣಲಿಂಗವ ಕೊಂಡುಬಹುದೊಳಿತೆ ಕೊಡು ಬೇಗ
ಭರದೆ ನಿನಗೀಯುವೆಂ ಖಂಡಶರ್ಕರೆಯ ನಾನೆಂದುಸುರೆ ಪ್ರಭುಗುರುಗಳು ॥
ಹರೆ ಬೂದಿ ಮುಸುಕಿರ್ದ ಕೆಂಡದಂದದಿ ಮುಗಿಲ
ಮರೆಗೊಂಡ ರವಿಯಂತೆ ಮನುಜದೇಹವ ತೊಟ್ಟ
ಪರಶಿವನು ಇವನೆನಿಪ ಮಡಿವಾಳ ಮರಿದೇವನೊರೆದನಿರ್ವರಿಗೆಂತೆನೆ ॥೫೪॥

ಆ ಜಂಗಮಾಗ್ರಣಿಯು ಪೂಜಿಸುವ ರಾಜಿಸುವ
ಮೂಜಗವ ತುಂಬಿರ್ದ ನಂಜಿರ್ದ ಲಿಂಗಮಂ
ಪೂಜೆಗಳಿದೇತಕ್ಕೆ ನಾಂ ತರವೆ ತಾಯೆ ಬಾಬಾಗಳಿಗೆ ತಿಳಿವಿಲ್ಲವೆ ॥
ಮಾಜದಾ ಲಿಂಗವವರೆಡದೊಡೆಯ ಬಟ್ಟೆಯೊಳು
ರಾಜಿಪುದು ನೋಡಿಮೆನಲೈತಂದು ನೋಳ್ಪಿನಂ
ಸೋಜಿಗವು ಜಂಗಮದ ಕೈಗಕ್ಕೆಕೊಂಡವರು ಸಾಂಗಪೂಜೆಯ ಗೈಯ್ದರು ॥೫೫॥

ಇಂತಸಾಧಾರಣದ ಮಹಿಮೆಯಂ ತಾಯ್ತಂದೆ
ಗಿಂತಧಿಕರಪ್ಪ ನಾಗಾಂಬೆ ಪ್ರಭುಗುರುಗಳೋ
ರಂತೆ ಮನಗಂಡವನ ಮುಂಡಾಡಿ ಬಿಗಿದಪ್ಪಿದೇನು ನಿನ್ನಯ ಲೀಲೆಯು ॥
ಎಂತರಿಯಲಹುದು ನಿನ್ನಂತವಂ ಜಗದೊಳಗೆ
ಕಂತುವಿಜಯನೆ ಬಲ್ಲನಂತಲ್ಲದೊಳವಾರ್ಗೆ
ಸಂತವಿಸಿ ಮಗುವೆ ನೀಂ ಬಾರೆಂದು ಮಗುಳ್ದಪ್ಪಿ ಬಣ್ಣಿಸಿದರವರೀರ್ವರು ॥೫೬॥

ಇತ್ತಲಾ ಬಂದ ವಿರತೋತ್ತಮನು ಬಾಲಕನ
ಬಿತ್ತರದ ಮೈಮೆಗಾಣುತ್ತವನನೊತ್ತಿಗಿರ
ದೊತ್ತರಿಸಿ ಬಂದವನನೆತ್ತಿ ಬಿಗಿದಪ್ಪಿ ತಾಂ ಭಾಪುರೇ ಭಾಪೆನ್ನುತೆ ॥
ಸುತ್ರಾತನಂ ಸುತ್ತಿ ಸುತ್ತಿ ತೊಳಲುತ್ತಾನು
ಮಿತ್ತ ಮೈದೊಡೆ ನಿನ್ನಯುತ್ತಮದ ಮಹಿಮೆಗಳ
ವೊತ್ತಮಂ ಕಂಡೆನ್ನ ಚಿತ್ತವಚ್ಚರಿವೆತ್ತುದೇಕೆನಲು ಪೇಳ್ವೆ ಕೇಳು ॥೫೭॥

ತಲೆಯಲುಗೆ ನವಿರೇಳ್ದು ಬೆಳುವಣ್ಣವಡಿಯೆ ಕರ
ತಲಕೋಲು ಬರಲು ನಡುಬಾಗಲಿಂತಹವಸ್ಥೆ
ನೆಲಸಿದೆಮ್ಮಂತಪ್ಪ ವಿರತರಿಗೆ ನಿನ್ನಂತೆ ಮೈಮೆ ದಿವ್ಯಜ್ಞಾನವು ॥
ತಲೆದೋರಲಿಲ್ಲೆನಲ್ಕಂಡುಂಡು ಬಾಲಕಾ
ವಲಿಯ ಕೂಡೆತ್ತಲುಂ ಚರಿಸಿ ಮಲಗುವ ಬಾಲ
ಲೀಲೆಯಿಂತಿರ್ದೊಡಂ ತ್ಯಕ್ತವಿಷಯನು ಮುಕ್ತನಂತಿರ್ಪೆ ಸುಕೃತಿ ನೀನೆ ॥೫೮॥

ಎಂದು ಮನಬಂದಂದದಿಂ ನುತಿಸಿ ವಿರತಮಣಿ
ವಂದಿಸುತ್ತಾನಂದದೊಡನಿರಲ್ ಪತ್ತನದ
ಮಂದಿ ಮಡಿವಾಳ ಮರಿದೇವನುರು ಮಹಿಮೆಯಂ ಕೇಳಿಯೈದಿದರಲ್ಲಿಗೆ ॥
ತಂದೆ ಕೇಳೊಂದೆ ಮೊಗದಿಂದಲೈತಂದ ವಿಷ
ಕಂಧರನೆ ನಿನ್ನಂದವೊಂದಿ ಬಂದಿಹನೆಂದು
ವಂದಿಸುವೆವಾವಿಂದು ಸುಂದರನೆ ಕಂದ ಪೊರೆಯೆಂದಿಂತು ಬಣ್ಣಿಸಿದರು ।೫೯॥

ತರುಳನಹ ಮಡಿವಾಳ ಮರಿದೇವರಿಂಗೈದು
ವರುಷದುಂಬಲು ಗುರುಪ್ರಭು ಮಹಾಸ್ವಾಮಿಗಳು
ವರಮುಹೂರ್ತದೊಳಕ್ಷರಾಭ್ಯಾಸಮಂ ಗೈಸಲಾ ಶಾಸ್ತ್ರಿವರ್ಯರಿಂದ ॥
ಗುರುಗಳಿನಿತುಸುರಿದೊಡೆ ತಾನೆನಿತೊಗಲಿಯುವನು
ಭರದಿಂದ ತಾನೊಂದು ಬರಿಸದೊಳಗೆಲ್ಲ ಲಿಪಿ
ಪರಿಚಯುವದಾಯ್ತುವಗೆ ಪುಣ್ಯದಿಂದೊದಗಿಪ್ಪ ಗಣ್ಯಮತಿ ನೈಪುಣ್ಯದಿ ॥೦೬॥

ಏಣ್ಬರಿಸಕಾ ವೀರಮಾಹೇಶ ದೀಕ್ಷೆಯಂ
ಮಾಣ್ಬದಲೆ ಮಾಡಿಸಲ್ಕವನು ದೀಕ್ಷಿತನಾಗಿ
ಜಾಣ್ಬೊಕ್ಕ ಬುದ್ಧಿಯಿಂ ಸಕಲ ಶಾಸ್ತ್ರದ ಪಾರಗಾಣ್ಬಾಸೆಯಿಂ ಕಲಿತನು ॥
ಮೇಣ್ಬುವಿಯೊಳಿಂತಪ್ಪ ಜಾಣನಂ ನಾವೆಲ್ಲಿ
ಕಾಣ್ಬುದಿಲ್ಲೆಂಬ ಪೊಸಜಸವಡಿಯೆ ಗುರುವಿಗೆ ಶ
ರಣ್ಬೊಕ್ಕು ಮಡಿವಾಳ ಮರಿದೇವರನುಪಮದ ಪಾಂಡಿತ್ಯಗೊಂಡಿರ್ದರು ॥೬೧॥

ನೋಡೆ ವೆಂಗಿಯು ಚನ್ನಬಸವಪ್ಪ ಶಾಸ್ತ್ರಿಗಳು
ಬೀಡಿಯೂರಿನ ಕೊಳ್ಳಿ ಪರಮರಂಗಾಚಾರ್ಯ
ಜೋಡಾಗುತೀರ್ವರುಂ ಮಡಿವಾಳದೇವರಿಗೆ ಬಿಜ್ಜೆ ಗಲಿಸುತ್ತಿದ್ದರು ॥
ಆಡಲೇಂ ವ್ಯಾಕರಣ ತರ್ಕ ವೇದಾಂತದೊಳು
ಜೋಡಿರದ ಸಿರ್ದೋಷ್ಯವೈದುಷ್ಯದೊಡಗೂಡಿ
ರೂಢಿಯೊಳು ಮರಿದೇವರಪ್ರತಿಮ ಸೂರಿವರರೆನಿಸಿದರು ಸಂಸ್ಕೃತದೊಳು ॥೬೨॥

ಮರೆದಿಪ್ಪ ವಸ್ತು ಕೈಗರರೆ ದೊರಕಿದ ಪರಿಯು
ಲಿರದೆಲ್ಲ ಕಲೆಗಳಿವಗೊರ್ಂದುಳಿಯುದಂಡದಿಂ
ಭರದಿ ನೆರೆದಿರಲು ಮಡಿವಾಳ ಮರಿದೇವರುರೆ ಗುರುಭಕ್ತಿಪರನಾಗುತೆ ||
ಅರಮನೆಯೊಳೋರಗೆಯು ಬಾಪ್ರುಸಾಹೇಬನೊಡ
ವೆರೆದು 'ಬಾಪ್ಯಾಬಾರೊ'ಯೆಂದೇಕ ವಚನದಿಂ
ಕರೆವನವನಾ ಗ್ರಾಮ್ಯ ಶಬ್ದ ಕೇಳುತೆ ತಾನು ಪ್ರದುಡಿಕೊಂಡಿರ್ಪನೊಳಗೆ ||೬೩||

ಈ ತೆರ ಸಘಾಟಿಕೆಯು ಮಾತು ಶ್ರೀಮಂತನ
ಪ್ಪಾತನಿಗೆ ಶಿವಲಿಂಗರುದ್ರುಸರ್ಜನಗೆ ಬಲು
ಬಾತೆ ಖಾರದ ಮಾತಿನಂತಾಗಲವನೊಳಗೆ ನೆರೆ ಮುನಿಸುಗೊಂಡಿರ್ದನು ||
ಈತಮಡಿವಾಳ ಮರಿಯಾತನೊಳಗಣ ಮುನಿದ
ರೀತಿಯರಿಯದೆ ಪ್ರೀತಿಯಿಂದ ಕರೆಕರೆಯುತಿರೆ
ಮಾತದೇನವನೊಳಗೆ ದ್ವೇಷ ಮನೆಮಾಡಲದನರಿಯನಾ ಮಡಿವಾಳನು ||೬೪||

ಗಿಡವೇರಿ ಪಾರುವುದು ಮಲ್ಲಗಾಳಗಮದುಂ
ನಿಡಿದೋಡುವುದು ಮೇಣು ಜಿಗಿದೋಡುವುದಿವೆಲ್ಲ
ಮಡಿವಾಳದೇವರಿಗೆ ಸಹಜವಾಗಲು ಕಲಿಯು ಹನುಮನೆಂದೆಸೆದರವರು ||
ಗುರುವರ ಪ್ರಭುವಿರತರವರ ಪಾಂಡಿತ್ಯಕ್ಕೆ
ಸುರುಚಿರ ಕಲಾನಿಚಯ ಕುಶಲತೆಗೆ ವಿನಯಕ್ಕೆ
ವರಭಕ್ತಿಗುಂ ಮೆಚ್ಚಿ ಸಂತೋಷಸಾಗರದಿ ಮುಳುಗಿದರು ಬಿಡದೇಗಳುಂ ||೬೫||

ನಾಗಲಾಂಬೆಯುಂ ಕಲಾಕುಶಲತೆಯುನಖಿಲ ಶಾ
ಸ್ತ್ರಾಗಮಾಮ್ನಾಯ ವೇದಾಂತ ಪಾರೀಣತೆಯು
ನಾ ಗುರುಪ್ರಭುವಿನೊಳಗಿಪ್ಪತ್ತುಳ ಭಕ್ತಿಯುಂ ಕಂಡು ಮುದಗೊಂಡಳವಳು ||
ನಾಗರಿಕರೆಲ್ಲರೊಡಗೂಡುತಾತನ ಜಾಣ್ಮೆ
ಗಾಗಿ ನಲವೇರಿದರು ಮಲಸರ್ಜ ದೇಸಾಯಿ
ಯಾಗುರೂತ್ತಂಸ ಮಡಿವಳನ ಘನಪಾಂಡಿತ್ಯಮಂ ಕಂಡು ನಲಿನಲಿದನು ||೬೬||

ನಾರಿಕೇಳದ ಮರವನೇರಿ ತುದಿಯತ್ತಣಿಂ
ಪಾರಿ ಮೀರಿದ ಕೀರ್ತಿ ನಾರಿಯುಂಪಸೆನಿಂದ
ಶೂರ ತೆಂಗಿನಕಾಯಿ ಸಿದ್ಧಯ್ಯನೆಂಬನಾ ಬೈಲಹೊಂಗಲದಾತನು ತಾ ॥
ಧೀರಮಡಿವಾಳ ಮರಿದೇವರಡಿದಾವರೆಯು
ಶೂರನಹ ಶಿಷ್ಯನೆನಲಿವರ ಶೂರತ್ವಮುಂ
ಧೀರತ್ವ ಸುಮಹತ್ವ ಸೂರಿತ್ವಗಳನೆಲ್ಲ ಬಣ್ಣಿಸಲ್ಕಾಂ ಸಾಲ್ಗೆನೆ ॥೬೭॥

ಇಂಗೋಲನಂ ಗೆಲಿದನಂಗನೆಗೆ ಸಕಲರಿಗೆ
ಮಂಗಳವ ಸಂಗಳಿಪಳಿಗೆ ಸರ್ವಮಂಗಳೆಗೆ
ಕೆಂಗೆಣ್ಣನರೆಯೊಡಲೊಳುರೆ ಸಂಗಗೊಂಡಳಿಗೆ ತಂಗದಿನಾಂತವಳಿಗೆ ॥
ಶೃಂಗಾರಯೋನಿಗೆ ಸುಮಂಗಳೆಗೆ ಪಾರ್ವತಿಗೆ
ಇಂಗಡಲ ಸಲೆಯಿಂಪಿನಂತಿನಿದ ನುಡಿವಳಿಗೆ
ಭೃಂಗಕುಂತಳೆಗೆ ಗಿರಿಯಂಗಜೆಗೆ ಶರ್ವಾಣಿಗಂಗವಿಸಿ ವಂದಿಸುವೆನು ॥೬೮॥

ಶ್ರೀ ಶಿವಾದ್ವೈತ ಪರವಿದ್ಯಾನವದ್ಯಾಕೃತಿ
ವೈಶದ್ಯ ವಿದ್ಯೋತಮಾನನ ಮಹಾಲಿಂಗ
ದೇಶಿಕ ಶಿಖಾಮಣಿಯ ಪಾಣಿಕಂಜಾತಸಂಜಾತನು ಕವೀಶದೂತಂ ॥
ಆ ಸದಾಶಿವಕವಿಯು ಭೂಸದಾಶಿವನ ಯೋ
ಗೀಶನ ನಿರಾಶನ ವಿಪಾಶನುರು ಮಡಿವಾಳ
ದೇಶಿಕನ ಸುರುಚಿರ ಪುರಾಣದೊಳಗೆರಡನೆಯ ಬಿಜ್ಜಗಲಿದೀ ಸಂಧಿಯು ॥೬೯॥

ಅಂತು ಸಂಧಿ ೨ಕ್ಕಂ ಪದಂಗಳು ೧೪೪ ಮಂಗಳಂ
ಶ್ರೀ ಶ್ರೀ

# ೩ನೆಯ ಸಂಧಿ

**ಸೂಚನಾ** :—ಮುಚ್ಚರಿಪ ಶಿವಲಿಂಗರುದ್ರಸರ್ಜನ ಪಳಿದು |
ಜಚ್ಚರನೆಯುಳವಿ ಸುಕ್ಷೇತ್ರಕ್ಕೈದುತೆ ಮರಳಿ |
ಕೆಚ್ಚೆದೆಯ ಮಡಿವಾಳನಾ ಕಾಶಿಯೊಳು ಬುಧರ ಗೆಲ್ದುರಿಗೈತಂದನು

ದೀನಬಾಂಧವನೆಂದಸೂನ ನಿಗಮಾಗಮವು |
ತಾನವದು ನಿನ್ನನಾವಾಗಳುಂ ಬಣ್ಣಿಪುದು |
ದೀನರೊಳು ದೀನ ನಾನದುಕಾರಣಂ ನಿನಗುಮೆನಗುಮತಿ ಬಂಧುತ್ವವು ||
ನೂನವಿರುತಿರ್ದೊಡಂ ಮರಳಿಯೆನ್ನನು ನೀನ |
ದೇನು ಕಾರಣವೀಗ ನೋಡಲೊಲ್ಲೈ ಪೇಳು |
ಮೀನಕೇತನರಿಪುವೆ ನಿನ್ನ ಬಿರುದವನರಿದು ದೀನನೆನ್ನನು ಪಾಲಿಸಯ್ ||೧||

ಚೆನ್ನಬಸವಪಶಾಸ್ತ್ರಿ ಕೊಳ್ಳಿ ರಂಗಾಚಾರ್ಯ ।
ರಿನ್ನುಮಡಿವಾಳರಿಗೆ ಪೇಳ್ವುದಿನಿಸಾನುಮಿ
ಲ್ಲೆನ್ನುತಾತನ ವರಪ್ರತಿಭೆ ಧಾರಣಶಕ್ತಿ ವಾಕ್ಪಟುತೆ ಗ್ರಹಣತ್ವವು ॥
ಚೆನ್ನೆಸೆವ ಗುರುಭಕ್ತಿ ಪಿತೃಭಕ್ತಿ ನಮ್ರತೆಯು ।
ತನ್ನ ದೇಹದಶಕ್ತಿ ನಿಷ್ಪಕ್ಷತಾಸಕ್ತಿ ।
ಮನ್ನಣೆಗೆ ಪಕ್ಕಾಗೆ ಬೆಕ್ಕಸಂಗೊಂಡಂದುದಕ್ಕಾದರವರೀರ್ವರೂ ॥೨॥

ಕಾಮದುಘೆಯೊಳು ಕಾಮದಾನವಿಪ್ಪಂತೆ ಚಿಂ ।
ತಾಮಣಿಯು ಬಳಿ ಚಿಂತಿತಾರ್ಥದೊಳವಿದ್ದಂತೆ ।
ದ್ಯೋಮಹಿತ ಕಲ್ಪಾವನೀರುಹದಿ ನಿಜಕಲ್ಪಿತಾರ್ಥದೊದವಿಪ್ಪಂವದಿ ॥
ಶ್ರೀ ಮಹಾದೇವನವತಾರಿ ಮರಿದೇವರೊಳ ।
ಗಾ ಮುಖ್ಯ ಸರ್ವವಿದ್ಯೆಗಳಿಪ್ಪುವಿವುಮಿಾಗ ।
ಳೀ ಮಹೀತಳವರಿಯೆ ಪೊರಪೊಣ್ಮದತ್ತೆನಲ್ ಜಾವಳನಿಗೇಂ ಬಕ್ಕುಮೆ ॥೩॥

ಈ ಪರಿಯೊಳಾಪುರಕಲಾಪನುಮುಮಾಪತಿಯ ।
ಶ್ರೀಪಾದ ಪೂಜಕನಪಾರ ಪ್ರತಾಪನುಂ ।
ಭೂಪನಾ ಮಲ್ಲಸರ್ಜನು ತೊಡಗಿ ಪೌರಜನಸಮುದಾಯ ವೆಡೆವಿಡದಲೆ ॥
ಶ್ರೀಪರಂಜ್ಯೋತಿಃಸ್ವರೂಪ ಮಡಿವಾಳರಂ ।
ಭಾಪುರೇ ಭಾಪೆನುತೆ ಬಣ್ಣಿಸುತೆ ತದ್ಗುಣಕ-।
ಲಾಪ ಮನವನ ಹೃದ್ಯವಿದ್ಯೆಯುಂ ಬುದ್ಧಿಯುಂ ನೋಡಿ ಸಂತಸಂ ದಾಳ್ದುದು ॥೪॥

ತಾವರೆಯ ಸಖನು ಜಗವಾವರಿಸಿದಾ ತಮವ ।
ನೀ ವಸುಧೆಯರಿಯಲರೆಗಳಿಗೆಯೊಳು ಕಳೆದು ತಾ ।
ನಾವಗಂ ಮೈದೋರಲಖಿಲ ಜಂತುಗಳು ಕಂಡಾನಂದಗೊಂಡಿರ್ಪವು ॥
ಆವಕ್ಕಿ ಗೂಬೆಗೊಂದಕೊಕ್ಕಸಗೆಯಾಗದಂ ।
ತೀ ವಸುಧಿಪನ ಸೂನು ಬಾಪುಸಾಹೇಬನಿಗೆ ।
ಕೋವಿದ ಪ್ರವರ ಮಡಿವಾಳ ಮರಿದೇವರೊಳು ಕೂರ್ಮೆಯಿಲ್ಲಿಸಿತೋರ್ಮೆಯು ॥೫॥

ಅರಗುವರನಾನೆನ್ನ ಸಿರಿಗೆ ಸರಿಯಿಲ್ಲವೋ- ।
ಣರಸುತನಕೊಪ್ಪುತಿಪ ಪರಿಕರಂಗಳಿಗೇನು ।
ಕೊರತೆ ತಾನಿಂದುವೆನ್ನಂದಮಂ ಪೊಂದುವನೆ ಹರೆಯಾದೊಡರೆಯಿಪ್ಪುದೇ ॥
ವರಬುದ್ಧಿ ವಿದ್ಯೆ ಸಾಕನಿತಿರಲ್ಕೆನ್ನನಾ ।
ದುರುಳ ಮಡಿವಾಳಮರಿ ಬಾರೋ ಬಾಪ್ಪಾಯೆಂದು ।
ಕರೆವನವನೆನ್ನನಡಿಗಡಿಗಹಂಕಾರಿ ಬಾ ಬಾರೊ ಬಾಪ್ಪಾ ಯೆನ್ನುತೆ ॥೬॥

ಇಲ್ಲಿಯುರಮನೆಯಲ್ಲಿ ಪೆಳ್ಚಿತದ ನಲ್ಲಣೆಸ- ।
ನೆಲ್ಲಮಂ ಮೆಲ್ಲುತ್ತ ಮುರ್ಕಿ ಸೊರ್ಕೇರಿ ಮನ- ।
ಬಲ್ಲಪರಿ ನಡೆದಲ್ಲದೆಮ್ಮನೀಳಗೈವುದಿದು ಪೊಲ್ಲಮೆಂಬುದನರಿಯದೆ ॥
ಕ್ಷುಲ್ಲಕನಹಂಕಾರಿಯುಪಕಾರಿಜನಕೆ ತಾ ।
ನಿಲ್ಲದಪಕಾರಮಂ ಗೈಯುವ ಕೃತಘ್ನನುಂ ।
ಸಲ್ಲನೆಮ್ಮರಮನೆಗೆ ಫೋಂಕನಾ ಮಂಕನಂ ಝುಂಕಿಸುತೆ ನೂಂಕಿಸುವೆನು ॥೭॥

ತಾತನಿಗದೀ ಮಾತನಾನೋತು ತಿಳುಹಿದೊಡ- ।
ನಾತನೆಲೆ ಮಗನೆ ಕೇಳ್ ಮಡಿವಾಳ ಮರಿದೇವ ।
ನೀತನತಿ ವಿಖ್ಯಾತ ಮಹಿಮನದರಿಂ ನೀನು ಪ್ರೀತನಾಗಿರ್ಪುದೊಳಿತು ॥
ಖಾತಿಗೊಳದಿರು ಮಹಿಮರಾ ತೆರದ ನುಡಿವ ನುಡಿ ।
ಭೂತಳಕೆ ಕಲ್ಯಾಣಕಾರಕವದಾದೊಡೆ ಏ ।
ಗೀತಕರವೆಂತಪ್ಪುದೈ ಮಗನೆ ನೀಂ ಕೇಳು ನಿನಗೇತಕಭಿಮಾನವು ॥೮॥

ನಿನ್ನ ಪೆತ್ತಳು ಸದಾ ನಿನಗಿಂದಲವನನ್ನು ।
ಮನ್ನಣೆಗೆ ಪಕ್ಕಾಗಿ ಮಿಕ್ಕಿರುವನೆಂದು ತಾ ।
ನೆನ್ನುತ್ತಮವನ ತನ್ನ ಸುಗೆತ್ತು ಮುದಪೆತ್ತು ರಕ್ಷಿಪುವರಿಂದಲವನು ॥
ಇನ್ನು ವ್ಯವಹಾರದೊಳಗನುಜನಪ್ಪನು ಕೇಳು ।
ಚೆನ್ನಿಗನೆ ನಿನ್ನಂತರಂಗದೊಳು ಗುರುವೆಂದು ।
ಮನ್ನಿಪುದು ನೀನಿಂತು ಮಹಿಮರೊಳು ವಿರಸವದು ಕೇಡಿಂಗೆ ಕಾರಣವಲಾ ॥೯॥

ಅಗದವವದು ನಾಲಗೆಗೆ ಕಹಿಯಾದೊಡುದರಕ್ಕೆ ।
ಮಿಗೆ ಹಿತವದಾಗಿ ತದ್ರೋಗಗಳಿವಂತೆವೋಲ್ ।
ಬಗೆಯೆ ಮಹಿಮರು ನುಡಿವ ಕಟುವಚನನದು ಕಿವಿಗೆ ಸೊಗವಾಗದಿರ್ದೊಡದುವೆ ॥
ಪ್ರಗತಿಯಂ ಮುಂದೀವುದಿದು ದಿಟವು ತಿಳಿ ಮಗನೆ ।
ಹಗರಣೆಗರುಕ್ತಿಯಂತಿದು ವಿಫಲವೆಂದು ನೀಂ ।
ಬಗೆಯದಿರು ನಿನ್ನಂತರಂಗದೊಳ್ಗೇಗಳುಂ ಮಹಿಮರುಕ್ತಿಯು ಸಫಲವು ॥೧೦॥

ಎಂದಿಂತು ತನಗಿಂದು ಮುಂದೆಯುಂ ಸೊಗವೀವ ।
ತಂದೆಯುಕ್ತಿಯ ಮನಂದಂದು ತಾಂ ಕೇಳದಲೆ ।
ಮಂದಮತಿ ಬಾಪುಸಾಹೇಬನೆಂಬರಗುವರನವಿಚಾರಪರನಾಗುತೆ ॥
ಎಂದಿನಂದದಿ ಸುಪ್ರಸಾದಕೆಂದರಮನೆಗೆ ।
ಬಂದ ಪ್ರಭುಗುರುವರನು ಮುಂದೊಳಗೆ ಪೋಗುತಿರೆ ।
ಖಂದೆ ಬಹ ಮಡಿವಾಳ ಮರಿದೇವರನ್ನೊಳಗೆ ಪುಗಗೊಡದೆ ನಿಲ್ಲಿಸಿದನು ॥೧೧॥

ಖಂದೆ ರಾವಣನು ಪರದಾರವನ್ನೆಳಸಿದೊಡೆ ।
ಬಂದಪುದು ದೋಷವೆಂದರಿದನೆ ಮಹಾಧರ್ಮ ।
ಸಿಂಧುವು ಯುಧಿಷ್ಠಿರನು ಜೂಜನಿಂ ಕೇಡೆಂಬುದರಿದನೇಂ ದಾಶರಥಿಯು ॥
ಅಂದು ಪೊನ್ ಮಿಗವಿಲ್ಲವೆಂಬುದೇನರಿದನೇ ।
ನಿಂದವನ ತಡೆದರೇನಪ್ಪುದರಿಯನೆ ಇವಂ ।
ಮುಂದಣ ವಿಪತ್ತಿಯೈತರ್ಪವಡೆ ಸರ್ವರಿಗೆ ಭ್ರಷ್ಟವಪ್ಪುದು ಬುದ್ಧಿಯು ॥೧೨॥

ಸಿಂಗವಂ ಬಡನರಿಯು ಸೆಣಸಿ ಬಾಳುವುದೆ ಬಿಡ-।
ದಿಂಗಳಿದಿರಿಂಗರಗು ನಿಲುವುದೆ ಪ್ರಭಂಜನನ ।
ಮುಂಗಡೆಯನಾಂತು ಹುಲುತಿರುಪಪುದೆ ಪೋರುವುದೆ ಸೂರ್ಯನೊಡನಾ ತಿಮಿರವು॥
ಖಂಗದೆ ಭುಜಂಗವು ವಿಹಂಗವರನಂ ಜರಿದು ।
ಕಂಗೆಡದೆ ಸುಖಿಸುವುದೆ ಸರ್ವಮಂಗಳೆಯರಸ-।
ನಂಗಗೊಂಡೀ ಮಹಿಮನುರೆ ಮಾನಭಂಗಗೈದಿವನಿಗೇನಪ್ಪುದರಿಯೆ ॥೧೩॥

ಮಾನಧನರತಿ ದೀನದಯರು ಮೋಣ್ಮಹಿಮರು ಮ–।
ಹಾನುಭಾವರುಮಿವರ ಮುಂದಣಾಯುಃ ಶ್ರೀಯು–।
ನಾನುವರು ಮಾನವರು ಬೀಳುಗಳೆದೊಡೆ ತಮ್ಮಕುಲಮೂಲ ನಾಶವಹುದು ॥
ಹೀನಕಾಷ್ಠಾಜಿನದೊಳಾದ ತಿದಿಯುಸುರ್ಗರೆಯು–।
ಲೇನೊರೆವೆನಾನದಂ ಸಪ್ತ ವಿಧಧಾತು ಪ್ರ ।
ತಾನವುಂ ಸುಡುಗುಮೆನೆ ಸಂತರುಸುರ್ಗರೆದೊಡೇನಾಗದೇ ಕುಲಲಯುವದು ॥೧೪॥

ಪೂರ್ವಸುಕೃತದ ಬಲದಿ ಕಾಮ್ಯ ನಿಷ್ಕಾಮ್ಯಗಳ– ।
ಪೂರ್ವತಪದಿಂ ನಿಗ್ರಹಾನುಗ್ರಹಜ್ಞಾನ ।
ಸರ್ವಸಂಪತ್ತಿಯುಂ ಪಡೆದ ಸತ್ಪುರುಷರಡಿದಾವರೆಯು ಪರಮೆವರಿಯು ॥
ಉರ್ವಿತಾನೆನಿಸಿ ಮೋಣವರೂಳಿಗವೆ ತನಗೆ ।
ಪರ್ವಮೆಂದರಿದ ನರನವನೆ ಧನ್ಯನು ಕಣಾ ।
ಶರ್ವನಭವನು ಶಂಭು ಪಾರ್ವತೀಶ್ವರನವನ ಬೆಂಬಲಂಗೊಂಡಿರ್ಪನಃ ॥೧೫॥

ಶ್ರೀ ಶಿವಜ್ಞಾನಿ ತಾನಡಿಯಿಟ್ಟ ಪೊಡವಿ ಶ್ರೀ ।
ಕಾಶಿಯುವನಂಘ್ರಿಜಲವಮರನದಿಗಿಂ ಮಿಗಿಲು ।
ಪಾಶರಹಿತನ ನುಡಿಯು ಮಂತ್ರರಾಜಕೆ ಪಡಿಯು ನಡೆದುದೇ ಗತಿಯು ಗಡಿಯುಂ ॥
ಆ ಶರೀರವು ಸಗುಣ ಸದ್ವಸ್ತುವಿನ ಹರವು ।
ಸಾಶಯದೊಳರಿಯೆ ತತ್ಕರುಣಾರ್ದ್ರ ಸುಕಟಾಕ್ಷ ।
ಲೇಶಮಾತ್ರವು ಸಾರಮೋಕ್ಷಪಾತ್ರವದೆನಲ್ ಜ್ಞಾನಿಮಹಿಮೆಯುದೆಂತುಟೋ ॥೧೬॥

ಇಂತು ಶಾಪಾನುಗ್ರಹಾಕ್ರಾಂತವರ್ಗದಿ ನಿ–।
ತಾಂತಮುಶ್ರಾಂತಮಾಶಾಪ್ರಾಂತ ವಿಶ್ರಾಂತ ।
ಕಾಂತಕೀರ್ತಿಯುನಾಂತ ಮಡಿವಾಳ ಮಹಿಮನಂ ಭ್ರಾಂತ ಬಾಪೂಸರ್ಜನು ॥
ತಾಂ ತಿರಸ್ಕರಿಸುತೊಳಪುಗಗೊಡದೆ ನಿಲ್ಲಿಸಲು ।
ಸಂತಮಡಿವಾಳ ಮರಿದೇವರಲ್ಲಿಯೋ ಕುಳಿತ ।
ನಂತವುರವೊಕ್ಕ ಪ್ರಭುಗುರುಗಳೀವಾರ್ತೆಯುಂ ಗೇಳ್ದರೆ ಕನಲ್ದೊರೆದರಿಂತು ॥೧೭॥

ಆಲಿಸಯ್ ಮಲಸರ್ಜ ಜಂಗಮದ್ರೋಹಮಂ ।
ಬಾಲಿಶನು ನಿನ್ನಣುಗನುನ್ಮತ್ತನೆಮ್ಮ ಮಡಿ ।
ವಾಳ ಬಾಲಕನೊಳಪುಗಗುಡದೆ ತಳ್ಳಿದನು ಕೆಡಗಾಲ ಬಂದುದ್ಯೆಸೆ ॥
ಶೂಲಪಾಣಿಯ ಭಕ್ತನಾ ಜಂಗಮಾರ್ಜನಾ ।
ಲೋಲನೆನಿಸಿದ ನಿನ್ನ ಸ್ನೆಪು ಸವೆದುದು ನಿಜವು ।
ಮೇಲುಮೈಮನ ಬಾಲನಿವನ ಪಳಿದುದರಿಂದ ತೀರಿತನ್ನದ ಭೋಗವು ॥೧೮॥

ಒರೆಯೆ ಕೇಳ್ದಾ ಮಲ್ಲಸರ್ಜನಾ ಪ್ರಭುಗುರುವಿ ।
ಗೆರಗಿ ಮೂರ್ಖನ ಸುತನ ಮಾತದೇಂ ಕ್ಷಮಿಸುವುದು ।
ಪರಮ ಕರುಣಾಕರನೆ ಗುರುವರನೆ ಪೊರೆಯೊ ನೀನೆಮ್ಮ ಮೊರೆಗೇಳೆನ್ನುತೆ ॥
ಮರಳಿ ಮನಗರಗಿ ಸಲೆ ಬೇಡಿಕೊಳೆ ।
ಗುರುವುಮೆಲ್ಲಿದೆಯನಾದೊಡು ತಾನು ಕಲ್ಲೆದೆಯ ।
ರೆರೆಯನಂತಾಗುತಾ ದೊರೆಯು ಮೊರೆವೋದುದಂ ನಿರುಕಿಸದೆ ಮುನಿದೇಳ್ದನು ॥೧೯॥

ನಡುಪೂರೊಳೊದೆದು ದೇವರಮನೆಯೊಳವನ ಕಾಲ್ ।
ವಿಡಿದಂತೆ ಮಹಿಮಾಂಬುನಿಧಿಯ ಗುಣಮಣಿಯ ।
ಮಡಿವಾಳಬಾಲನೊಳಪುಗಗುಡದೆ ಝುಂಕಿಸುತ್ತೌಂಕಿ ನೂಂಕಿಸಿ ಬೇಗನೇ ॥
ಅಡಿವಿಡಿದೊಡೇಂ ಮಾನದೊದವೆ ಬಕುತಿಯೆ ಪೇಳು ।
ಬಿಡುಬಿಡೇತರ ಮಾತು ಮಹಿಮರೊಳು ಸರಸವದು ।
ಕಡುವಿರಸಮಪ್ಪದೇನುಸುರು ನಿನ್ನರಮನೆಯು ಸೆರೆಮನೆಯದೆಮಗಪ್ಪುದು ॥೨೦॥

ಇನ್ನು ನಾವೆಂದುಮಡಿಯಿಡೆವಿಲ್ಲಿ ಕೇಳು ಕೇ ।
ಳೆನ್ನುತ್ತೆ ನಡೆಗೊಳಲ್ ನಡುಗಿಯಡಗೆಡೆದಖಿಲ ।
ರನ್ನು ನಿರುಕಿಸದೆ ದಯವಿರಿಸದವರೀರ್ವರುಂ ಮಠಕೈದಿದರು ಕನಲುತೆ ॥
ಪನ್ನಗನ ಪೆಡೆದುಳಿದಪರಿ ವಿರುಪ ತನಿಗೆಂಡ ।
ವನ್ನು ಮುಟ್ಟಿದ ಮಾಳ್ಕೆಯಂತೆ ಪೋಲಾ ದಿನವು ।
ಚೆನ್ನಮೆನಿಪರಮನೆಯು ಬನ್ನಕೊಳಗಾಗುತಂ ಮರುಳ್ವೊಕ್ಕ ಪರಿಯಾದುದು ॥೨೧॥

ಕ್ಷಿತಿಯೊಳುಚ್ಚಸ್ಥಿತಿಯು ಮೇಲ್ಮೆರಿಯುನ್ನೈಸಿರಿಯು |
ಪತಿಕರಿಸಿಕೊಂಡಿರ್ಪ ಮತಿಯುತನು ಸದನು ತಾ |
ನತಿ ಪೂಜ್ಯರನು ಮನದಿ ಕಡೆಗಣಿಸಿ ನಡಿದವರನತಿಗಳೆಯೆ ಗತಿಯುಪ್ಪುದೇ ||
ಶತಯಾಗಗಳ ಮಾಡಿ ಶತ ಕೋಟಿಫರನ ಪುರಿ |
ಗತಿರಾಗದಿಂ ನಡೆದಗಸ್ತ್ಯನ ತಿರಸ್ಕರಿಸೆ |
ಗತಿದಪ್ಪಿದಾ ನಹುಷನೃಪನು ಹೆಬ್ಬಾವಾಗಿ ಬಿನ್ನಬಡೆವನೀ ಕ್ಷಿತಿಯೊಳು ||೨೨||

ಆ ಗುರುಪ್ರಭುವರನ ಮಡಿವಾಳರೊಡಗೂಡಿ |
ಪೋಗಲರವುನೆಯರ್ಕನಸ್ತಗಿರಿಯತ್ತ್ಯೆದೊ |
ಡಾಗಳಾ ಹಗಲು ಕಾರಿರುಳಾಗಿ ಪರಿಣಮಿಪ ತೆರದಿ ಸಿರಿವನೆಯು ಬರಿವನೆಯಾದುದು ||
ಆಗುತಿರಲಾ ಮಲ್ಲಸರ್ಜನಿಗೆ ಘನಚಿಂತೆ |
ತಾಗಿ ಕೆಲಕಾಲದಲಿ ನಿಜರಾಜ್ಯಭೋಗವುಂ |
ರೋಗವೆಂದೆಣಿಸಿ ಬಾಳಿರಲಿತ್ತ ಮಡಿವಾಳದೇವಂಗೆ ಹರೆ ನೆರೆದುದು ||೨೩||

ಪಿರಿಯ ಹರೆಯದಿ ತಾನುಮಿಂದ್ರಿಯಂಗಳನೆಲ್ಲ |
ಸೆರೆಗೈದು ತವು ತವ್ಮ ರೂಪಾದಿವಿಷಯಗಳಿ |
ಗೆರಗದಂತನುಗೈದು ವಿಜಿತೇಂದ್ರಿಯತ್ವವುಂ ಜಗದೊಳಗೆ ಪರ್ಬಿಸಿರುವ ||
ವರಮಹಿಮನಪ್ಪ ಮಡಿವಾಳ ಮಾಚಿದೇವರಾ |
ಗುರುವರಪ್ರಭುಮಹಾಸ್ವಾಮಿಯಡಿಯೊಳಿಗವ |
ಗುರುಭಕ್ತಿಯಿಂದೊಡರಿಸಲ್ಕನರಾನುಗ್ರಹಕೆ ನೆರೆ ಪಾತ್ರರಾದರವರು ||೨೪||

ಇಂದ್ರಿಯಗಳಾರ್ಪನಾರ್ಪರಿಹರಿಸಲಾರ್ಪರೆನ- |
ಲಿಂದ್ರನುಂ ಚಂದ್ರನುಮುಪೇಂದ್ರನುಮಿತರ ದಿತಿಸು |
ತೇಂದ್ರರುಂ ತಾವಾರುಮಾರ್ಪರಲ್ಲೆನಲಿತರ ಮಾನವರ ಮಾತೇತಕೆ ||
ಚಂದ್ರಧರರೂಪನಿಗೆ ರುಂದ್ರ ಸದ್ಗುಣರತ್ನ |
ಸಾಂದ್ರ ಮಡಿವಾಳ ಮಾಚಿದೇವರಿಗೆ ಸಲೆ ನಿರ್ಜಿ |
ತೇಂದ್ರಿಯತೆ ದೊರಕೊಂಬುದೇನರಿದು ಲೋಕದೊಳಗವತಾರಿಗಿದು ಸಹಜವು ||೨೫||

ದೀಪದಸುರೂಪಾದ ರೂಪವುಂ ನೋಡೆರಗಿ ।
ತಾಪಗೊಂಡಳಿಯದೇ ಶಲಭವಳಿಗಂಧಕಸು ।
ಲೋಪಮಂ ಪಡೆಯದೇ ಮೀನವದು ರಸಕಸುವ ತ್ಯಜಿಸದೇನುಳಿಯಬಹುದೇ ॥
ಆ ಪರುಶನಕೆ ಗಜವು ಜೀವವುಂ ತೊರೆಯದೇ ।
ನಾ ಪುಲ್ಲೆ ಶಬ್ದಕ್ಕೆ ಹರಣವುಂ ಕಳೆಯದೇ ।
ನಾ ಪಂಚ ವಿಷಯದೊಳಗೊಂದೊಂದಕೊಂದೊಂದು ಮೋಹಗೊಂಡಸುಗಳೆವುವು ॥೨೬॥

ಏನೆಂಬೆನಂ ನಾನು ಹೀನ ವಿಷಯಗಳೆಲ್ಲ ।
ಮಾನವರೊಳೈದುವುಂ ಕೂಡಿರ್ಪವೆನಲವರ ।
ಮಾನವರ್ಥಪ್ರಾಣವುಳಿವುದಿಂತೆಂಬುದಿದು ಗಗನದಲರಂತಪ್ಪುದು ॥
ಮೌನಿಯಾಗಲಿ ಬಹುಲದಾನಿಯಾಗಲಿ ತಾನು ।
ಮಾನಿ ಸಮ್ಯಗ್ಜ್ಞಾನಿಯಾಗಲವರೆಲ್ಲರಂ ।
ಹಾನಿಗೀಡಾಗುವಂತೆಸಗುವೆಂದೊಡೆ ವಿಷಯದುಪಟಳವನೇಂ ಪೇಳಲಿ ॥೨೭॥

ವಿಷಕಿಂದ ವಿಷಯವದು ಮಿಗಿಲೆಂತೆನೆ ಪೇಳ್ವೆ ।
ವಿಷವದಾರ್ಸೇವಿಸುವರವರಸುವ ಗೊಳ್ವುದು ನಿ।
ಮಿಷಮಾತ್ರದೊಳಗಲ್ಲದಾ ಧ್ಯಾನದಿಂ ಪೋಣು ಸ್ಪರ್ಶನದಿ ಕೊಲಲರಿಯದು ॥
ವಿಷಯವದನಂತಲ್ಲ ಸ್ಮೃತಿಮಾತ್ರದಿಂದ ಮಾ-।
ನುಷನ ಹರಣಂಗಳೆವುದೆಂದೊಡೆಂತಿದರ ದು ।
ರ್ವಿಷಯತ್ವವನು ಜಗದೊಳಾರು ಬಣ್ಣಿಪರೊ ಗಡ ದೇವದಾನವನರರೊಳು ॥೨೮॥

ಆ ವಿಷಯವನು ತಾವು ಮಡಿವಾಳ ಮರಿದೇವ ।
ರೋವಿ ದುರ್ಮಲದಂತೆ ಕಂಡು ಮನದೊಳು ವಿರತಿ ।
ಭಾವಧರಿಸುತೆ ಪ್ರಭುಗುರುವರರ ಸೇವೆಯುಂ ಸಾವಧಾನದಿ ಗೈಯ್ವುತೆ ॥
ಭಾವಿನುತ ಪಾಂಡಿತ್ಯದಿಂದ ದಿಗ್ದೇಶದೊಳು ।
ಕೋವಿದ ಸಿರೋರತ್ನನೆಂದೆನಿಪ ಘನಕೀರ್ತಿ ।
ಯಾವರಿಸೆ ಸೊಗದಿಂದಲೆಸೆವ ನಿಜಮಠದೊಳಗೆ ಗುರುಸೇವೆಯೊಳಗಿರ್ದರು ॥೨೯॥

ಪಿಂದೆ ಪೇಳಿದ ಬಾಪುಸಾಹೇಬನತ್ತಣಿಂ ।
ಬಂದದೊದಗಿದಪಮಾನದಿಂದೀರ್ವರು ಮನಂ ।
ನೊಂದಿ ತಾವರಮನೆಗೆ ಪೊಗದಿರುತಿರ್ಪುದರಿದಾಗಳಾ ಜನರೆಲ್ಲರು ॥
ಎಂದುಮಿಲ್ಲದ ಕುಂದು ಬಂದುದಿಂದರಮನೆಗೆ ।
ಮುಂದಾವುದಾಪತ್ತು ಬಪ್ಪುದೋ ಮಹಾತ್ಮರಿಗೆ ।
ನಿಂದ್ಯೋಕ್ತಿಗಳನಾಡುತಪರಾಧಗೈದ ಪರವಂಶಲಯಮಿಂತೆಂದರು ॥೩೦॥

ಮಡಿವಾಳದೇವರೇಂ ಜಾವಳರೆ ಬಾಲ್ಯದೊಳ್ ।
ಕುಡಿವಭಾವಿಯಧುಮುಕಿ ಪೊಡವಿಯರಿಯದವೊಲು ।
ಕಡೆಗೈದಿ ನಿಂದಿರ್ಪುದುದನೂರಜನರೆಲ್ಲರರಿವರೇನಂತಲ್ಲದೇ ॥
ಬಿಡದೆ ಹಾವಿನ ಬಾಲವಿಡಿದು ತಾನೆಳೆದಾಡಿ ।
ಬಿಡಲಿಲ್ಲವೇಂ ಪೇಳಿರಿಂತಪ್ಪ ಮಹಿಮನಂ ।
ಕಡೆಗಣಿಸಿದೊಡೆ ದ್ರೋಹವದು ತಪ್ಪದೇನಂದು ಜಡಿದು ನುಡಿವರು ತವೊಳು ॥೩೧॥

ಪಂಡಿತನು ಮಡಿವಾಳ ಮರಿದೇವಶಿಷ್ಯ ಪ್ರ ।
ಮಂಡನನು ಭಕ್ತಿಯಿಂ ಮಾಳ್ಪ ನಿಜಸೇವೆಯಂ ।
ಕಂಡು ಪ್ರಭುಗುರುವರರು ಶುಭಮುಹೂರ್ತದೊಳಗವಗನುಗ್ರಹವ ಗೈದರವರು ॥
ದಂಡಿತೇಂದ್ರಿಯನವನು ಲಿಂಗಾಂಗತತ್ವದು ।
ದ್ದಂಡದನುಭವಗೊಂಡು ಮಂಡಲತ್ರಯದೊಳಿಹ-।
ಖಂಡಲಿಂಗವನಂತರಂಗ ಬಹಿರಂಗದೊಳು ಯಜಿಸಿದನು ಶಿವಯೋಗಿಯು ॥೩೨॥

ಇಂತು ಮಡಿವಾಳ ಶಿವಯೋಗಿ ಶಿವಲಿಂಗವನು ।
ಸಂತತಂ ಪೂಜಿಸುತೆ ಗುರುಸೇವೆಯೊಳು ತೊಡಗಿ ।
ಸಂತಸಂಗೊಂಡಿರ್ಪವಸರದೊಳು ತಾನೊಂದು ಯೋಚನೆಯ ಗೈದನೊಳಗೆ ॥
ಎಂತುಮಾದೊಡುಮುಳಿವಿ ಕ್ಷೇತ್ರಕೈದಲ್ವೇಳ್ಕು ।
ಮಿಂತರಿದು ಗುರುಗಳೊತ್ತಿಗೆ ಬಂದು ಬಿನ್ನವಿಸ ।
ಲಂತದಂ ಕೇಳಿ ಗುರುವರ್ಯರಾಣತಿಯೀಯಲೋರ್ವನೆ ಪೊರಟನವನು ॥೩೩॥

ಉರ್ವಿಯೊಳಗಖಿಲ ಸುಕ್ಷೇತ್ರಕಿಂ ಮಿಗಿಲಪ್ಪ ।
ಖರ್ವಪುಣ್ಯವನಾಗಿ ಪುಳುವಿಕ್ಷೇತ್ರಕ್ಕೆ ನೀ ।
ನೋರ್ವನೇ ಪೋಪುದಿದು ಭೀತಿಕರವೆಮಗೆ ಕೇಳ್ ಸಂಗಡಿಗರೊಡನೆ ಪೋಗೈ ॥
ಗುರ್ವಧಿಕನುಕ್ತಿಯಂ ಕೇಳಿ ಸದ್ಗುರುವೆ ನಾ ।
ನೋರ್ವನೇ ಪೋಪವೇಳ್ಕೆಂದು ನಿಶ್ಚೈಸಿರುವೆ ।
ಶರ್ವರೂಪನೆ ನೀನನುಜ್ಞೆಯಂ ಕೊಟ್ಟೆನ್ನ ಕಳುಪುದೆನೆ ಕಳುಹಿಸಿದನು ॥೩೪॥

ನೂರು ವರುಷದ ಹಿಂದಣುಳುವಿಕ್ಷೇತ್ರಕೆ ಪೋಪ ।
ದಾರಿಯೆಂಬುದೀಗಣ ಪೋಪವಾರಿಯದು ।
ಸಾರಿದೂರುವುದು ಬಲು ದುರವಗಾಹವವೆಂದು ಬಗೆಯುಲಾ ಕಾಲಕೆಂತೋ ॥
ಆರುಮಿಲ್ಲದೆ ಪೇಣು ಜಾತ್ರೆಯಿಲ್ಲದ ದಿನದಿ ।
ಧೀರ ಮಡಿವಾಳ ಶಿವಯೋಗಿಯುಳುವಿಯ ಪಥವ ।
ಸೇರಿ ತಾನಳ್ಕದಲೆ ನಡೆದಿಹನು ತಾನೆಂದೊಡವನೆಂತು ಕೆಚ್ಚೆದೆಯನೋ ॥೩೫॥

ಜಾತ್ರೆಯಿಲ್ಲದ ನಡುವೆ ಜನರ ಜಂಗುಳಿಗುಳುವಿ ।
ಕ್ಷೇತ್ರಕ್ಕೆದೊಡೆ ಹಿಂಸ್ರ ಮೃಗಗಳತ್ತಣ ಭೀತಿ ।
ಮಾತ್ರವಲ್ಲದೆ ಕಳ್ಳರುಪಹತಿಯುಮುಂಟೆಂದೊಡೋರ್ವನೆಂದುಂ ಪೋಗನು ॥
ಚಿತ್ರಮಿದು ಮಡಿವಾಳ ಶಿವಯೋಗಿ ತಾನಹೋ ।
ರಾತ್ರ ಪೋರ್ವನೆ ವನದಿ ನೋಡದಲೆ ಕೆಲಬಲವ ।
ಚಿತ್ರಕಾಯಾದಿ ಮೃಗದತ್ತಣಿಂ ಭಯಪಡದೆ ಪೋಗುವನು ಶಾಂತಮೂರ್ತಿ ॥೩೬॥

ಹಗಲು ಭೀಕರಮಪ್ಪ ಹಳುವಿನೊಳು ತಾನಿರುಳು ।
ಬಗೆಯೊಳರಿಯದಲೋರ್ವನೈತರುತ್ತಿರೆ ಕ್ರೂರ ।
ಮೃಗಗಳುಂ ಕೆಲದಾಣದೊಳಗಂದು ಮುದದಿಂದವನ ಮುಂದೆ ನಿಂದು ॥
ಹಗರಣದ ಸಾಕಿದಾ ಬೆಕ್ಕು ಜಾಯಿಲದಂತೆ ।
ನಗಜೆಯಾಣ್ಮನ ರೂಪನೆರಳಡಿಗಳಡಿಯಲ್ಲಿ ।
ಮಿಗೆ ಬಾಲವಲುಗಲ್ಕೆ ಪೊರಳಾಡುವವುಗಳುರೆ ಬೆನ್ನಮೇಲ್ಕೈಯಾಡಿಸಿ ॥೩೭॥

ಬಾಯೊಳಗೆ ಪಿಂಡಖರ್ಜೂರವನ್ನಿತ್ತು ಬಳಿ ।
ಕಾಯೋಗಿ ಪೋಗಿರೆನೆ ಪುಲಿಗಳೈದುವು ಚಿತ್ರ ।
ಕಾಯದಜಿನವ ಪೊದ್ದ ಶಿವನ ರೂಪನ ಚಿತ್ರಕಾಯಂಗಳೀಗೈಯ್ದುವು ॥
ಆ ಯೋಗಿಮಣಿಯಿಂತು ಮೃಗಗಳನ್ನುದ್ಧರಿಸಿ ।
ಸಾಯುಸದಿ ಮಾರ್ಗವಿಡಿದುಳವಿಯೊತ್ತಿಗೆ ಪೋಗಿ ।
ಶ್ರೀಯಮನಾಂತೆಸೆವ ಶ್ರೀ ಚನ್ನಬಸವೇಶ್ವರನ ದೇಗುಲದಿ ವಾಸಿಸಿದನು ॥೩೮॥

ಚಿನ್ಮೂರ್ತಿ ಚನ್ನಬಸವೇಶನೈಕ್ಯದ ಪದವು ।
ಕಣ್ಮನಕೆ ಮಂಗಲವನೀವುದೆಂದರಿದು ಸಂ ।
ಚಿನ್ಮಯನು ಮಡಿವಾಳ ಶಿವಯೋಗಿ ತಾನಲ್ಲಿ ಶಿವಲಿಂಗಪೂಜೆಯೊಳಗೆ ॥
ತನ್ಮಯನು ತಾನಾಗಿ ತಲ್ಲಿಂಗಸುಖಸಂಪ ।
ದುನ್ಮುಖನುಮೆನಿಸಿ ಕೆಲ ದಿವಸಗಳ ಕಳೆವುತ್ತೆ ।
ಸನ್ಮಹಿಮರಪ್ಪೆಲ್ಲ ಶರಣರಾವಾಸಮಂ ಕಂಡತ್ತಣಿಂ ಪೊರಟನು ॥೩೯॥

ಬಪ್ಪಸಮಯದೊಳ್ಳಿಗಲ್ಲಿಗಿಳಿವುತೆ ತಾನು ।
ಮುಪ್ಪುರವ ಸುಟ್ಟನಂಗವತೊಟ್ಟ ಶಿವಯೋಗಿ ।
ಯೊಪ್ಪದಿಂದೈತಪ್ಪುದಂ ಕಂಡು ಜನರೆಲ್ಲರಪ್ಪನಡಿಗೆರಗುತವರು ॥
ಕಪ್ಪುಗೊರಲನೆ ನಿನ್ನ ದರುಶನದೊಳೆಮ್ಮೊಳಿರು ।
ಶಿಪ್ಪ ಪಾಪವು ಪೋಗಿ ಮುಕ್ತರಾದೆವು ಗುರುವೆ ।
ತಪ ದಲೆ ಕೃಪೆಮಾಡಿ ರಕ್ಷಿಸೆಂದಲ್ಲಲ್ಲಿ ನುತಿಸಿದರು ಭಕ್ತಿಯಿಂದ ॥೪೦॥

ಗುರುವರ್ಯ ಚರಿಪುಗ್ರ ಶಾರ್ದೂಲಗಳು ನಿನ್ನ
ದರುಶನಂಗೊಂಡಂಘ್ರಿಯಡಿಯಲ್ಲಿ ಪೊರಳಾಡಿ
ಹುರಳಿ ತೆರಳಿದವೆಂದು ಕೇಳ್ದು ಕರ್ಣಾಕರ್ಣಿಕೆಯೊಳರಿದೆವೆಂದು ನಾವು ॥
ವರಗುರುವೆ ನಿನ್ನಹಿಂಸಾತತ್ವದಿಂದೊಗೆದ ।
ಪರಮ ಶಾಂತಿಯ ಕಂಡು ಹಿಂಸ್ರಮೃಗವಾದೊಡಂ ।
ಹರಮಹಿಂಸೆಯು ತಾಳ್ದುದೆಂದೊಡೆಂತಹುದೋ ಘನತರಮಹಿಮೆಯದು ಜಗದೊಳು
॥೪೧॥

ಇಂತು ಬಹದಾರಿಯೊಳಗಲ್ಲಲ್ಲಿ ಬಂಣಿಸುವ- ।
ನಂತ ಭಕ್ತೋತ್ತಮರ ಸಂತತಿಗೆ ಪರಕೆಯಿಂ ।
ಕಂತುಮರ್ದನರೂಪ ಮಡಿವಾಳಶಿವಯೋಗಿ ಮುಂತಿತ್ತು ಮುಂದೈದುತೆ ॥
ಅಂತರಂಗದೊಳಾತ್ಮಸದ್ಗುರು ಪ್ರಭುವಿನೋಂ ।
ರಂತೆ ಜಾನಿಸುತೆ ಕೆಲದಿವಸಂಗಳುಂ ಕಳೆಯೆ ।
ಕಾಂತವಹ ಕಿತ್ತೂರ್ಗೆ ಮಡಿವಾಳಶಿವಯೋಗಿಯೈತಂದನತಿಮುದದೊಳು ॥೪೨॥

ಬಂದು ಸದ್ಗುರುವಿನಡಿದಾವರೆಗೆ ಸೈಗೆಡೆಯು ।
ಲಂದವರುಮವನ ಬಿಗಿದಪ್ಪಿ ಕುಳ್ಳಿರಿಸಿ ಮುದ ।
ದಿಂದಲುಳುವಿಗೆ ಪೋಗಿಬಂದ ವಾರ್ತೆಯನು ಮನದಂದು ಕೇಳದರೆಲ್ಲವ ॥
ಅಂದಊರಮಂದಿ ಗುರುಮಡಿವಾಳರುಳುವಿಯಿಂ ।
ಬಂದುದಂ ಕೇಳಿಯೈತಂದು ಭಯಭಕ್ತಿಯಿಂ ।
ವಂದಿಸುತ್ತಡಿಗಡಿಗೆ ಕಳೆದ ತುರುವಂ ಕಂಡ ಕರುವಿನಂದದಿ ಕಂಡವೈ ॥೪೩॥

ಎಂದುಬಣ್ಣಿಸಿ ಮತ್ತಮಿಂತೆಂದರಾ ಜನರು ।
ತಂದೆಯುಳುವಿಗೆ ನೀನು ಬರಹೋಹ ಕಾಲದೊಳು ।
ಗಂದುಬಗ್ಗಗಳೊಗ್ಗು ನಿನ್ನ ಮೃದುಚರಣಾರವಿಂದದೊಳು ಬೀಳ್ದು ಪೊರಳೆ ॥
ಅಂದದಿಂ ಪಾಲವನ್ನಲುಗಿಸಲು ನೀನು ಕೈ ।
ಯಿಂದದಕೆ ಪಿಂಡಖರ್ಜೂರವನ್ನಿತ್ತುದಂ ।
ಮಂದಿಯಿಂ ಕೇಳ್ದೆವೆಂದೊಡೆ ನಿನ್ನ ಮಹಿಮೆಯನು ಪೊಗಳಲಸದಳವೆಂದರು ॥೪೪॥

ಚನ್ನಬಸವಪಶಾಸ್ತ್ರಿ ಕೊಳ್ಳಿರಂಗಾಚಾರ್ಯ ।
ರಿನ್ನು ವಿದ್ಯೆಯ ಪೇಳಲಮ್ಮೆವೀತನಿಗೆ ನಾ ।
ವೆನ್ನುತವನಂ ಕಾಶಿಗೈದಿಸಲು ಪ್ರಭುಮಹಾಗುರುಗಳಿಗೆ ಪೇಳ್ದರವರು ॥
ಮನ್ನಿಸುತೆ ವಿದ್ಯೆಯಾರ್ಜನೆಗೊಡಂಬಟ್ಟು ಗುರು ।
ತನ್ನ ವರಶಿಷ್ಯ ಮಡಿವಾಳದೇಶಿಕಮೂರ್ತಿ ।
ಯನ್ನು ವಾರಾಣಸಿಗೆ ಕಳುಹಿದರು ಮುದವೇರಿ ಸಕಲವಿದ್ಯಾಪ್ರಾಪ್ತಿಗೆ ॥೪೫॥

ಮತಿಯುತರು ಮಡಿವಾಳ ದೇಶಿಕೋತ್ತಮರಾಗ ।
ನತಿಗೈದು ಗುರ್ವನುಜ್ಞೆಯ ಪಡೆದು ಭರದಿಂ ಪ- ।
ವಿತ್ರವಹ ವಾರಾಣಸಿಗೆ ಬಂದು ಶಾಸ್ತ್ರಂಗಲಿತು ಮಿತಿಮೀರಿ ಮೆರೆದರವರು ॥
ಅತಿವಿದ್ಯೆಗಾ ತವರುಮನೆಯಾದ ಕಾಶಿಯೊಳು ।
ಪ್ರತಿಯಿಲ್ಲ ತನಗೆಂದು ಜಸವೆತ್ತು ಸಭೆಯೊಳಗೆ ।
ಪ್ರತಿಭಟಿಸಿದವರನ್ನು ಜೈಸಿದರು ಶಾಸ್ತ್ರದೊಳು ಬೆರಗುವಟ್ಟಿರೆ ಸರ್ವರು ॥೪೬॥

ಪಂಡಿತಾಖಂಡಲರ ತಂಡವದು ಕಾಶಿಯೊಳ- ।
ಖಂಡಪಂಡಿತ ಶಿರೋಮಂಡನನ ಗುರುವರನ ।
ಪಾಂಡಿತ್ಯಮಂ ಕಂಡು ಮಂಡೆಯಂ ತೂಗುತಿರೆ ಕೆಲದಿನಂ ಕಳೆದಬಳಿಕ ॥
ಖಂಡಪರಶುವಿನ ತನುಗೊಂಡ ಮಡಿವಾಳ ಘನ ।
ಪಂಡಿತರು ಕಾಶಿಯಿಂ ಪೊರಮಟ್ಟು ಕ್ಷೇತ್ರಗಳ ।
ಕಂಡು ಕಿತ್ತೂರಿಗೆ ಬರಲು ಪುರಜನರೆಲ್ಲ ಸಂಭ್ರಮದಿ ಕರೆತಂದರು ॥೪೭॥

ಶಿವಯೋಗಿಸಿದ್ಧನುರುತರ ಶಾಸ್ತ್ರಬುದ್ಧನುಂ ।
ಶಿವರೂಪಬದ್ಧನುಂ ಭವರೋಗವೈದ್ಯನುಂ ।
ಶಿವಯೋಗಿವರ್ಯನಾ ಮಡಿವಾಳದೇಶಿಕನು ಗುರುಭಕ್ತನಿತರನಾಗಿ ॥
ಶಿವಲಿಂಗಪೂಜೆಯೊಳು ಮನಮುಳುಗಿ ತಾನಿರ್ದು ।
ತವೆ ಭೂರಿಮಹಿಮೆಗಳನಂದಂದು ಬೀರುತಂ ।
ಭುವಿಯೊಳಿಂತಪ್ಪ ಮಹಿಮಾಸ್ಪದನನೆಲ್ಲಿನಾವರಿಯೆವೆಂದರು ಪೌರರು ॥೪೮॥

ಮನೆಯ ಮುಂದೆಡೆಯ ಕಂಗೊಳಿಪಂಗಳದ ಬದಿಯೊ ।
ಳಣುಗನೋರ್ವನು ತಾನು ಬಿನದಿಸುವ ಸಮಯದೊಳ ।
ಗಿನಿತಡಿಯ ಜಾರಿ ಕಾಲುವೆಯೊಳಗೆ ಬೀಳ್ವುದಂ ಕಂಡೆತ್ತುವನು ಪಾಂಥನು
ಜನನಿ ಗಿರಿಜಾದೇವಿ ಭವಸಾಗರದಿ ಬೀಳ್ದ ।
ತನಯನಾದೆನ್ನ ನೀನೆತ್ತದುಸಿಕನೆ ನೋಳ್ಪ ।
ದನುಚಿತವಿದೆತ್ತಿ ತಿಳಿ ಪೊಳೆಯಂಬೆಯೇನೆಂಬೆ ದಾರಿಗನ ತದುಪಕೃತಿಯ ॥೪೯॥

ಶ್ರೀ ಶಿವಾದ್ವೈತ ಪರವಿದ್ಯಾನವದ್ಯಾತಿ ।
ವೈಶದ್ಯ ವಿದ್ಯೋತಮಾನನ ಮಹಾಲಿಂಗ ।
ದೇಶಿಕ ಶಿಖಾಮಣಿಯು ಪಾಣಿಕಂಜಾತ ಸಂಜಾತನು ಕವೀಶ ಚರನು ।
ಆ ಸದಾಶಿವನೊರೆದ ಭೂಸದಾಶಿವನ ಯೋ ।
ಗೀಶನ ನಿರಾಶನ ವಿಪಾಶನುರು ಮಡಿವಾಳ ।
ದೇಶಿಕನ ಸುರುಚಿರ ಪುರಾಣದೊಳು ಮೂರನೆಯ ಕಾಶಿಗೈದಿದ ಸಂಧಿಯು ॥೫೦॥

ಅಂತು ಸಂಧಿ ಮೂರಕ್ಕಂ ಪದಂಗಳು ೧೯೩ ಕ್ಕಂ ಮಂಗಳಂ

ಶ್ರೀ ಶ್ರೀ

## ೪ನೆಯ ಸಂಧಿ

ಸೂಚನಾ :— ಪ್ರಭುದೇವರೈಕ್ಯವಾ ಮಲಸರ್ಜನಂತ್ಯವಿಧಿ |
ಯುಭಯ ಮಡಿವಾಳ ಗುರುವರರ ಸತ್ವಪರೀಕ್ಷೆ |
ಶುಭವ ಕುಡುವವಧಿಕಾರ ಸುವಿಚಾರವುಂ ಮೆರೆಯಲೊರೆವೆ ನಾನಿವನೆಲ್ಲವ ||

ಭಿಕ್ಷಾಟನಂಗೈದೊಡಿಷ್ಟಾರ್ಥದಾನದೊಳು |
ದಕ್ಷನಿಹೆ ಮೇಣು ನೀಂ ದಿಕ್ಕುಗೇಡಿಯಾರ್ದೊಡಂ |
ಕುಕ್ಷಿಯೊಳಗಿಟ್ಟಿರುವೆ ಸರ್ವಲೋಕಂಗಳನು ಕಾಮನಂ ಗೆಲ್ದಿರ್ದೊಡಂ ||
ಋಕ್ಷಪತಿ ಮುಖಿ ಮಂಡಿಸಿಹಳೂರುಮಂಡಲದಿ |
ವಕ್ಷದೊಳಗೆಲುಮಾಲೆಯಿಂದಶುಭನಾದೊಡಂ |
ಯಕ್ಷರಾಕ್ಷಸರೆಲ್ಲರಮರರ್ಕಳರ್ಚಿಪರು ಘನಮಹಿಮ ಶಿವ ಪಾಲಿಸಯ್ಯ ||೧||

ಪಲದಿನಂಗಳು ಕಳೆದನಂತರದೊಳೊಂದಿನವು ।
ಮಲಹರಾತ್ಮಕನಪ್ಪ ಪ್ರಭುದೇವರಂಗವೊಳು ।
ನೆಲಸಿದುದು ಬೇನೆ ದುಷ್ಪರಿಹರವದಾಗುತಿರಲಾ ಗುರೂತ್ತಮರಾಗಳೇ ॥
ಮಲಸರ್ಜದೇಸಾಯಿ ಮೊದಲೂರ ಮುಖ್ಯ ಜನ ।
ಕುಲವನೆಲ್ಲವ ಬರಸುತವರ್ಗಿಂತು ಪೇಳಿದರು ।
ಬಲಿದುವೆನ್ನಯ ಬೇನೆ ನಾನುಳಿಯೆನದರಿಂವ ನಿಮಗೊರೆವೆನೊಂದು ನುಡಿಯ ॥೨॥

ವಿರತಿಯಿಂ ಸದ್ಗುಣಪ್ರತತಿಯಿಂ ವಿದ್ಯೆಯಿಂ ।
ಸುರುಚಿರನು ಮಡಿವಾಳ ಮರಿದೇವನೀತನಂ ।
ವರಭಕ್ತ ಜನರೆ ಕೇಳಿರಿ ಬೇಗ ನೀವೆನ್ನತರುವಾಯ ಮಠಕೊಡೆಯನಂ ॥
ಭರದಿ ಗೈವುದು ಯೋಗ್ಯಮೇತಕೆನಲೆಮಗವನು ।
ಪರಣ ಸರಿ ಮುದ್ದು ಮಗನಾದ ಕತದಿಂದ ನೀ ।
ವುರುಮಹಿಮನವನ ಪಟ್ಟವಕಟ್ಟಿ ಮನಮುಟ್ಟಿ ಸುಖಪಟ್ಟು ವರ್ತಿಸುವದು ॥೩॥

ಒಲವಿನಿಂದಿಂತುಸುರಿ ದುರ್ಧರದ ಬೇನೆಯದು ।
ಬಲವಾಗುತಿರೆ ಲಿಂಗದೊಳಗೇಕತೆಯನಾಂತ ।
ರುರುತರದ ಶಿವಯೋಗತತ್ಪರರು ಚರವರರು ಗುರುವರರು ಪ್ರಭುದೇವರು ॥
ಮಿಲಿತರಾಗಿಪ್ಪೂರಜನರು ಮಲಸರ್ಜನುಂ ।
ಬಲು ದುಕ್ಕಗಡಲೊಳಗೆ ಬೀಳ್ದೇಳುತಿರಲು ಮಡಿ ।
ವಳದೇಶಿಕನುಮಾಗಳಳಲುರಿಯ ನಡುವೆ ತಾಂ ಶಿಲುಕಿ ಮುಲುಕುತೆ ॥೪॥

ದೇಸಾಯಿ ಮೊದಲಾದ ಜನರಜಂಗುಳಿಯೆಲ್ಲ ।
ಲೇಸಾದ ಶಾಸ್ತ್ರೋಕ್ತ ಪದ್ಧತಿಯ ಪೋಲ್ ಬೇಗ ।
ಭೂಸಮಾಧಿಯ ತೆಗೆಸಿ ಪೂರ್ಯೆಸಲಾ ಬಳಿಕ ಮತ್ತಲಾಲಿಂಗೈಕ್ಯನ ॥
ಭಾಸಿಸುವಲಂಕರಿಸಿದಾ ವಿಮಾನದೊಳಿರಿಸು ।
ತಾ ಸಮಯದೊಳು ಪೊಳಗೆ ಮಂಗಲವಾದ್ಯಗಳು ।
ಮಿಸಲದ ಭೂಸಮಾಧಿಗೆ ಪ್ರಣವಸಂಬಂಧಗೈದದರ ಮಧ್ಯದೊಳಗೆ ॥೫॥

ತಂದಿಳುಹಿ ಸರ್ವಾಂಗಲಿಂಗವುಯುಮೂರ್ತಿಯಂ ।
ಚಂವದಿಂ ಪೂಜಿಸುತೆ ಮಂಗಳಾರತಿಯೆತ್ತಿ ।
ಯುಂದು ಪುಷ್ಪಾಂಜಲಿಯ ಕೆದರಿ ಶಿವ ಹರಹರಾ ಪಾರ್ವತೀ ಪತಿಯೆನ್ನುತೆ ॥
ಮುಂದಿಯುದು ಮೂರ್ಕೋಣೆಯೊಳು ಲಿಂಗಮೂರ್ತಿಯಂ ।
ತಂದಿಟ್ಟು ಭಸ್ಮದಿಂ ಪತ್ರಂಗಳಿಂ ಮುಚ್ಚಿ ।
ಕಂದುಗೊರಲನ ಸ್ಮರಿಸಿ ಮತ್ತೆ ಮೇಲ್ಮಣ್ಣಿನಿಂ ಮುಚ್ಚಿದರು ಸುರಪಾಧಿಯ ॥೬॥

ಇಂತು ವಿಧಿಯಿರ್ದಂತೆ ಸಂತರೆಲ್ಲರು ಕೂಡಿ ।
ಮುಂತೆ ತತ್ಕಾರ್ಯಮಂ ತೀರ್ಚಿ ಸರ್ವರು ಜವದೊ ।
ಳಂತರಂಗದಿ ತಾವು ಪ್ರಭುದೇವರಂ ನೆನೆದು ತೆರಳಿದರು ತಮ್ಮ ಮನೆಗೆ ॥
ಸಂತಸದೊಳೀಗಳುಂ ಪ್ರಭುವರನ ಗದ್ದುಗೆಯು ।
ಚಿಂತಿತಾರ್ಥಂಗುಡುವುದೆಂದರಿದು ಸುಜನರೋ ।
ರಂತೆ ಭಕ್ತಿಯೊಳೆಲ್ಲರದನರ್ಚಿಪರು ಬಿಡದೆ ಮನವೊಸೆದು ಭಜಿಸುತಿಪರು ॥೭॥

ಇತ್ತ ಮಡಿವಾಳದೇವರೆಂಬ ಶಿಷ್ಯೋತ್ತಮರು ।
ಚಿತ್ತದೊಳು ಮುತ್ತಯ್ಯ ಹೆತ್ತಯ್ಯರೆನಿಪ ಗುರು- ।
ಸತ್ತಮನು ಮಡಿವಾಳಯೋಗಿ ಪ್ರಭುಗುರುವುಮಿವರೀರ್ವರಂ ಜಾನಿಸುತ್ತೆ ॥
ವಿತ್ತಲಂ ಪೋದಡಂ ಕುಳಿತೊಡಂ ನಿಂದೊಡಂ ।
ಪತ್ರಮಾಲಿಂಗಾರ್ಚನೆಯೊಳಾದೊಡಂ ತಾನು ।
ಬಿತ್ತರಿಪನವರನಜ್ಞಾಯೆಂದು ನುಡಿಯಿಂದ ಜಾಬಾಯೆನುತೆ ಮೋದದಿ ॥೮॥

ಇಂತು ಗುರುಭಕ್ತ ಮಡಿವಳ ದೇವರುಂ ತಾನು ।
ಸಂತತಂ ಗುರುನಾಮ ಸಂಸ್ಮರಣದಿಂ ಜಿಡದ- ।
ನಂತ ದುಃಖದ ಕಾಲಗಳೆವುತ್ತೆ ಕಲ್ಮಶದ ಸುವ್ಯವಸ್ಥೆಯನಮರ್ಚುತೆ ॥
ಅಂತವಿಲ್ಲದ ಲಿಂಗದರ್ಚನೆಯ ಗೈವುತ್ತೆ ।
ಕಂತುವಿನ ವಿಕೃತಿಗುರೆ ಪಕ್ಕಾಗದಲೆ ತಾನು ।
ಸಂತರ ಶಿರೋರತ್ನವೆಂದು ದಿಕ್ಪಾಂತದೊಳು ಪೊಸಜಸದಿನೆಸೆದಿರ್ದನು ॥೯॥

ಇತ್ತ ಮೇಣೊಂದು ಕಾರಣದಿಂದೆ ಮಲಸರ್ಜ ।
ರುತ್ತಮೋತ್ತಮಮೆನಿಪ ಪುಣೆಯ ಪೇಶ್ವೆಯರ ಬಳಿ ।
ಗೊತ್ತರದಿ ಪೋಗುತಂ ಕೆಲದಿನಂಗಳ ಮೇಲೆ ಬೇನೆಯಿಂದಲ್ಲೊರಗಲು ॥
ಮತ್ತೆ ತನ್ನೊತ್ತಿನೊಳು ಶಿವಲಿಂಗಸರ್ಜನಹ ।
ತತ್ತನೂಜನುಮಿರಲು ತನಗಾಗಳಡಸಿದಾ ।
ಕುತ್ತಿನೊಳಗಿಂ ಪಾರಗಾಣದಂತಾಗೆ ಪೇಶ್ವೆಯರುಮಾವಾರ್ತೆಯನ್ನು ॥ ॥೧೦॥

ಕಿತ್ತೂರಗ್ರಾಮಕ್ಕೆ ಕಳುಹಲದಗೇಳುತಂ ।
ಕಿತ್ತೆದ್ದು ದಾವೂರ ಪ್ರಮುಖರಹ ಬಹುಜನರ ।
ಮೊತ್ತವದು ಬೇಗನೇ ಪುಣೆಯ ಪಟ್ಟಣಕ್ಕೈದಿ ಕುತ್ತಡಸಿದೊಡೆಯನನ್ನು ॥
ಮುತ್ತಿ ನೋಡುತೆ ನಮಿಸಿ ತದ್ರೋಗರೀತಿಯನು ।
ಬಿತ್ತರಿಸಲಳವಲ್ಲವೆನುತಾಗ ಮರುಗುತ್ತೆ ।
ಚಿತ್ತದೊಳು ನೊಂದರಿದು ಪೇಶ್ವೆಯರು ಪೇಳ್ದಂತೆ ಮಗನ ಪಟ್ಟಕೆ ತೊಡಗಿತು ॥೧೧॥

ಸಿರಿಯಿಂದ ಹರೆಯಿಂದ ತನ್ನ ಮೈಸಿರಿಯಿಂದ ।
ವರ ಮಹಾಗುಣಗಳ ಸಮೂಹದಿಂ ಬುದ್ಧಿಯಿಂ ।
ಮೆರೆವನಾ ಸಂಸ್ಥಾನದಧಿಕಾರಕನುಗುಣನ ಶಿವಲಿಂಗಸರ್ಜನವನ ॥
ಸರಸತರ ಪಟ್ಟಕ್ಕೆ ಕುಳ್ಳಿರಿಸುತುತ್ಸವದಿ ।
ಹರುಷದಿಂ ಕಿತ್ತೂರ ಜನರಾಗ ತೆರಳಿದರು ।
ಪುರಕಾಗಿ ತಲೆಬಾಗಿ ಮಲಸರ್ಜನಗೆ ಬೇಗ ಪುಣೆಯ ಪಟ್ಟಣದತ್ತಣಿಂ ॥೧೨।

ಕೆಲದಿನಂಗಳ ಮೇಲೆ ಪೀಸಿನಸು ಪೋದಂತೆ ।
ತಲೆದೋರಲಾ ಮಲ್ಲಸರ್ಜನುಂ ಕಿತ್ತೂರ ।
ಪೊಳಲಕೈತಂದಾತ್ಮ ಮಂದಿರದದ್ವಾರಮಂ ಪುಗುವನಿತಕಸುವೋಗಲು ॥
ನೆಲದೊರೆಯನಸುವೋದುದರಿದೆಲ್ಲ ಪುರಜನರು ।
[illegible] ಮನನೊಂದು ದುಃಖಗಡಲೊಳು ಬೀಳ್ದು ।
ಬಲುವಿಲಾಪಿಸಿದರೆನೆ ಧರ್ಮಿಷ್ಠನಳಿವುತಿರಲಾರು ದುಃಖಿಸರಿಳೆಯೊಳು ॥೧೩॥

ಮಲ್ಲಸರ್ಜನ ಶಿವಾಧೀನನಾಗಲು ಬಳಿಕ ।
ಸಲ್ಲಲಿತ ಶಿವಲಿಂಗಸರ್ಜನೆಂಬಾತ್ಮಜನು-।
ಮೆಲ್ಲ ಸಂಸ್ಥಾನಮಂ ತಾನಾಳಲೆಲ್ಲರಿಗೆ ಮುದ್ದಾದನೈ ಸರ್ವದ ॥
ಪಲ್ಲವಿತ ಗುಣದಿಂದ ರೂಪದಿಂ ಮತಿಯಿಂದ ।
ಬಲ್ಲತನದಿಂ ತನ್ನ ತಾತನಂ ಜನಕನಂ ।
ನಿಲ್ಲದೇ ಮರೆಸಿದನು ಯುವರಾಜನಹ ಬಾಪ್ರಸಾಹೇಬನಾ ಕಾಲದೆ ॥೧೪॥

ಸೌಂದರ್ಯದಿಂದ ನಲಕೂಬರ ಜಯಂತ ವರ ।
ಕಂದರ್ಪರಂ ಪಳಿದು ಕ್ಷಮೆಯಿಂದ ಕ್ಷಮೆಯುಮಂ ।
ನಿಂದಿಸಿದರಾದಂಥತೆಯಿಂದ ಭೂಧರವನತಿಗಳೆದು ಬಲುಬಳೆದು ತಾ ॥
ಸಂದ ನಿಜ ಗಾಂಭೀರ್ಯದಿಂದ ಘನಸಿಂಧುವಂ ।
ಹಿಂದುಗಳೆದೌದಾರ್ಯದಿಂ ಕರ್ಣ ಭೂಪತಿಯು ।
ಮುಂದಕೀರ್ತಿಯ ಜರಿದು ಪೊಸ ಜಸವ ಪಸರಿಸುತೆ ಬಾಪುಸಾಹೇಬನಿವನು ॥೧೫॥

ಏವೇಳ್ವೆನಿತ್ತಮಾ ಕಲ್ಮಠದ ಮಡಿವಾಳ ।
ದೇವರನವರತಮಾ ದೇವನಹ ಶಿವಲಿಂಗ-।
ದಾ ವಿಮಲ ಪೂಜೆಯಂ ತೀರ್ಚಿ ತಲ್ಲಿಂಗಪ್ರಸಾದಮಂ ಸೇವಿಸುತಲಿ ॥
ಭಾವದೊಳು ಗುರುಯುಗ್ಮನಾಮವನ್ನಡಿಗಡಿಗ-।
ತೀವ ಘನಭಕ್ತಿಯಿಂ ನೆನೆದು ನುಡಿವುತ್ತೆ ಜನ ।
ರಾವಳಿಗೆ ಸದ್ಬೋಧಗೈವುತ್ತಮಾನಂದದಿಂದನಿಶಮಿರುತಿಪ್ಪರು ॥೧೬॥

ಇವರ ಪಾಂಡಿತ್ಯಕ್ಕೆ ಸರಿಗಟ್ಟುವವರಿಲ್ಲ ।
ಇವರ ಶಮದಮಶಾಂತಿ ಗುಣಗಣಕ್ಕೆದಿರಿಲ್ಲ ।
ಇವರೊಳಿಹ ಭೂತದಯುವಪಾರವಿವರಿಂದ್ರಿಯಂಗಳಿಗೆನಿತು ಸೋಲದವರು ॥
ಭುವನಾಂತರಾಳದೊಳಗಿಂತಿಪ್ಪ ಗುರುಭಕ್ತಿ ।
ಭಾವಸಂಬರಿತರರಿಯಲಿಕ್ಕಿಲ್ಲವದರಿಂದ ।
ಶಿವನೊಳೊಡಮೆರೆದ ಪ್ರಭುಗುರುಗಳಿವರನೆ ಗಡ ಪಟ್ಟಗಟ್ಟುವುದೆಂದರು ॥೧೭॥

ವಿವರಿಸಲ್ಕವರೆ ಗುರುವೆಂರೆದಂತೆ ಬೋಧಕರು |
ವಿುವರೆ ಕರುಣಾಭರಣ ಭೂಷಿತರು ಬಗೆಯೆ ಮೇ ।
ಣೆವರೆ ವಿರತಾಶ್ರಮಕೆ ಯೋಗ್ಯರಂತಲ್ಲದಾರನ್ಯರೊಳರೇ ಜಗದೊಳು ॥
ಇವರೆ ಭುವನೋದ್ಧರಣ ಕಾರ್ಯಾದ್ಯಕ್ಷರು ತಿಳಿಯು-।
ಲಿವರೆ ವಿಶ್ವದೊಳಿಪ್ಪ ವಿಶ್ವಜನಸಂಪೂಜ್ಯ ।
ರಿವರೆ ಕಲ್ಮಠದ ಪಟ್ಟಕೆ ಸರ್ವಥಾ ಯೋಗ್ಯರೆಂದೆಲ್ಲರಾಡುತಿಹರು ॥೧೮॥

ಅರಮನೆಯೊಳೆತ್ತಲುಂ ಸರ್ವಾಧಿಕಾರಿಗಳು ।
ವರಮಹಿಮರಪ್ಪ ಗುರುಮಡಿವಾಳ ದೇವರೇ ।
ವಿರತಾಧಿಕಾರಕ್ಕೆ ಯೋಗ್ಯರೆಂದರಿದಿಪ್ಪರಾ ಗುರುವಿನಾಜ್ಞೆಯಂತೆ ॥
ಪುರಜನರು ಮೊದಲುಗೊಂಡರಮನೆಯ ಜನರು ಕಡೆ ।
ಪರಿವಾರದ ನಿವಾರದನುರಾಗವೆಲ್ಲವುಂ ।
ಗುರುದೇವರಪ್ಪ ಮಡಿವಾಳ ದೇವರೊಳಗಿಪ್ಪುದೆನಲೆನಿತೊ ಮಹಿಮರಿವರು ॥೧೯॥

ಇಂತು ಸರ್ವಪ್ರಿಯರುವಾದ ಮಡಿವಳದೇವ ।
ರಂ ತಾನು ಬಾಪುಸಾಹೇಬನೋರ್ವನೆ ಅವರ ।
ನಂತರದಿ ಸಲೆ ಪ್ರೀತಿಸದೆ ವರ್ತಿಸುವನೊಳಗೆ ಸದ್ಗುಣಿಯಾದೊಡಂ ನಿರುತದಿ॥
ಅಂತರಿಕ್ಷದ ಮಣಿಯು ಸರ್ವದಿಕ್ಕ್ರಾಂತಮನ-।
ನಂತಃಕರಣಂಗಳಿಂ ಬೆಳಗುತೆಲ್ಲಾ ಪ್ರಾಣಿ ।
ಸಂತತಿಗೆ ಹಿತನಾದೊಡೊಂದಾದ ಘೂಕಂಗಹಿತನಲ್ಲವೇಂ ಬಗೆವೊಡೆ ॥೨೦॥

ಪರಿಶೀಲನದನೂನಬಲದಿಂದ ದುರ್ಘಟವು ।
ನೆರೆ ಘಟಿಪುದೆಂದೊಡಂ ನಿರಭಿಮಾನತೆಯೊಂದು ।
ಪರಿತರ್ಪ್ರದಘಟಿತವಿದೆಂದೊರೆವರಖಿಲರಿದು ಮನವರಿದ ಮಾತಲ್ಲವೆ ? ॥
ವರಶಾಸ್ತ್ರಪರಿಚಯವು ಪರತತ್ವದನುಭವವು ।
ವಿರತಿ ಪರಿಣತಿಯು ಮೋಣಣಿಮಾದಿ ಸಿದ್ಧಿಗಳು |
ಬರಬೇಹವೆಲ್ಲವಿವು ನಿರಭಿಮಾನತೆಯೊಂದದೆಂದೆಂದು ಬರಲಾರದು ॥೨೧॥

ಆದರಿಂದ ಶಿವಲಿಂಗಸರ್ಜನತಿ ವಿಖ್ಯಾತ ।
ಸದಮಲ ಗುಣಾನ್ವಿತನು ಜನಹಿತನುಮಾದೊಡಂ ।
ವಿದುರವಣಿ ವಿರತಿಖನಿ ಮಹಿಮನಿಧಿಯಪ್ಪ ಮಡಿವಾಳದೇವರಣಕ ನುಡಿಗೆ ॥
ಹೃದಯದೊಳಗಭಿಮಾನದಾಳಿ ಘನಮಹಿಮನಂ ।
ಪದುಳಗೊಳಿಸದೆ ಸೆಣಿಸಿನಿಂದಿರ್ಪವನ ಪ್ರೀತಿ-।
ಯದು ಮಹಾಮಹಿಮನಹ ಮಡಿವಾಳದೇವರೊಳಗೆಂತಿರ್ಪುದೈ ಪೇಳಿರಿ ॥೨೨॥

ರಾಜಸುತನಾಗಿಯುಂ ರಾಜಮುಖಿಲಸಿತನುಂ ।
ರಾಜ-ರಾಜನವೋಲು ರಂಜಿಸುವ ಸಿರಿಯಿಂದ ।
ರಾಜರಾಜನುಮೆನಿಸಿದೆನ್ನನಾ ಮಡಿವಾಳನೇಕ ವಚನದಿ ಕರೆವನು ॥
ರಾಜಸೂನುವಿನೆನ್ನ ನತಿಗಳೆದು ಮೇಣು ಯುವ ।
ರಾಜನಾಗಿರ್ಪೊಡೀಗಳುಮೆನ್ನನಾ ಮೂರ್ಖ ।
ರಾಜ ಮಡಿವಾಳನವನೆಣಿಸದಿಹನೆಂದು ಶಿವಲಿಂಗಸರ್ಜನು ನುಡಿವನು ॥೨೩॥

ಭೂರಿಸಂಪತ್ತೆಂಬ ಮಾದಕ ಪದಾರ್ಥಮಂ ।
ಮೀರಿ ಸೇವಿಸೆ ಬಳಿಕ ತನ್ನ ಮೈಮರೆದು ಮಲೆ ।
ತೀರಾಜಪುತ್ರಂಗೆ ಮಾನ್ಯ ಮಡಿವಳದೇವಮಹಿಮೆಯ ವಿಚಾರವೆಲ್ಲ ॥
ಧಾರುಣಿಯೊಳುನ್ಮತ್ತನೆಂತು ಬಡಬಡಿಸುವನೊ ।
ಆರೀತಿ ಗಳಹುವೀಬಾಪ್ಪುಸಾಹೇಬನಲಿ ।
ಸಾರಮಹಿಮಾಂಕ ಮಡಿವಾಳರ ವಿಷಯಕೆ ದುರಾಲೋಚನೆಯ ಗೈದನೊಂದು ॥೨೪॥

ವಿಜಿತೇಂದ್ರಿಯನು ಮೇಣು ರಜತಾದ್ರಿದಾಸನಪ ।
ದಿಜದಾಳಿದವನೆಂದು ಮಡಿವಳನ ಜಗದೊಳಗೆ ।
ಸುಜನರ್ಕಳೆಲ್ಲರನು ರಾಗದಿಂ ಬಣ್ಣಿಪರು ತಮ್ಮಳೊಳು ಮನಬಂದದಿ ।
ನಿಜವನರಿಯಲ್ವೇಳ್ಕುಮೆಂದೆನುತ ಯುವರಾಜ ।
ಭುಜಗಭೂಷಣಸಾಂಬನವಶಾರಿ ಮಡಿವಳರ ।
ಭಜಕ ಸುರತರುವರರ ಸತ್ವಮಂ ಸತ್ವರಂ ಪರಿಕಿಸಲು ತೊಡಗಿದನು ತಾ ॥೨೫॥

ಪೂರ್ವದುಷ್ಕರ್ಮ ಪರಿಪಾಕದಿಂ ಜಗದೊಳಗೆ|
ದುರ್ವಿಪತ್ತಿಯು ಸನಿಹವಾಗುತಿರೆ ಸರ್ವರಿಗೆ ।
ಸರ್ವಥಾ ದುರ್ಬುದ್ಧಿ ತಾಳ್ವುದೈದುಗುವೆಂದು ಪೇಳುವುದು ನೀತಿವಾಣಿ ॥
ಶರ್ವನವತಾರನಹ ಮಡಿವಳನ ವಿಷಯದೊಳ ।
ಗುರ್ವಿಮಾಡಿದ ದುರಾಲೋಚನೆಯದೀಗ ತಾ |
ಗರ್ವಿತ ಕುಮಾರನಹ ಬಾಪುಸಾಹೇಬನುರು ದುರ್ವಿಪತ್ತಿಗೆ ಬೀಜವು ॥೨೬॥

ಆದೊಡಂ ಮಡಿವಳನ ವಿಜಿತೇಂದ್ರಿಯತ್ವವಂ ।
ಹೋದದಿಂ ಕಾಣಲ್ಕಗವನಿಗಾಮಂತ್ರಣವ ।
ನಾದರದೊಳಿತ್ತು ನಿಜಮಂದಿರಕೆ ಕರೆದೊಯ್ದು ಬತ್ತಲೆಯಮಾಡಿ ಕುಳಿಸಿ ॥
ಆ ದೇವಕಾಮಿನಿಯರಂತೆ ಮೋಣ್ಮಸ್ಮಥನ |
ಕೈದುವಂತಿರ್ಪ ಸುಂದರಿಯರಿಂದುಣಬಡಿಸು ।
ತಾ ದಿವ್ಯಕಾಮಕಲೆ ತೋರ್ದಡಪಮಾನವಂ ಗೈದಟ್ಟಬಿಡುವೆನೆಂದು ॥೨೭॥

ಇದಕೊಡಂಬಡದವರ ನಾಂ ಬಲಾತ್ಕರಿಸಿ ಬಹು ।
ಮೃದುಪೀಠದೊಳಗವರನೆಲ್ಲರಂ ಕುಳ್ಳಿರಿಸಿ ।
ಮಧುರತರ ಭಕ್ಷ್ಯಭೋಜ್ಯಾದಿ ಸುಪದಾರ್ಥದಿಂದಣಿಯರಂ ತಣಿಗೊಳಿಸುತೆ ॥
ಮದನ ಕಲೆಯಂ ನಾನು ನೋಡದೇ ಬಿಡೆನೆಂದು ।
ಹೃದಯದೊಳಗಣ ಮಾತನಾರಿಗುಂ ತಿಳಿಗುಡದ ।
ಲದರ ಹಂಚಿಕೆಯಲ್ಲಿ ಬಾಪುಸಾಹೇಬನಿರುತಿರ್ದನಾ ಯುವರಾಜನು ॥೨೮॥

ಒಂದುದಿನ ಶಿವಲಿಂಗರುದ್ರಸರ್ಜನು ತಾನು |
ಹಿಂದೆ ಯೋಚಿಸಿದವೋಲಿಂದೊಪಟ್ಟ ಚರ ।
ವೃಂದಕಾಮಂತ್ರಣಗುಡಲ್ಕಟ್ಟಲೋರ್ವನವನಂ ಬಿನ್ನಹವ ಮಾಡಿಬರಲು
ಚಂದದಿಂ ಬೇರೋರ್ವನನ್ನು ಕಲ್ಮಠಕಟ್ಟ ।
ಲಂದವನು ಮಡಿವಾಳದೇವರಿಗೆ ಸಾಷ್ಟಾಂಗ |
ದಿಂದ ವಂದನೆಗೈದು ಬಿನ್ನಹವನೆಸಗಲವರೆಂದರಾಗಲ್ಬಾರೆವೆಂದು ॥೨೯॥

ಅದನೊರೆಯೆ ಬಾಪುಸಾಹೇಬನರಿದೊಳಗೊಳಗೆ ।
ಮದಿಸಿ ಮುನಿದೊಡು ಮೇಲೆ ತೋರಿಸುತೆ ಭಕ್ತಿಯಂ ।
ಸದಮಲರ ಕಲ್ಮಠಕೆ ತಾನೆ ಬಂದಾಗ್ರಹದಿ ಬಿನ್ನಹಂ ಗೈದನೆರಗಿ ॥
ವಿದುರಮಣಿ ಸರ್ವಜ್ಞಮೂರ್ತಿ ಮಡಿವಾಳಗುರು ।
ಮೊದಲವನ ಕೌಟಿಲ್ಯವರಿದೊಡು ಜ್ಞಾನದಿಂ-।
ದದ್ಭುತದ ಲೀಲೆಯಂ ತೋರವೇಳ್ಕೆಂದವಗೆ ನಡೆಭೋಜನಕೆ ಬರ್ಪೆನು ॥೩೦॥

ತನ್ನಕಜ್ಜವದೀಗ ಕೈಸಾರ್ದುದೆಂದ್ಬೈದೆ ।
ಬಿನ್ನಹಂ ಕೈಕೊಂಡ ಪಟ್ಟಚರಮೂರ್ತಿಗಳು ।
ಮುನ್ನೊರೆದ ಪೊಳ್ತಿಂಗೆ ಕರೆಯಬರೆ ಬಂದರವರರಮನೆಯ ಭೋಜನಕ್ಕೆ ॥
ಸನ್ನುತರು ಮಡಿವಾಳ ಗುರುವರರು ಮುಂ ತಾವು ।
ಮುನ್ನ ಪೇಳ್ದಂತೆ ಬರಲವರೆಲ್ಲ ಮೂರ್ತಿಗಳು ।
ಸನ್ನದ್ಧರಾದರ್ಯೆ ತಂತಮ್ಮ ಸ್ನಾನಶಿವಪೂಜಾದಿ ಕಾರ್ಯದೊಳಗೆ ॥೩೧॥

ಸ್ನಾನ ಶಿವಪೂಜೆಗಳು ಮುಗಿವುತಿರಲಾಬಳಿಕ ।
ಹೀನಮನದಾ ಬಾಪುಸಾಹೇಬನೈತಂದು ।
ಮಾನಯುತ ಚರಮೂರ್ತಿಗಳಿರೆ ಭೋಜನಗೃಹಕೆ ನಡೆಯಿರೈ ಸರ್ವರಲ್ಲಿ ॥
ಏನೇನು ಬಟ್ಟನಿತು ಬಟ್ಟೆಮ್ಮಗಿರದೆ ಕಾ ।
ಹೀನಮದನುಳಿದೀಗ ಬತ್ತಲೆಯರಾಗುತೆ ನ ।
ವೀನವಹ ಕೋಮಲದ ಸುಳಿಬಾಳೆಯೆಲೆಯ ಮೇಲ್ಕುಳಿತೆಲ್ಲರೀಗುಣುವುದೈ ॥೩೨॥

ಇಂತಿದಕ್ಕಾರೊಡಂಬಡದಿರ್ಪೊಡವರನಾ ।
ನೆಂತಾದೊಡಂ ಬಿಡೆನು ಕೇಳಿರೆನಲವರಾಗ ।
ಭ್ರಾಂತರಾಗುತ್ತಮೋರೋರ್ವರಂ ನೋಡುತ್ತೆ ನಿಂದರೈ ಸ್ತಬ್ಧರಾಗಿ ॥
ಮುಂತಿದಂ ತಿಳಿದಿರ್ದೊಡೈದುವೆವೆ ನಾವಿಲ್ಲಿ ।
ಗೆಂತೀಗಬುದು ಮರ್ಯಾದೆಯಂ ಕಳೆದುಕೊಂ ।
ಡಂತಾಯ್ತಿದೇನು ಗತಿಯೆನುತೆ ದುಗುಡುಗೊಂಡು ಭಯಗೊಂಡು ನಿಂದರಾಗ ॥೩೩॥

ಪಾರಮೇಶ್ವರ ರೂಪನಾಂತ ಮಡಿವಾಳಗುರು ।
ವಾ ರಾಜಸುತನ ಕಟುವಾಕ್ಯವನು ಕೇಳಿ ತಾ ।
ಭೂರುದ್ರರಹ ಪಟ್ಟಚರಮೂರ್ತಿಜಂಗಮರೆ ಯುವರಾಜನಾಡಿದುಕ್ತಿ ॥
ಬೇರಿಹುದು ನಿಮಗಲ್ಲವೆನಗಾಗಿ ನುಡಿದಿಹನು ।
ಭೂರಿಚಿಂತಾಕ್ರಾಂತರಾಗದಿರಿ ಶಾಂತರಿರಿ ।
ತೋರುವೆನು ಲೀಲೆಯೆನುತಾತ್ಮಕೌಪೀನವನು ಬಿಸುಟು ಬತ್ತಲೆಯಾದನು ॥೩೪॥

ಮನಕೆ ಮುಸುಕಿರ್ದ ಮಾಯಾಮೋಹವಸ್ತ್ರವನು ।
ತನು ಮೊದಲು ಜಗವು ಕಡೆಯಾದ-ದೆಲ್ಲವು ಮಿಥ್ಯೆ ।
ಘನವಸ್ತುವೊಂದೆ ಸತ್ಯವು ಸತ್ಯವಿಂತೆಂಬ ಮಿನುಗುವರಿವಿನಹಸ್ತದಿ ॥
ಇನಿತುಳಿಯದಂತೆ ಕೀಳ್ತೊಗೆದ ಘನಮಹಿಮಂಗೆ ।
ತನುಮೋಹವಿರದಂಗೆ ತನುವಸನದಾಸೆಯೇ ।
ಸನುದಿವಸವೊಳಹೊರಗೆ ವಸ್ತ್ರವಿಲ್ಲದ ಮಹಿಮಗೆತ್ತಣಾ ಕೌಪೀನವು ॥೩೫॥

ತನುಭಾನವಿಲ್ಲದಿರಲಂಶುಕದ ಹಂಗೇಕೆ ।
ಮನದ ಜಂಜಡವೋಗಿ ಘನಶುದ್ಧಿ ನೆಲಸೆ ಪಾ ।
ವನವೆನಿಸಿ ಮೆರೆವತೀರ್ಥದ ಗೊಡವೆ ತನಗೇಕೆ ಸತ್ಯವಿರೆ ತಪವೇತಕೆ ॥
ಘನವಿರತಿಸಂಪದಕ್ಕಿತರ ಸಂಪತ್ತೆಣೆಯೆ ।
ಜನವರಿಯಲದ್ವೈತಸುಖಕಿತರ ಸುಖವುಂಟೆ ।
ಕನಸಿನಂತೀ ಜಗವನಂದ ಮಡಿವಾಳರಿಗೆ ಲಂಗೋಟಿ ಬೆಲೆಯಪ್ಪದೇ ॥೩೬॥

ಈ ಮಹಿತ ಮಡಿವಾಳಗುರು ದಿಗಂಬರನಾಗಿ ।
ಕೋಮಲದ ನಲ್ಬಾಳೆಯೆಲೆಯ ಮೇಲ್ ಕುಳ್ಳಿರ ।
ಲ್ಕಾ ಮಿಕ್ಕ ಜಂಗಮರುಮೇನೊಂದು ಮತಿತೋಚದಲೆ ಕುಳಿತರ್ಬೆ ಬತ್ತಲೆ ॥
ಭೂಮಿಪಸುತಂ ಬಾಪುಸಾಹೇಬನವನು ತಾಂ ।
ನೇಮಿಸಿದ ಪೆಣ್ದೊತ್ತುಗಳನೆಲ್ಲರಂ ಸುರರ ।
ಕಾಮಿಸಿಯರಂತಿರ್ಪರಂ ಬಿಡದೆ ಸಿಂಗರಿಸಿ ನೀಡಲಪ್ಪಣೆಯ ಕೊಡಲು ॥೩೭॥

ವಾಣಿಯರಸನು ಸ್ವರ್ಗನಾರಿಯರ ರೂಪವಂ ।
ಪೂಣದೆಲ್ಲಂ ತಾನು ಸಂಗಳಿಸಿ ಸವೆದಂತೆ ।
ಡಾಣೆಯರು ಗುರುತರಶ್ರೋಣಿಯರು ಭುಜಗನಿಭವೇಣಿಯರು ಮೆರೆದರವರು ॥
ಹೋಣು ರತಿಯಾ ಸರಸ್ವತಿಯು ಮಾಸತಿಯು ತಾವ್ ।
ಕಾಣರಿಂತಪ್ಪ ರೂಪವನೆಂಬ ಮಾಳ್ಕೆಯಿಂ ।
ಮಾಣದಿಂತೊಪ್ಪುತಿರ್ಪೇಣನೇತ್ರೆಯರಾಗಳೊಯ್ಯಾರದಿಂ ಬಂದರು ॥೩೮॥

ಕಡೆಗಣ್ಣ ಕಾಂತಿಯಿರೆ ಕುಡಿಮಿಂಚು ಮುರಿದಂತೆ ।
ಕಡುಬಿಣ್ಪನಾಂತ ಬಲ್ಮೊಲೆಗಳು ಕದಕ್ಕದಿಸೆ ।
ಬಿಡದೆ ಪ್ಮೈಗಂಧ ಕಡರ್ವಳಿಮಾಲೆಯೆಂಬಂತೆ ಚೂರ್ಣಕುಂತಲಗಳೆಸೆಯೇ ॥
ಅಡಿದಾವರೆಯೊಳಿರ್ಪ ಪರಿವೇವರಿಗಳ ಬಿಂಬ ।
ಉಡುಗದಾ ರವದಂತೆ ಕಾಲಂದುಗೆಯು ನುಡಿಯೆ ।
ನಡುಬಳ್ಕಿ ರಸತುಳ್ಕೆ ಬಂದರಾ ಸುಂದರಿಯರಂದು ನೀಡಲು ಪ್ರೇಮದೀ ॥೩೯॥

ಆದು ಗೋವಿಂದನಾ ಸುಂದರೀಮಣಿಯಾಗಿ ।
ವೃಂದಾರಕರ ವೃಂದಕಮೃತವಂ ನೀಡಿದಂ-।
ತಿಂದಿಂದು ಮುಖಿಯರತಿ ಶೃಂಗಾರರಸಚೇಷ್ಟಿಯಿಂದ ನೀಡುತಿರ್ಪರು ॥
ಕಂದುಗೊರಲನ ರೂಪ ಪೊಂದಿದೀ ಮಡಿವಾಳ ।
ತಂದೆ ಲಿಂಗಾನಂದದಿಂದ ತುಂದಿಲನಾಗಿ ।
ಮುಂದೆ ನಿಂದಿಹ ಮಂದಗಾಮಿನಿಯರಂದವಂ ಕಣ್ದೆರೆದು ನೋಡಲಿಲ್ಲ ॥೪೦॥

ಕಿವಿಯಿರ್ದುಮವರ ಮಧುರೋಕ್ತಿಯಂ ಕೇಳಲಿ ।
ಲ್ಲವು ಚಿತ್ತಮಿರ್ದೊಡಂ ಸ್ಮರಿಸಲಿಲ್ಲವು ತಾನು ।
ಯುವತಿಯರ ಪ್ಮೈಯನರುಗಂಪಿಗಾತನ ಮೂಗು ತವೆಯಿರ್ದುಮಿಲ್ಲದಾಯ್ತು ॥
ಸ್ತವಯೋಗ್ಯವಹ ಭಾವಮಿರ್ದುಮಾ ಸುದತಿಯರ ।
ವ... ...ಗಳ ಭಾವಿಸವು ।
ಭುವನದೊಳಗಿದು ಚಿತ್ರಮೆನಲ್ಕಿವೆಲ್ಲವುಂ ಮುಳುಗೆ ಲಿಂಗಾನಂದದಿ ॥೪೧॥

ಸಚ್ಚಿದಾನಂದಮಯ ಲಿಂಗದಾನಂದದೊಳ-|
ಗೊಚ್ಚತಂ ಬೆರ್ಚಿಯುಪರತಿಯಾಂತ ಮಹಿಮಂಗೆ ।
ಹೆಚ್ಚು ಕುಂದೆಂಬ ಭಾನವದುಂಟೆ ಪೊರಗಣಾ ವ್ಯವಹಾರವರಿತಿರ್ಪರೇ ||
ನಿಚ್ಚಮಿಂದ್ರಿಯಗಳುಂ ಬಾಹಿರ ವ್ಯವಹೃತಿಯೊ ।
ಳೆಚ್ಚರವದಿಲ್ಲದಾಂತರಗೋಚರಂಗರೊಳು |
ಬೆಚ್ಚಿನೆಚ್ಚಿರಲು ಕಣ್ಮುಚ್ಚಿ ಕಣ್ದೆರೆದರೇನು ವಿರತನಿಗಾವ ಸೋಂಕು ||೪೨||

ಬೋರ್ಗಲ್ಲಮೇಲೆ ಬಲ್ಸರಿ ಸುರಿಯಲಾ ಕಲ್ಲು |
ನೀರ್ಗುಡಿವುದೇಂ ಲಿಂಗಭೋಗೋಪಭೋಗ ಸಂ-|
ಸರ್ಗದಾನಂದದೊಳು ಮಗ್ನನಹ ಮಡಿವಾಳರಿವರ ಚೇಷ್ಟೆಯ ನೊಳ್ಪರೇ ||
ಭರ್ಗಘನಪೂಜನಾಂತರ್ಗತನು ಶುಕನಂದು ।
ಸ್ವರ್ಗರಂಭೆಯ ನಿರರ್ಗಳದ ಶೃಂಗಾರಗಳ |
ವರ್ಗದೊಳಗೊಂದನಾದೊಡಮಂ ನೋಡಿದನೆ ಯೋಗಿಗೆ ವಿಷಂ ಭೋಗವು||೪೩||

ಬೇಟವೆರಸಿದ ತಮ್ಮ ನೋಟವೆತ್ತಲು ಹರಿಯೆ |
ಬೇಟಗಾರ್ತಿಯರಾಗಳಟಕೆಡೆಮಾಡಲು ಲ |
ಲಾಟನೇತ್ರನ ಸ್ಮರಿಸುತುಣುತಿರ್ದರಾ ಪಟ್ಟಚರಮೂರ್ತಿಗಳು ಕೆಲಬರು ||
ಉಟ್ಟುದುದಮಂಬರವ ಬಿಟ್ಟಿರ್ಪೆವೆಂದು ಮನ ।
ಮುಟ್ಟಿಲಜ್ಜಿತರಾಗಿ ಮೊಗವ ಕೆಳಗಿಟ್ಟುಣುವ ।
ರುಟ್ಟುದುದ ನೆನೆಯದ ಕೆಲಂಬರಾ ಸುಂದರಿಯರುಟ್ಟುದನೆ ನೆನೆದುಣುವರು ।೪೪।

ಭೋಜನವ ತೀರ್ಚಿ ನರುದಾದಂಬುಲವ ಕೈಕೊಂಡು ।
ಮಾಜದೆಲ್ಲರುಮಾತ್ಮವಸ್ತ್ರಂಗಳಂ ಗ್ರಹಿಸಿ |
ರಾಜಪುತ್ರನು ಕೊಟ್ಟ ದಕ್ಷಿಣೆಗಳಂ ವಹಿಸಿ ಪೋದರಯ್ ತಮ್ಮ ಮಠಕೆ ||
ರಾಜಧರನವತಾರಿಯಾದ ಮಡಿವಳಯೋಗಿ |
ರಾಜನದ್ಭುತ ಲೀಲೆಗೈದು ಕೂಡಿದ ಜನಸ |
ಮಾಜವದು ಬಣ್ಣಿಸೆ ವಿರಾಜಮಾನಾತ್ಮಮಠಕೋಜೆಯಿಂದೈತಂದನು ||೪೫||

ಇತ್ತಲಾ ಬಾಪುಸಾಹೇಬನೂಟದನಿಲಯು ।
ಕೊತ್ತರದೊಳ್ಕೈತರುತ್ತೈಳೆ ಬಾಳೆಯೆಲೆಗಳಾ !
ಪೊತ್ತವಂ ನಿರುಕಿಸುತೆ ಮುಂದೆ ಬನೆ ಮಡಿವಾಳಯೋಗಿವರನೊಂದೆ ಎಲೆಯು ||
ಎತ್ತನೋಡಲು ದೋಷದತ್ತ ಪ್ರಗದಿನೆ ಕಂಡು !
ಚಿತ್ತದೊಳು ಬೆರಗುವಟ್ಟಾ ಮಹಾಮಡಿವಳಗು ।
ರೂತ್ತಮರ ಸದ್ಬ್ರಹ್ಮಚರ್ಯವನು ಕಂಡೊಡಂ ದುರಭಿಮಾನವ ತ್ಯಜಿಸನು ॥೪೬॥

ಕಾಮಧೇನುವಿನನ್ನು ಹೋಮಧೇನುವಿನಂತೆ ।
ದ್ಯೋಮಹಿತ ವೃಕ್ಷಮಂ ಭೂಮಿಭೂರುಹದಂತೆ |
ನೇಮದಿಂ ಚಿಂತಿತಂ ಗುಡುವ ಚಿಂತಾಮಣಿಯು ಸಾಮಾನ್ಯ ಕಲ್ಲಿನಂತೆ ॥
ಪಾಮರನು ತನ್ನ ಮೂರ್ಖತೆಯಿಂದ ಕಾಂಬುವ್ರೋ-।
ದಾ ಮಹಿಮನಂ ಯೋಗ್ಯ ಸದ್ಬ್ರಹ್ಮಚಾರಿಯಂ |
ಸಾಮಾನ್ಯ ನರನಂತೆ ಬಗೆದಿರ್ಪನೆಂದೊಳಗೆ ತಿಳಿಯಲಿಲ್ಲಭಿಮಾನಿಯು ॥೪೭॥

ಬೊಮ್ಮಾಂಡವೆಲ್ಲಮಂ ಬೇಗಿ ತೋಳ್ಪರ್ಕನಿಗೆ ।
ಗಮ್ಮನೇ ಮಿಂಚುಪ್ರುಳು ನಿಜಕಾಂತಿ ತೋರ್ಪಂತೆ ।
ಸುಮ್ಮನೇ ಒದನರಿಯು ಸಿಂಗದೊಡನಾ ಮಲ್ಲಗಾಳಗವ ಮಾಡುವಂತೆ ||
ದಿಮ್ಮಿದರ ಮಡಿವಳರ ಬ್ರಹ್ಮವರ್ಚಸವನ್ನು ।
ಹಮ್ಮಿನಿಂ ನೋಡಿದೆನಗೇನಪ್ಪುದೋ ಯೆನು ।
ತ್ತುಮ್ಮಳಿಸದಿರ್ಪವನು ದುರಭಿಮಾನದೊಳಿರ್ದನೆನಿತಿನಿತೊ ದೈವಗತಿಯು ॥೪೮॥

ಹಲಿಯ ಮಾಸೆಯು ಸೆಳೆವೃತುಯ್ಯಲವನೆಸಪಂತೆ-|
ಹೂಲು ಸರ್ಪಫಣೆಯಿಂದ ಕೆನ್ನೆಯಂ ತುರಿಸಿದಂ-|
ತೊಲದಗ್ನಿಕಿಡಿಯಿಂದ ನವಿರತೊಡರಂ ಬಿಡಿಸಿಕೊಂಬಂತೆ ಲೋಕದೊಳಗೆ ॥
ಸಲುವ ಮಹಿಮರಗೂಡ ಸರಸವಾಡಿದರೆ ಮಡಿ-।
ಲೊಳಗೆ ಸುಂಣರಲಿಗೊಂಡಿರದೆ ಮಡುಬೀಳ್ವ ಗಾ ।
ವಿಲನ ಪರಿಯುಪ್ಪದಂನೊರೆದ ಬಸವೇಶ್ವರನ ನುಡಿಗೆ ಪಡಿನುಡಿಯಾಯಿತ್ತದು ॥೪೯॥

ಇಂತು ಮಡಿವಳಗುರುವಿನುರುಮಹಿಮೆಸತ್ವವೋ ।
ರಂತೆ ಕಣ್ಣಾರೆ ತಾಂ ಕಂಡೊಡಮುಸೂಯೆಯುದು ।
ಮುಂತಿನಂತಾ ಬಾಪ್ರಸಾಹೇಬನೊಳು ಬಳಿಮದೇನೆಂಬೆ ದುಷ್ಕರ್ಮವ ॥
ಕಂತುಪರನಂತಿರುವನಂತ ಮಹಿಮಾಬ್ಧಿಗುರು ।
ಕಾಂತನಹ ಮಡಿವಾಳ ಶಿವಯೋಗಿ ಸುಖಿಯಾಗಿ ।
ಸಂತತ ಶಿವಾರ್ಚನಾಪರನಾಗಿ ಲಿಂಗಾನಂದದವೊಳಗಿರುತಿರ್ಪನು ॥೫೦॥

ನಿತ್ಯವೇದಾಂತವನು ಭೋಧಿಸುವನೆಂತೆನಲು ।
ಸತ್ಯವೈ ಬ್ರಹ್ಮವದು ಮಿಥ್ಯೆದೃಶ್ಯವು ಜಗವು ।
ಪ್ರತ್ಯಗಾತ್ಮನು ತಾನು ಜ್ಞಾನೋಪಹಿತನ ಮಲಮಾಯೋಪಹಿತನೀಶನು ॥
ಇತ್ಯವಿದ್ಯೋಪಾಧಿಯುಹನು ಜೀವನು ಮತ್ತ ।
ಮತ್ಯಧಿಕನವಗುಣಾನ್ವಿತನು ತನ್ನನು ತಾನೆ ।
ಪ್ರತ್ಯಕ್ಷಮರಿದೊಡಾತನೆ ನೋಡೆ ನಿರುಪಾಧಿ ನಿರ್ದ್ವಂದ್ವನನಘನಹನು ॥೫೧॥

ಈ ತೆರದಿ ವೇದಾಂತ ಸಿದ್ಧಾಂತ ಲಿಂಗಾಂಗ ।
ಸಾತಿಶಯ ತತ್ವವನ್ನಾವಾವ ಜನಗಳಿಗೆ ।
ಪ್ರೀತಿಯಿಂದರುಪಲವರೆಲ್ಲರಿವರೊಳು ಬಿಡದೆ ಪ್ರೀತರಾದರು ಸರ್ವದಾ ॥
ಪೂತರಾದಿವರ ವಿಖ್ಯಾತಿಗೆಲ್ಲರು ಕೂಡಿ ।
ಮಾತನಾಡಿದರು ಪ್ರಭುಗುರುವರರ ತರುವಾಯು ।
ಮಾತದೇಂ ಪಟ್ಟಾಧಿಕೃತಿಗಿವರೆ ಭಾಜನರು ಬೇರಾರುಮಿಲ್ಲವೆಂದು ॥೫೨॥

ನಿಗಮಾಗಮೋಪನಿಷದಾದಿ ವಾಕ್ಯಗಳೆಲ್ಲ ।
ಪೊಗುಮಿಗೆಯಿನಾವಗಂ ನಿನ್ನಿರವ ಪೊಗಳ್ವ ನಂ-।
ಬುಗೆಯಿಂದ ಹಗಲಿರುಳು ಬಗೆಬಗೆದು ಪೊಗಳಿದರು ಸಿಗಲಿಲ್ಲ ನಿನ್ನಿರವದು ॥
ಜಗದೊಳಗೆ ಹಗರಣಿಗರೊಳು ಹಗರಣಿಗನೆನಗೆ ।
ನಗಸುತೆಯೆ ನಿನ್ನಿರವದೆಂತು ದೊರಕುವದೆಂದು ।
ಸೊಗಸುಡುವ ನಿನ್ನ ನಾಮವನೆ ಪೊಗಳ್ವೆನು ಬೇಗ ಕೃಪೆಯಾಗು ನೀಂ ಗೌರಿಯೆ ॥೫೩॥

ಶ್ರೀಶಿವಾದ್ವೈತಪರ ವಿದ್ಯಾನವದ್ಯಾತ್ಮಿ ।
ವೈಶದ್ಯ ವಿದ್ಯೋತಮಾನನ ಮಹಾಲಿಂಗ |
ದೇಶಿಕಶಿಖಾಮಣಿಯ ಪಾಣಿಕಂಜಾತ ಸಂಜಾತನು ಕವೀಶ ಚರನು ॥
ಆ ಸದಾಶಿವನೊರೆದ ಭೂಸದಾಶಿವನ ಯೋ ।
ಗೀಶನ ನಿರಾಶನ ವಿಪಾಶನುರುಮಡಿವಾಳ ।
ದೇಶಿಕನ ಸುರುಚಿರ ಪುರಾಣದೊಳು ನಾಲ್ಕನೆಯ ಸತ್ವಮಾ ಕಂಡಸಂಧಿ ॥೫೪॥

ಅಂತು ಸಂಧಿ ನಾಲ್ಕಕ್ಕಂ ಪದಂಗಳು ೨೪೭ ಕ್ಕಂ ಮಂಗಳಂ
ಶ್ರೀ ಶ್ರೀ

# ೫ನೆಯ ಸಂಧಿ

ಸೂಚನೆ:— ಶಿವಲಿಂಗರುದ್ರಸರ್ಜನು ತನ್ನ ಮತ್ಸರದಿ ।
ಶಿವರೂಪ ಮಡಿವಾಳದೇವರಿಗೆ ತದಧಿಕಾ ।
ರವನು ತಪ್ಪಿಸಲು ತಾಂ ಗಂಗೆಯುದಕದನೆವದಿ ಕಳುಹಿದನು ಕೌಶಿಗವನ ॥

ಪ್ರಾಗಣ್ಣನೇಣ್ಗಣ್ಣ ಮೈಗಣ್ಣರಿವರಿಂದ ।
ಮೇಗಳುಂತ್ರುಳಿಲೆಗ್ಗೊಂಬನಿಗೆ ಮರುಳ್ಗಳಾ ಪತಿಗೆ ।
ಸೋಗೆಮುಡಿಯುಳ ಸರ್ವಮಂಗಳೆಯರಮಣಂಗೆ ತಿಂಗಳನ ಸೂಡಿದಂಗೆ ॥
ಭೋಗಿಭೂಷಣಗೆ ಕರಿಗೊರಲನಿಗೆ ಶಂಭುವಿಗೆ ।
ಮೂಗಣ್ಣನಿಗೆ ಶಿವನಿಗಭವನಿಗೆ ಗಿರಿಶನಿಗೆ ।
ಜೋಗಿಪಡೆಯೊಡೆಯನಿಗೆ ಸಾಂಬನಿಗೆ ಬೇಗದಿಂ ಮಣಿವೆ ನಾನನುರಾಗದಿ ॥೧॥

ನಿತ್ಯ ಮರೆ ಬರಿಗವರು ನೀತಿಯುಂ ರೀತಿಯುಂ ।
ಪ್ರತ್ಯಹಂ ಕೆಲಬರಿಗೆ ಧರ್ಮದುರು ಮರ್ಮವನು ।
ಪ್ರತ್ಯಗಾತ್ಮನು ಜೀವ ಪರಮಾತ್ಮರೆಂಬಿವರ ತತ್ವವನು ಕೆಲಬರಿಗೆ ॥
ಸ್ತುತ್ಯಮಹ ಲಿಂಗಾಂಗದೇಕತೆಯು ಪಲಬರಿಗೆ ।
ಮಿಥ್ಯೆಯೀ ಜಗದುದಯವೆಂದು ಪಲಜನಕಿಂತು ।
ಪ್ರತ್ಯಯವು ನೆಲೆಗೊಳಿಪ ಪಾಂಗಿನಿಂದದರುಪುವರು ಜನಕೆಲ್ಲ ಗುರುರಾಯರು ॥೨॥

ಇಂತಿವರ ಬೋಧಕ್ಕೆ ಮಹಿಮಕ್ಕೆ ತಿಳಿವಿಂಗೆ ।
ಸಂತಸದಿ ಬೆರಗಾಗಿ ಜನರೆಲ್ಲರೀಮಠಕೆ ।
ಶಾಂತರಿವರಲ್ಲದಿನ್ನಾರೊಳರೆ ಪ್ರಭುಗುರುಗಳೊರೆದಂತೆ ಮಠಕೆಸೆವರು ॥
ಕಂತುವಿನ ಸುಟ್ಟನವತಾರಮಂ ತಾಳ್ದಂಗೆ ।
ಭ್ರಾಂತಿರಹಿತಂಗೆ ಘನಕರುಣಾಂತರಂಗಂಗೆ ।
ಶಾಂತಂಗದೆಂದಪ್ಪುದೀ ಮಠಕ್ಕಧಿಕಾರವೆಂದೆತ್ತಲುಂ ನುಡಿವರು ॥೩॥

ಇತ್ತಪೊಡನಾಡಿಗರ ಮೊತ್ತಮದು ಪತ್ತಿರ-।
ಕ್ಕೊತ್ತರಿಸಿ ಸಾರ್ತಂದು ಬಾಪುಸಾಹೇಬನಿಗೆ ।
ಚಿತ್ತೈಸುಜೀಯು ನಾವೊರೆದುದೆಲ್ಲವನೀಗ ಮರೆಯುವೀ ಮಾತಲ್ಲವು ॥
ಎತ್ತನೋಡಿದೊಡಮೂರತ್ತ ಜನಗಳಗುಂಪು ।
ಚಿತ್ತಜಾರಿಯ ರೂಪವೆತ್ತ ಮಡಿವಾಳಗುರು ।
ಸತ್ತ್ವಮಂಗಧಿಕಾರವೆಂದಪ್ಪುದದ ನಾವು ಕಣ್ಣಾರೆ ಕಾಣ್ಬೆವೆಂದೋ ॥೪॥

ಎಂದಿಂತು ಸಡಗರದೊಳಲ್ಲಲ್ಲಿ ಈಪೂರ ।
ಮಂದಿಯುದು ಕನವರಿಸುತಿದೆ ನೋಡು ನೃಪಕುವರ ।
ಮೊದಮತಿ ಮಡಿವಳನಹಂಕಾರಿಯುಂ ನಿನ್ನ ಹಿಂದುಗಳೆವನ ನುತಿಪುದು ॥
ಮುಂದೇನುಗತಿ ಯಾತನಿಲ್ಲ ಕಿತ್ತೂರಲ್ಲಿ ।
ನಿಂದೊಡೆಲ್ಲವು ಕೆಟ್ಟು ಪೋಪುದೊಡೆಯಾ ಕೇಳು ।
ಸಂದೆಗವನುಳಿದು ಮುಂದೇಗೈವುದೆಂಬುದಂತಳುವದೆಸಗೈ ಪ್ರಭುವರಾ ॥೫॥

ಊರುಪ್ರೊಂದಾಗಿ ಮಾಡುವದೇನು ಕೇಳಿರೈ |
ನೂರು ಮಾತೇಕೆ ಬಿಡಿರಾರೇನು ಮಾಳ್ಪರೈ |
ಮೂರು ಕಣ್ಣಿನ ಶಿವನು ಬರಲಿ ನಾಂ ಮಡಿವಳಂಗಧಿಕಾರಗೊಡೆನೆಂದಿಗೂ ||
ಕ್ರೂರನು ದುರಾಚಾರಿಯುವಿಚಾರಿ ಭೂಭಾರಿ |
ಭೂರಿಕೋಪಕೆ ವಾರಿನಿಧಿಯಾದ ಮಡಿವಳನು |
ಸಾರವುಳಕಧಿಕಾರಕರ್ಹನೆಂತಹದವನ ನೂರ ಬಿಡಿಸುವದುಚಿತವು ||೬||

ಜೀಯ ಕೇಳ್ ಪೊರಗೆ ಗುಣಿಯೊಳಗೆ ದುರ್ಗಣಿಯವನು |
ಕಾಯು ಜಾರಿಯು ಪೊರಗೆ ಮಾಯಾವಿ ತಾನೊಳಗೆ |
ಬಾಯುವಾತಿನ ಜಾಣನವನು ಪೊರಗೊಳಗೆ ಬಲು ಮಡಿವಳನು ದುಷ್ಕಪಟಿಯು ||
ರಾಯ ಗುರುರ್ವಾನೆ ಕೇಳ್ ಪೊರಗಣಾಡಂಬರದಿ |
ನಾಯತೀಶ್ವರನಂತೆ ಜನರ ಪ್ರೇಮಾಂಬುವಿಗೆ |
ತೋಯನಿಧಿಯಾಗಿ ತೋರ್ಪನು ಜನರು ಮರುಳರೈ ಸಾಂಬನೆಂದರಿದಿಪ್ಪರು ||೭||

ಆರ್ಜವದಿ ಪರಹಿತವನಾರ್ಜಿಸುತೆ ನಿಜಹಿತವ |
ವರ್ಜಿಸಿದ ಸುಜನರೊಳಗೀರ್ಷೆಯಿಂ ಮತ್ಸರದಿ |
ದುರ್ಜನನು ತನ್ನ ದುರ್ಗುಣಗಳಾ ರೋಪಣವನೆಸಗಲೇಂ ಕುಂದುಪ್ಪುದೇ ||
ನಿರ್ಜರರ ತಣಿಗೊಳಿಪ ತನ್ನ ಮೃತಕಲೆಗಳಿಂ |
ಧೂರ್ಜಟಿಯು ಪೊಂದಿಳೆಯು ಬೆಳಗುವಾ ಚಂದ್ರನಾ |
ಗರ್ಜಿಸುತೆ ವಿರಹಿ ಕಾಂ ನಿಂದಿಸಿದೊಡಿಂದುವಿಗೆ ಬಂದಪುದೆ ಕುಂದವಂಗೆ ||೮||

ಘುಸಣಿಗೊಳ್ಳುತೆ ಮುಸಗಿ ಮಲಿತನ್ನರಂಪಳಿವ |
ಪಿಸುಣರ್ಕಳಾ ಚರ್ಮಚಕ್ಷು ವಿರ್ಗಿರಿವತಿರೆ |
ವಸುಮತಿಯನುದ್ಧರಿಪ ಜ್ಞಾನಿಗಳ ಜ್ಞಾನಸಾಕ್ಷಿಗುಣವೆಂತು ಬಪ್ಪುದದಕೆ ||
ಮಿಸುಪಮಣಿಗಸ್ಪೃಕ್ಕೆ ಹರಳಕಲ್ಲೆಂತೆಂಬ |
ಪೆಸರೊಂದೆಯಾದೊಡಂ ಶಿಲೆಯು ಶಕಲವು ಜಗದಿ |
ಮಿಸುಪ ಜ್ಞಾನಿಗರನ್ನ ದುನ್ನತಿಗೆ ಪಾಸಟಿಯುದೆಂತಹದು ಬಗೆವೊಡಿಲ್ಲಿ ||೯||

ಚರ್ಮಚಕ್ಷುಗಳಪ್ಪ ಪಿಸುಣರ್ಗೆ ತಾನುದು |
ಷ್ಕರ್ಮಿಯುಹ ಬಾಪುಸಾಹೇಬನೆಂದನು ಕೇಳಿ |
ಮಾರ್ಮಿಕದ ಮಾತೊಂದನಾಲೋಚಿಸಿರುವೆನಾನೊರೆಯದಿರಿ ನೀವಾರಿಗೂ ||
ಕೂರ್ಮೆಯಿಂ ಮಡಿವಳನ ಕರೆದು ನಿಮ್ಮಧಿಕೃತಿಯ |
ಪೇರ್ಮೆಗಾ ಗಂಗಾಂಬುತರವೇಳ್ಕುಮಿಂತೆಂದು ।
ನರ್ಮೋಕ್ತಿಯಿಂದವನ ಕಳುಹಿ ಕಾಶಿಗೆಯೋರ್ದಗಧಿಕಾರಗುಡತಕ್ಕುದು ॥೧೦॥

ಇದನೊಳಗೆ ಯೋಚಿಸಿಹೆನೆನೆ ತಕ್ಕು ತಕ್ಕುದೆಂ |
ದದಕವರ್ಪಿಸುಣರನುಮೋದನಂಗುಡೆ ಬಳಿಕ
ಮೆದುರಿಲ್ಲ ತನಗಾರುಮೆಂದರಿದಹಂಕಾರಿ ಬಾಪುಸಾಹೇಬನಾಗ ॥
ವದನದಿಂದೊಗೆತರಲ್ಕಟ್ಟಹಾಸವು ಮತ್ತೆ ।
ಮುದಿತಾಂತರಂಗನಾಗಿಂದೆನ್ನ ಕಾರ್ಯಮದೊದ ।
ಮೊದಗಿತೆಂದೊಡನಾಡಿಗರು ಮೆರಸು ನಿಜಗೃಹಕೆ ಪೋದನೈತೊಡೆಮೊಯ್ಯುತೆ ॥೧೧॥

ಪಿಂದೆ ಯೋಚಿಸಿದ ಹಂಚಿಕೆವೆರಸು ನೃಪಕುವರ ।
ನೊಂದುದಿನ ಮಡಿವಾಳಯೋಗಿಯುಂ ಕರೆಕಳುಹಿ |
ವಂದಿಸುತೆ ಕೈಮುಗಿದು ಮುಂದೆನಿಂದುರು ಭಕ್ತಿ ದೋರಿತಾನಿಂತೆಂದನು ॥
ಚೆಂದವಹ ಶುಭಮುಹೂರ್ತವು ಬರಲು ನಾವೆಲ್ಲ ।
ರೊಂದಾಗಿ ನಿಮಗೆ ಪಟ್ಟವ ಕಟ್ಟತೊಡಗಿಹೆವು |
ತಂದೆ ವಿಧ್ಯುಕ್ತ ಮಪ್ಪಧಿಕಾರಮುಂ ತಮಗೆ ಗೌರವವದೆಂದರಿವೆವು ॥೧೨॥

ಅದು ಕಾರಣಂ ಶುದ್ಧಗಂಗಾದಿ ತೀರ್ಥಮಂ ।
ಸದಮಲಾಚಾರ ಸಂಪನ್ನನೇ ತರವೇಳ್ಕು ।
ಮದರಿಂದಲಾತಪ್ಪರಾರಿಲ್ಲ ಗುರುರಾಯ ನೀವೆ ತಂದೊಡೆ ಯೋಗ್ಯವು ॥
ಚದುರತನನಿಂ ನುಡಿಯಲದಗೇಳಿ ಶಿವಯೋಗಿ ।
ಮದವಿಶಿಷ್ಟನ ಮಾತನಂತರದೊಳರಿದಡಂ ।
ಬೆದರದಲೆ ತಾನರಿಯದವನಂತೆ ನೃಪಕುವರ ತಹೆ ನಾನೆ ತೀರ್ಥಾಂಬುವ ॥೧೩॥

ಎನಲು ತನಗನುಕೂಲವುಪ್ಪುಕ್ತಿಯಂ ಕೇಳಿ ।
ಜನಪಸುತ ಬಾಪುಸಾಹೇಬನಂದೊಳಗೊಳಗೆ ।
ನೆನೆದ ಹಂಚಿಕೆಯು ಮಡಿವಾಳನೆಂತರಿವನೆಂದುತ್ಸಾಹದಿಂ ಕುಣಿದನು ॥
ಅನಿಬರಾ ಪಿಸುಣರುಂ ಮನದಿ ಹಿಗ್ಗುತೆ ಮಡಿವ ।
ಳನ ವಂಚಿಸಿದೆವೆಂದು ಕರವೊಯ್ದು ಕುಣಿಕುಣಿದು ।
ಮನದಭೀಪ್ಸಿತವಿಂದು ನೆರವೇರಿದುದು ಬಳಿಕವೆಮಗಾರು ಸರಿಯೆಂದರು ॥೧೪॥

ಕರ್ಮಸಾಕ್ಷಿಕನಾದ ಸೂರ್ಯನಿಗೆ ತೋರಿಸದೆ ।
ಕರ್ಮವೆಸಗಿದೆನೆಂದು ಪೇಳ್ವ ನುೂರ್ಖನತೆರದಿ ।
ಶರ್ಮನಿಧಿಸರ್ವಜ್ಞರಪ್ಪ ಮಡಿವಾಳರಂ ವಂಚಿಸಿದೆವೆಂದರವರು ॥
ಧರ್ಮಗುರುಮಡಿವಳರ ಮರ್ಮವರಿಯದಲೆ ದು ।
ಷ್ಕರ್ಮನಿವಹದೊಳ್ನಾವೆ ಬೀಳ್ದೆವೆಂದವರ ಪ್ರಾ ।
ಕ್ಕರ್ಮಬಲದಿಂದೊಳಗೆ ತಿಳಿವಿನುವಯವು ತೋರಲಿಲ್ಲವಂದೆಲ್ಲರಿಗದು ॥೧೫॥

ಭಾನುವಿನ ಕಣ್ಣೊಳಗೆ ಮಣ್ಣೆರಚಲಾ ಮಣ್ಣ -।
ದೇನವನ ಕಣ್ಣೊಳಗೆ ಬೀಳ್ವುದೆಂ ಬಿಡು ತನ್ನ ।
ಯಾ ನಯನದೊಳು ಬೀಳ್ಗುವೆಂಬ ನಾಣ್ಣುಡಿಯಂತೆ ಹೀನಮನದವರೆಲ್ಲರು ॥
ಸ್ವಾನುಭವಿ ಮಡಿವಾಳಯೋಗಿಯುಂ ವಂಚಿಸಿದೊ ।
ಡೇನಹುದು ವಂಚನೆಯ ಫಲವು ತಮಗಪ್ಪುದಯ್ ।
'ಹೀನಮತಿ ತತ್ಫಲನುಣಲು ಹೊಣೆಯಾಗಿರಲು ಕಳೆಯಲನಾರಾಪರು ॥೧೬॥

ಇತ್ತ ಮಡಿವಾಳಗುರು ಸರ್ವಜ್ಞನಾದೊಡಂ ।
ಮತ್ತರಹ ಬಾಪುಸಾಹೇಬ ಮೊದಲಾದವರ ।
ಪೊತ್ತಪಬು ತನ್ನತ್ತ ಕಳುಹಿ ಚೇರೋರ್ವಗಿರದಿತ್ತ ಪಟ್ಟಂಗಟ್ಟಿಸಿ ॥
ಚಿತ್ರರಿಪ್ಪಾಡಂದ ದ ಚಿತ್ರದೊಸೆಗೆಯೊಳಿರ್ಪ್ಪ ।
ದುಸ್ತಮವಿದೆಂಬ ವಂಯುಕ್ತಿಯನು ತಿಳಿದೊಡಂ ।
ಕುತ್ಸಿತದಗಿ ಮೋಣವರು ದುರ್ವಿಪತ್ತದಕೆ ಕೊಂಡಿರಲೆಂದು ಸುಮ್ಮನಿರ್ದಂ ॥೧೭॥

ಲೋಕದೊಳು ವಿಷವನ್ನು ತಿಂದು ಜೀವಿಪರುಂಟೆ ।
ಭೀಕರದ ಪುಲಿಯು ಪಲ್ಲಿಣೆಸಿ ಬಾಳಿಪರುಂಟೆ ।
ಶೂಕರದ ಗೋಣ್ಣುದ್ದ ಪ್ಪುಳವ ಕೀಳ್ತು ಬದುಕಿದವರುಂಟೆಯೀಲೋಕದೊಳಗೆ ॥
ಶ್ರೀಕರನು ಘನತರಕೃಪಾಕರನು ಪ್ರವಿಮಲ ಚಿ ।
ದಾಕರನುಮೆನಿಪ ಮಡಿವಳನ ನೆರೆಯಟ್ಟಿ ತಾವ್ ।
ಆಕುಮಾನವರಪ್ಪ ಬಾಪುಸಾಹೇಬಮೊದಲಾದವರು ಸುಖಿಯಪ್ಪರೇ ॥೧೮॥

ಗುರುವರರು ಭಾಷೆಗೊಟ್ಟಂತೆ ವಾರಾಣಸಿಗೆ ।
ಪೊರಡಲುಜ್ಜುಗಿಸಲಾ ಬಾಪುಸಾಹೇಬನತಿ
ಹರುಷದಿಂದವರ ಬೀಯಕೆ ಭೂರಿ ಧನವನ್ನಿತ್ತಭಿವಂದಿಸುತ್ತೆಂದನು ॥
ಗುರುರಾಯ ನಿಮ್ಮೊಡನದಾರನಾಂ ಕಳುಪುದೆನೆ ।
ವರಶಿಷ್ಯ ಶಿವಪೂಜಿಮಲ್ಲನಂ ಕಳುಹುದೆನ ।
ಲೊರೆದಂತೆ ಶಿವಪೂಜಿಮಲ್ಲನಂ ಕಳಿಸಲನುಮತಿಸಿದನು ಯುವರಾಜನು ॥೧೯॥

ಮಂಗಲಾತ್ಮಕರಪ್ಪ ಮಡಿವಾಳಗುರುವರರು ।
ಸಂಗಡಾ ಶಿವಪೂಜಿಮಲ್ಲನಿರೆ ಕಿತ್ತೂರ ।
ನಂಗವಿಸಿ ಪೊರಮಡಲು ಬಾಪುಸಾಹೇಬಮೊದಲಾದವಗ್ರಾಮಜನರು ॥
ಸಂಗಳಿಸಿದಾನಂದದಿಂದಲವರಂ ಕಳುಪಿ ।
ಪಿಂಗದಾತ್ಮಸ್ಥಲಕೆ ತೆರಳುತಿರೆ ಬಳಿಕಿತ್ತ ।
ನಂಗರಿಪುಶಿವನಂತೆ ಕಂಗೊಳಿಪ ಮಡಿವಾಳಯೋಗಿ ನಡೆದನು ಮುಂದಕೆ ॥೨೦॥

ಕಾಮನಂ ಸುಟ್ಟ ಶಿವನಭಿರಾಮರಾಮೆ ನಿ ।
ಸ್ಸೀಮೆ ಧೃತಸೋಮೆ ನತಕಾಮನಾಪ್ರದವರದೆ ।
ಶ್ಯಾಮಕಚೆ ಶಿಖಿಕುಚೆ ವ್ಯೋಮಕಚಸಂಪ್ರೀತೆ ಸಂಪೂತೆ ಲೋಕಮಾತೆ ॥
ಹೈಮವತಿ ಶ್ರುತಿವಿತತಿಸಂಗೀತೆ ನಿರ್ಜರರ ।
ಕಾಮಿನೀಜನರಿಂದ ಸಂಸೇವ್ಯೆಯೆನ್ನವ್ವೆ ।
ಕಾಮಿತವನಿತ್ತೆನಗೆ ಮುದವೆತ್ತು ರಕ್ಷಿಸೌ ಕಮಲಾಕ್ಷಿ ಭುವನಕುಕ್ಷಿ ॥೨೧॥

ಶ್ರೀಶಿವಾದ್ವೈತಪರವಿದ್ಯಾನವದ್ಯಾತಿ ।
ವೈಶದ್ಯವಿದ್ಯೋತಮಾನನ ಮಹಾಲಿಂಗ ।
ದೇಶಿಕಶಿಖಾಮಣಿಯು ಪಾಣಿಕಂಜಾತಸಂಜಾತನು ಕವೀಶಚರನು ॥
ಆ ಸದಾಶಿವನೊರೆದ ಭೂಸದಾಶಿವನ ಯೋ ।
ಗೀಶನ ನಿರಾಶನ ವಿಪಾಶನುರುಮಡಿವಾಳ ।
ದೇಶಿಕನ ಸುರುಚಿರಪುರಾಣದೊಳಗೈದನೆಯ ಕಾಶಿಗೈದಿದ ಸಂಧಿಯು ॥೨೨॥

ಅಂತು ಸಂಧಿ ಐದಕ್ಕಂ ಪದಂಗಳು ೨೬೯ ಕ್ಕಂ ಮಂಗಳಂ
ಶ್ರೀ ಶ್ರೀ

## ೬ನೆಯ ಸಂಧಿ

ಸೂಚನೆ:— ಮೇರೆವ ವಾರಣಾಸಿಗೆ ಪೋಗಿ ಭಾಗೀರಥಿಯ ।
ವರತೀರ್ಥಮಂ ಕೊಂಡು ಕಿತ್ತೂರಿಗಾ ಗುರುವು ।
ಬರಲೋರ್ವಗಧಿಕಾರವಾದುದರಿಂದರಮನೆಗೆ ಶಾಪಂ ಗೊಟ್ಟನು ॥

ನಿನ್ನ ಮನವೆನ್ನ ವೈರಿಯ ಪತನು ಕೇಳಿನ್ನು ।
ನಿನ್ನ ನಯನಾಬ್ಜವೆನ್ನರಿಗೆ ಕಣೆಯಾಗಿಹುದು ।
ನಿನ್ನಂಗವೆನ್ನ ರಿಪುವಿನ ಪುಟ್ಟಿದಾಣಪಿರೆ ಸಲಹೆ ನಿನ್ನನ್ಸೇಂದೊಡೆ ॥
ಇನ್ನೆನ್ನ ಮನವ ನಿನ್ನರಿಯೊತ್ತಿಗಿಡೆನಯ್ಯ ।
ತನ್ನಯನವಂ ನಿನ್ನ ರಿಪುವಿನೆಡೆಗಿಡೆ ಮುನ್ನ ।
ಮೆನ್ನಂಗವನ್ನವನ ದುಃಸಂಗಕಿಡೆನಯ್ಯ ಪುರಹರನೆ ಸಲಹೆನ್ನನು ॥೧॥

ಅಲ್ಲಿಗಲ್ಲಿಗೆ ಪಯಣಪೆಸಗುತ್ತೆ ದಾರಿಯೊಳ ।
ಗಲ್ಲಲ್ಲಿ ಮೆರೆವ ಸುಕ್ಷೇತ್ರ ತೀರ್ಥಗಳನ್ನು ।
ಸಲ್ಲೀಲೆಯಿಂದ ತಾಂ ನೋಡುತ್ತ ಬೆಳವಡಿಯ ಶಿವಪೂಜಿಮಲ್ಲನೊಡನೆ ॥
ಸಲ್ಲಲಿತ ಗಂಗೋತ್ರಿ ಭದ್ರಿ ಕೇದಾರವಂ ।
ತೆಲ್ಲವೀಕ್ಷಿಸುತೆ ಸದ್ಗುರುವರರು ಮಡಿವಳರು ।
ನಿಲ್ಲದೈದಿದರು ಪುಣ್ಯದ ರಾಶಿಗಾಕಾಶನದಿಗೂಡಿದಾ ಕಾಶಿಗೆ ॥೨॥

ಅಂದಮರಸಿಂಧುವಿನೊಳಿಂದುಧರನವತಾರಿ ।
ಮಿಂದು ವಿಧಿಯಿಂದ ತತ್ಸಿಂಧುವಂ ಪೂಜಿಸುತೆ ।
ಬಂದತಿಥಿವೃಂದಕ್ಕನಾಥರಿಗೆ ಯಾಚಕರಿಗಿಷ್ಟಾರ್ಥ ದಾನಗೈದು ॥
ಸುಂದರ ಕ್ಷೇತ್ರಾರ್ಚನೆಯನೆಸಗಿ ವಿಶ್ವೇಶ ।
ಮಂದಿರವನೊಳಪೊಕ್ಕು ತಲ್ಲಿಂಗದರ್ಶನವ– ।
ನೊಂದಿ ಪಂಚಕ್ರೋಶವೆಸಗಿ ತತ್ಕ್ಷೇತ್ರವಿಧಿಯಂತಂತೆ ಗೈದನವನು ॥೩॥

ಒಂದು ದಿವಸಂ ಬಂದು ಮಿಂದು ಮಂದಾಕಿನೀ ।
ಸಿಂಧುವಂ ವಿಧ್ಯುಕ್ತದಿಂದಲರ್ಚಿಸಿ ಮಹಾ ।
ನಂದದಿಂ ಸುರಗಂಗೆ ಶುಭಸಂಗೆಯುತ್ತುಂಗೆ ಭವಭಂಗೆ ಸುತರಂಗೆಯೆ ॥
ಪಿಂದೆ ತಪಮಂ ಗೈದ ನೃಪ ಭಗೀರಥನ ಬೆ– ।
ನ್ನಿಂದ ಬಂದವಳೆ ಮುನಿ ಜಹ್ನುವಿಂ ಕುಡಿದವಳೆ ।
ಸ್ಯಂದನಂ ಹೆತ್ತವ್ವೆ ಯನ್ನವ್ವೆ ಸಂಸ್ತವ್ಯೆ ಕೊಡು ಭವ್ಯವನ್ನು ದಿವ್ಯೆ ॥೪॥

ಎಂದಿಂತು ತ್ರಿಪಥಗಾದೇವಿಯಂ ಕೊಂಡಾಡಿ ।
ಮುಂದಿರ್ಪ ತೀರ್ಥಾಂಬುವಂ ಪಾತ್ರೆಯೊಳು ತುಂಬಿ ।
ಸಂದಿಸಿತು ಬಿಡದಂತೆ ಜಾಯ್ಗೆ ಮುದ್ರೆಯನೊತ್ತಿ ಮಲ್ಲಪನ ಕೈಗಿತ್ತುದಂ ॥
ಮುಂದೆ ನಡೆ ಕಿತ್ತೂರ್ಗೆ ಪೋದಾಗ ಬರ್ಪನೊರ್ವ ।
ತಂದ ಪಾತ್ರೆಯನಾರಿಗೀಯದಿರು ನೀಂ ಮುದ್ರೆ ।
ಯಂ ತೆಗೆಯದಂತೆಸಗು ಬರ್ಪನ್ನೆಗಂ ನಾನುಮೆಂದುಸುರಿ ಬಿಟ್ಟನವನ ॥೫॥

ಸದ್ಗುರುವು ಮಡಿವಾಳಯೋಗಿಯಿಲ್ಲಿರ್ಪನ ಜ |
ಗದ್ಗುರುವ ವಿಶ್ವನಾಥನ ವೀಕ್ಷಿಸಲು ಪೇಣು |
ಸದ್ಗಂಗೆಯುಮುಲತೀರ್ಥವನೊಯ್ಯಲ್ಕೈದಿದಿವನಿನ್ನೆಂದಿಗಿಲ್ಲಿ ಬಹನೋ ‖
ಸದ್ಗತಿಯನೀವನಿವನುರುಮಹಿಮೆಯುಂ ಬೇಗ ।
ಪದ್ಗತಿಯನುಳಿದರುರುಗರಲೋಕಕುಸುರಲು ವಿ- ।
ಯದ್ಗತಿಯನುಳಿನರ್ಕನುತ್ಸಾಹದಿಂ ಭರದಿ ಪಶ್ಚಿಮಾಚಲಕಿಳಿದನು ‖೬‖

ಆ ರಾತ್ರಿಯುಂ ಗುರುವು ಶಿವರಾತ್ರಿಯೆಂಬಂತೆ ।
ಸಾರ ನಿಜಶಿವಲಿಂಗ ಪೂಜಾರ್ಪಿತಾನುಭವ ।
ವಾರದಿಂ ಕಳೆದುಳಿದ ರಾತ್ರಿಯುಂ ನಿದ್ರೆಯೊಳು ಕಳೆಯಲುಂ ಪವಡಿಸಿದನು ‖
ಧಾರಿಣಿಯ ಸಾಮಾನ್ಯ ಜನರಂತೆ ಜಡನಿದ್ರೆ |
ಸೇರುವುದೆ ಶಿವಯೋಗಿ ಮಡಿವಾಳಗುರುವರರಿ ।
ಗಾ ರುಚಿರಶಿವಯೋಗನಿದ್ರೆಯಿಂದವನಿರಲ್ಮೂಡಿದುದು ಮೂಡಗೆಂಪು ‖೭‖

ತಂಗಾಳಿ ತೀಡುತಿರೆ ಮುಂಗೋಳಿ ಕೂಗುತಿರೆ |
ಕಂಗಳಿಗೆ ತಿಂಗಳನ ಮಂಗಳನುವಾಗುತಿರೆ ।
ಸಿಂಗರಿಸೆ ಚಕ್ರವಾಕಂಗಳಾಗಸದ ಮೇಲಂಗಳದೆ ಸಂಗಳಿಸುತೆ ‖
ಶೃಂಗಾರದಿಂ ಸರೋಜಂಗಳಲಿ ಭೃಂಗಾಳಿ |
ತುಂಗಗುಂಜಾರವವನೆಸಗುತಿರಲು ಚಕೋ ।
ರಂಗಳ ಮೊಗಂಗಳತಿ ವಿಕಳಂಗಳಾಗುತಿರೆ ಕಂಗೊಳಿಸಿತಿನಬಿಂಬವು ।೮‖

ಪುಂಜಾವದೊಳಗಾಸ್ಯಕಂಜಾತವಂ ತೊಳೆದು |
ಸಂಜಾತ ಸದ್ಭಕ್ತಿಯಿಂದೆ ಶಿವಲಿಂಗಕ್ಕೆ |
ಮುಂಜೋಕೆ ಮಿಗೆ ನೀರನೆರೆದು ಭಸ್ಮವ ಪೂಸಿ ತಾನುಮಂ ಭಸ್ಮದಳೆದು ‖
ಕಂಜಾಸನಾದಿ ಸುರಪುಂಜಸೇವ್ಯನೆ ನೋಡು |
ಮಂಜು ಹೃತ್ಕಂಜಕಿಂಜಲ್ಕರಂಜಿತ ನೋಡು |
ಮಂಜುಳಾಕಾರನೇ ನೋಡೆಂದು ಶಿವಯೋಗಿ ಲಿಂಗವಂ ಬಣ್ಣಿಸಿದನು ‖೯‖

ಅಲ್ಲಿ ಕಾಶೀಕ್ಷೇತ್ರದಲ್ಲಿ ಮಡಿವಳಯೋಗಿ |
ಸಲ್ಲೀಲೆಯೊಡವೆರೆದು ಕೆಲಕಾಲವಮಂ ಕಳೆದು |
ಬಲ್ಲಿದನು ತಾಂ ಪೊರಟು ಪೊಸತಪ್ಪ ಕ್ಷೇತ್ರಗಳನೀಕ್ಷಿಸುತೆ ಬರ್ಪನಿತಕೆ ||
ಮೆಲ್ಲನೈತಹ ವಸಂತಾಗಮವನೀಗಳಾಂ |
ಬಲ್ಲನಿತು ರಸಿಕರ್ಕಳಿದು ಪೊಸತು ಪೊಸತೆಂಬ |
ಮೆಲ್ಲುಲಿಗಳಿಂ ಸಿರವಸಲ್ಲಾಡಿಪಂತೆಪೋಲ್ ಪೇಳ್ವೆನಾನಂದದಿಂದ ||೧೦||

ವಿರಹಿಗಳ ಹೃಚ್ಛೂಲವಾ ಭೋಗಿಗನುಕೂಲ |
ಚರಿಪ ಕಲಗಲಜಾಲದಾರಾವ ಭವಮೂಲ |
ಪರಮೆವರಿಗಳದುರುಗಲುಣಿಸನುಣ್ಣುವ ಕಾಲಮೆಸೆದುದು ವಸಂತಕಾಲಂ ||
ಸರಸರನೆ ಚಳಿ ಜಾರೆ ಬನಸೊಂಪು ತಲೆದೋರೆ |
ಸರಸಿಜಂಗಳು ಮೀರೆ ಮಾಮರವು ತಳಿರೇರೆ |
ತರಣಿ ನಸುಕಾಯ್ಪೇರೆ ಪೂಗಂಪನುರೆ ಬೀರೆ ಬಂದುದಾ ಮಧುಮಾಸವು ||೧೧||

ಮೌನವ್ರತಂ ದಾಳ್ದು ಮೆರೆವ ಕೋಕಿಲಗಣವು |
ಮೌನವಮಂ ಬಿಟ್ಟುಲಿದುದಾ ಮಲ್ಲಿಕಾವಧುವಿ- |
ಗಾ ನೀಚ ಚಂಡಾಲಿಗಳ ಸಂಗಮಾಯ್ತೆನನ ಮಡದಿ ಸಿರಿವನೆಯೆನಿಸುವ ||
ಆ ನಳಿನಿಸಿಯು ಭಂಡಿನೊಳಗಾದಳುರುಜಾತಿ |
ಯೂನವಾಯ್ತವನಿಯೊಳು ಮಧುವಸಂಸರ್ಗದಿಂ |
ದೇನಾಗದಿರದೆಂದು ಸೂಚಿಸುವ ಮಾಳ್ಕೆಯಿಂ ಬಂದುದು ವಸಂತಋತುವು ||೧೨||

ಮಾಮರಂಗಳರಾಯ ಮಲ್ಲಿಯೆಂಬಂಗನೆಯು |
ಪ್ರೇಮದಿಂದಂ ತನ್ನ ತೆಕ್ಕೆಯೊಳಗಿರಿಸಿದೊಡ |
ಮಾ ಮಲ್ಲಿಯಂಗನೆಯು ಮಧುಪರಾಗಿಣಿಯಾದಳೇಂ ಕಾಲವೈಚಿತ್ರ್ಯವೋ ||
ಆ ಮಲ್ಲಿಯಂಗನೆಯು ಮಧುಪರಾಗವ ಕಂಡೊ |
ಡಾ ಮಾಸಿಸಿಯನೊಲ್ಲದೊಡನಿರ್ಪನವನೇದೊ |
ಡೀ ಮಹೀಮಂಡಲದೊಳರಿವುತಿಲಲಿತ್ತಣಾ ಕುಜಸಿವಹಕಭಿಮಾನವು ||೧೩||

ಇಂತನಂತಗಳಪ್ಪ ಸೊಂಪುಕಂಪಿಂಪುಗಳ ।
ಸಂತತಿಯ ಸೊಬಗನಾಂತೆಸೆವ ಬಸ ಬನಗಳಾ ।
ಪ್ರಾಂತಂಗಳಲ್ಲಲ್ಲಿ ನುಂಪಿಡಿದು ಶೋಭಿಸಿರೆ ತದ್ವಸಂತದ ಕಾಲದೆ ॥
ಕಂತುಹರರೂಪನಾ ಮಡಿವಾಳಶಿವಯೋಗಿ ।
ಸಂತಸದಿ ತದ್ವಸಂತದ ಕಾಲದೊಳಗೆ ಜಗ ।
ದಂತರಾತ್ಮನ ವಿಶ್ವನಾಥನಭಿವಂದಿಸುತೆ ತತ್ಕಾಶಿಯಂ ಬಿಟ್ಟನು ॥೧೪॥

ಇತ್ತ ಕಿತ್ತೂರೊಳಗೆ ಮಡಿವಾಳಶಿವಯೋಗಿ-।
ಸತ್ತಮನು ತಾನಿಲ್ಲದಿರೆ ರಾಜಸುತನು ತ ।
ತ್ಪತ್ತನದೊಳನುಕೂಲ ಜನರು ಕೂಡುತಮೆಲ್ಲರಧಿಕಾರಕಾರ್ಯದೊಳಗೆ ॥
ಚಿತ್ತವುಳ್ಳವರಾಗಿ ಕಂಟಕವು ಪೋಯ್ತೆಂದು ।
'ಬಿತ್ತರದ ಸಡಗರದೆ ಗುರುಸಿದ್ಧದೇವನಂ ।
ತತ್ತಾಪಸೋತ್ತಮನ ತಾಣದೊಳು ಕುಳ್ಳಿರಿಸಿ ಕಟ್ಟಿದರು ಪಟ್ಟವನ್ನು ॥೧೫॥

ಪಟ್ಟಗಟ್ಟಿರುವೆವ್ವು ಬಳಿಸಾರ್ದು ಕೇಳುವರು ।
ಗಟ್ಟಿಗರು ಜಟ್ಟಿಗಳದಾರುಂಟು ಗ್ರಾಮದೊಳು ।
ಕೆಟ್ಟ ಮಡಿವಳನವನನಟ್ಟಿದೆವು ಯುಕ್ತಿಯಿಂದೂರತ್ತಣಿಂ ಪೊರಡಿಸಿ ॥
ಪಟ್ಟಗೊಂಡವನ ಮುಂದಿಟ್ಟುಕೊಂಡಾವೆಲ್ಲ-।
ರಟ್ಟಹಾಸಂಗೈದು ಸರ್ವದಾ ಸಂತಸಂ ।
ಬಟ್ಟು ಕಾಲಂಗಳೆವುದೆನ್ನುವರು ನೃಪಸುತನು ಮೊದಲುಗೊಂಡೆಲ್ಲ ಜನರು ॥೧೬॥

ಬೆಳವಡಿಯ ಶಿವಪೂಜಿಮಲ್ಲನೆಂಬುವನು ಕಾಶಿ ।
ಯೊಳಗಿರ್ಪ ಮಡಿವಾಳಗುರುವಿನಾಣತಿಯಿಂದ-।
ಮಳತೀರ್ಥಪಾತ್ರೆಯಾ ಕಾವಡಿಯ ತಾಂ ಪೊತ್ತು ನಡು ನಡುವೆ ವಸತಿಗೈದು ॥
ತಳುವದೀಪರಿ ಪಯಣವೆಸಗುತ್ತೆ ಪರಿವಿಡಿದು ।
ಬೆಳವಡಿಗೆ ಬಂದು ದೇವರಪೂಜೆಗೈವಮನೆ ।
ಯೊಳಗೆ ಕಾವಡಿಯನಿಟ್ಟುರುತರದ ಭಕ್ತಿಯಿಂ ಪೂಜಿಸುತ್ತಿರ್ಪನವನು ॥೧೭॥

ಗುರುಗಳವರೆಲ್ಲಿರ್ಪರಲ್ಲಿಹರು ನಡೆಮುಂದೆ
ಭರದಿ ಬಂದಪೆನು ಪಿಂದೆನುತೆ ಕಳುಹಿದರೆನ್ನ
ವಿರತರೇನೊರೆದರೆನೆ ತೀರ್ಥಪಾತ್ರೆಯನಾರಿಗೀಯದಿರು ಬರ್ಪನ್ನೆಗಂ ॥
ತೆರೆಯದಿರು ಬಾಯ-ನೆಂದುಸುರಿಹರು ಗುರುಗಳೆಂ
ದೊರೆದನಾ ಕೇಳ್ವರ್ಗೆ ಭಕ್ತಿಯಿಂ ಬಾಳ್ವರ್ಗೆ
ಗುರುಭಕ್ತಮಲ್ಲನಣು ದುರಿತಕ್ಕೆ ನಿಲ್ಲದವ ಶಿವಪೂಜಿಮಲ್ಲನವನು ॥೧೮॥

ವಾರಾಣಸಿಗೆ ಪೋದ ಶಿವಪೂಜಿ ಮಲ್ಲಪನು
ಸಾರತೀರ್ಥಂಗೊಂಡು ತಾನೋರ್ವನೇ ಮುಂತೆ
ಯೂರಿಗೈದಿದನಂತೆ ಮಡಿವಾಳನು ಪಿಂತೈದುತಿಹನುತೆ ಯಿಂತೆಂಬುದ ॥
ಆ ರಾಜಸುತ ಬಾಪುಸಾಹೇಬನುಂ ಕೇಳಿ
ಚಾರನಂ ಬೆಳವಡಿಗೆ ಕಳುಹಿ ಮಲ್ಲಪನ ಕಿ
ತ್ತೂರಿಗಾ ತೀರ್ಥಪಾತ್ರೆಯುವೆರಸಿ ಬರ್ಪಂತೆ ತ್ವರೆಯಿಂದ ಕರೆಯಿಸಿದನು ॥೧೯॥

ಬಂದಮಲ್ಲಪನಿಗೆಲೊ ತೀರ್ಥಪಾತ್ರೆಯದೆಲ್ಲಿ
ತಂದಿಳುಹು ನೀನೆನಲ್ಕದನಾರಿಗೀಯಬೇ
ಡೆಂದಾಣತಿಯನೆನಗೆ ಮಾಡಿಹರು ಮಡಿವಾಳಶಿವಯೋಗಿವರ್ಯರವರು ॥
ಎಂದುದಂ ಕೇಳಿ ತಾಂ ನರಪತಿಯ ಸುತನು ಖತಿ
ಯಿಂದೆಂದನಾ ನೀಚಮಡಿವಳನ ನಾಂ ಬಲ್ಲೆ
ಮುಂದಿಳುಹು ನೋಡೆನುತೆ ಬಲುಹಿಂದೆ ಪಾತ್ರೆಯಂ ಕವರ್ದನಾ ನೀಚನವನು ॥ ೨೦॥

ಗುರುವರರು ಕಾಶಿಯೊಳು ಮಿಂದು ಸುರನಿಮ್ನಗೆಯ
ಪರಮವಿಧಿಯಿಂದ ಪೂಜಿಸಿ ತಾನು ಬಣ್ಣಿಸೀ
ಪರಿಶುಚಿಯ ಭಾವದಿಂದಮಲತರ ತೀರ್ಥದುಂಬಿತ್ತ ಪಾತ್ರೆಯನರಸನು ॥
ಕರಚರಣ ದೊಳೆಯದಲೆ ಪರುಶನವನೆಸಗುತಿರೆ
ಹರಹರಾ ನಾಂ ಗುರುದ್ರೋಹಿಯಾದೆನು ಮೇಣು
ನರಕಿಯಾದೆನು ಬಾಪುಸಾಹೇಬನತ್ತಣಿಂದಿಂತೆಂದ ಮಲ್ಲಪ್ಪನು. ॥೨೧॥

ಪಾವನೋದಕದಿಂದ ಮಿಂದು ಮಡಿಯನ್ನುಟ್ಟು
ಶ್ರೀವಿಭೂತಿಯನಿಟ್ಟು ನಿರ್ಮಳತೆಯುಳಪಟ್ಟು
ದೇವದೇವನಿಗೆಂದು ಮಾಡಿವನ್ನವ ಸೊಣಗನುಂಡಂತೆ ಪೋಲಾಯಿತ್ತದು ॥
ದೈವತಂಗಳ ಮುಖವು ವಹ್ನಿಯಾಗಿರುತಿರ
ಲಾ ವಹ್ನಿಯೊಳಗಾವ ಹವಿಯನಾಹುತಿಗುಡುವು
ದಾ ವಿಶುದ್ಧದ ಹವಿಯು ಕೀಳ್ಮಳಲೊಳಿಟ್ಟಂತೆ ತೀರ್ಥಾಂಬುವಿಂತಾದುದು ॥೨೨॥

ಆ ಕಾಲಕಲ್ಲಿರ್ಪ ಮಡಿವಾಳಗುರುಭಕ್ತ
ಲೋಕವೆಲ್ಲವು ಬಾಪುಸಾಹೇಬನಾಪ್ತಭೃತ್ಯ
ಕಾಕುಕರ್ಮಕೆ ತಾವು ಕೆಲ್ದೀಗಳಾವಿವನನುಯಾಯಿಗಳನೆಲ್ಲರ ॥
ಏಕೆಯಿಂತಹ ಕೃತಿಯನೆಸಗಿರ್ಪೆವೆಮಗಿಂತು
ಶೋಕವೊದಗಿದುದಕಟ ಸುಡುಸುಡೆಂದುಲಿವಂ-
ತೀ ಕಾಲದೊಳಿಃ ಬಿಡದೆ ದಂಡಿಸುವ ನಡ ಎನಲ್ಕವರೊಳೋರ್ವಂ ನುಡಿದನು ॥೨೩॥

ಉಗುರಿಂದ ಪೋಪುದಕೆ ಕೊಡಲಿಯೇತಕ್ಕೆಂಬ
ಜಗದ ನುಡಿಯಂತವರನೆಲ್ಲರಂ ದಂಡಿಪ್ಪು
ಜ್ಜುಗವೆಮಗದೇತಕೆ ಬಿಡಿಬಿಡಿರಿ ಕೇಳಿರಯ್ ಸಾಕೆಂದೆ ಗುರುಕೋಪವು ॥
ಒಗುಮಿಗೆಯನಿಂ ತೋರೆದಮಿಗಿಲುಕ್ತಿಯಂ ಕೇಳಿ
ಸುಗುಣಿಯಹುದಾರ್ಯ ನೀನು ನಿನ್ನುಕ್ತಿಯದು ನಿಜವು
ನಿಗಮಾಂತವಿದರ ಗುರುಮಡಿವಳರ ಕೋಪವದು ದಂಡಿಪುದು ನಿಜವುನಿಜವು ॥೨೪॥

ಏತಕೆನೆ ಕೇಳು ನೀಂ ಬಾಪುಸಾಹೇಬನವ
ನಾ ತಪೋ ನಿಷ್ಠುರಹ ಪ್ರಭುಗುರುಗಳುಕ್ತಿಯಂ
ತಾ ತಾಪಸೋತ್ತಮರ ಮಡಿವಳರ ಪಟ್ಟಗಟ್ಟದಲನ್ಯ ಮರಿದೇವಗೆ ॥
ತಾ ತಳುವನೆಸಗದಲೆ ಪಟ್ಟಗಟ್ಟಿಸಲಿತ್ತ
ಪೂತಗಂಗೋದಕದ ನೆಪದಿ ವಾರಾಣಸಿಗೆ
ಖ್ಯಾತ ಮಡಿವಳರನ್ನು ಯುಕ್ತಿಯಿಂ ಕಳುಹಿದನು ಶಾತನುಕ್ತಿಯ ಕೇಳ್ದನೇ ॥೨೫॥

ಆರು ಮುಟ್ಟದ ಪರಿಯುಸೊರೆವಿತ್ತ ತೀರ್ಥಪಾ
ಧಾರಪಾತ್ರೆಯು ಗುರುತ್ವವನೇನ ಬಗೆದನೇ
ಧೀರಮಡಿವಾಳರ ಮಹತ್ವವುಂ ತಿಳಿದನೇ ಬಾಪುಸಾಹೇಬನಿವನು ॥
ಘೋರವಾದೀ ವಾರ್ತೆಯೆಲ್ಲವಂ ಕೇಳ್ದೊಡಾ
ವೀರಮಡಿವಳರು ಕಂಠೀರವದ ರವದಂತಿ
ರಾರಭಟಿಸುತ್ತೆ ತಾಂ ಮುರಿದೆದ್ದು ಬಾಪುಸಾಹೇಬನಿಗೆ ಶಾಪ ಗೊಡುವ ॥೨೬॥

ಅದು ಕಾರಣಂ ಬಾಪುಸಾಹೇಬನುಂ ದುರ್ವಿ
ಷದಕಿಂತು ತಾನೆ ಗುರಿಯಹನೆಂಬ ನಿನ್ನುಕ್ತಿ
ಯಿದು ಸತ್ಯವೆಂದೊರ್ವನಿಗೆ ಬುದ್ಧಿ ಪೇಳ್ವನಿಗೆ ನುಡಿದೆಲ್ಲರುಂ ಪೋದರು ॥
ಸದುಭಕ್ತ ಶಿವಪೂಜಿ ಮಲ್ಲಪ್ಪನಾದೊಡಂ
ಹೃದಯದೊಳು ಮಿಡುಕುತ್ತೆ ನಿರುಪಾಯನಾಗಿ ದುಃ
ಖದಿ ತನ್ನ ಬೆಳವಡಿಯ ಗ್ರಾಮಕ್ಕೆ ಪೋದನಾನೇನೆಂಬೆ ಮುಂದಪ್ಪುದಂ ॥೨೭॥

ಅತ್ತ ಮಡಿವಳಯೋಗಿ ಕಾಶಿಯಿಂ ಪೊರಮಡು
ತ್ತೊತ್ತರಿಸಿ ಬರಲ್ ದಾರಿಯೊಳು ತೀರ್ಥಗಳ
ವೊತ್ತವುಂ ನೋಡುತ್ತೆ ಕೆಲದಿನಂಗಳೆಯುತಿರೆ ಬೆಳವಡಿಯ ಗ್ರಾಮಕವನು ॥
ವೊತ್ತವೊದಲ್ಯೈದುತಿರಲೂರವರು ಗುಡಿಗಟ್ಟ
ತೆತ್ತಲುಂ ಕುಂಬಿಡಲು ಮತ್ತೆ ಮಲ್ಲಪನಮನೆ
ಯೆಂತ್ತಿಗೈತಂದಲವೊ ಶಿವಪೂಜಿಮಲ್ಲ ಕೇಳೆಲ್ಲಿಹುದು ತೀರ್ಥಪಾತ್ರೆ ॥೨೮॥

ಹೀನದಂ ಕುಡು ಬೇಗನೆಂಬುದಂ ಕೇಳಿಯುವ
ನೇನ ಮಾಡಲಿ ಗುರುವಿಗೇನ ಪೇಳಲಿಯೆಂದ
ನೂನಸಾಧ್ವಸದಿಂದ ಗಡಗಡನೆ ನಡಗುತ್ತೆ ತನ್ನ ದೇಹದ ಮೇಲಣ ॥
ಭಾನವದು ಪೋಗೆ ತಾಂ ಸುಮ್ಮನೆ ನಿಂದಿರ
ಲ್ಕೇನೆಲವೊ ನೀಂ ಮಲ್ಲ ಸುಮ್ಮನೇತಕ್ಕಿದೆ
ನೀನಳ್ಕದಿರು ಭರದಿನೊರೆಯನಲ್ಕಾ ಮಲ್ಲ ನಡಗುತ್ತ ಪೇಳ್ದನಿಂತು ॥೨೯॥

ಗುರುವೆ ಕೇಳ್ ಬಾಪುಸಾಹೇಬನೆನ್ನಂ ಬರಿಸಿ
ವರತೀರ್ಥಪಾತ್ರೆ ಗುಡು ನೀನೆನಲ್ಕನೀಯ
ದಿರೆ ತಾನೆ ಬಲುಹಿಂದೆ ಸೆಳೆದು ಮುದ್ರೆಯಕಳೆದು ತೀರ್ಥವಂ ಕೊಂಡನವನು ॥
ಒರೆಯೆ ಗುರುವರರು ಘೂ ಸೂಳೆಮಗನೆ ನೀಚ
ಪರರಿಗೆಲೋ ನೀನಿತ್ತ ತಪ್ಪಿತಕೆ ಶತಜಂಗ
ಮರಿಗುಣಿಸಿ ಭೂರಿದಕ್ಷಿಣೆ ಯಿತ್ತೊಡಾಂ ಬಿಡುವೆನನ್ಯನೊಡೆ ನಿನ್ನ ಸುಡುವೆ ॥೩೦॥

ಎಂದ ಮಾತಿಗೆ ಮಲ್ಲನವನೊಡಂಬಟ್ಟು ಸುನ
ದಂದದು ಶತಜಂಗಮರಿಗುಣಿಸಿ ಗುರುಕೃಪೆಗೆ
ಸಂದಿರಲ್ಕಿತ್ತಲಾ ಮಡಿವಳಶಿವಯೋಗಿ ಕಿತ್ತೂರಿಗೈತಂದವನು ॥
ಬಂದರಿದೊ ಗುರುವರರು ಬಂದರಿದೊ ಮಡಿವಳರು
ಮುಂದಾಗುಹೋಗುಗಳನಿಂದುಘರ ಶಿವನರಿವ
ನೆಂದಿಂತು ಮಂದಿ ನುಡಿವನಿತಕ್ಕೆ ಗುರುವರರು ಕಲ್ಮಠಕೆ ಬಂದರವರು ॥೩೧॥

ಬಂದ ಮಡಿವಾಳಶಿವಯೋಗಿ ಚಕ್ರೇಶ್ವರನ
ಮುಂದ ಕೋಪದ ಚಿಹ್ನವಾನನದ ಮೇಲ್ಕಂಡು
ನಿಂದ ಮಂದಿಯು ಮಠದವಾರ್ತೆಯಂ ಬಿಡದರುಪಲಂಜಿ ಸುಮ್ಮನೆ ನಿಂದುದು ॥
ಅಂದು ಮಡಿವಳಯೋಗಿಯೊಳಪೊಕ್ಕು ತಾನು ಕ
ಣ್ಣಿಂದ ನೋಡಲು ಮಠವು ಪೊಸರೀತಿಯಾಗಿರಲು
ಮುಂದೆ ಬರೆ ಗುರುಸಿದ್ಧದೇವನೆಂಬುವನಲ್ಲಿ ಸಿಂಹಪೀಠದಿ ಕುಳಿತಿರೆ ॥೩೨॥

ಕಂಡು ನೀನಾರೇತಕಿಲ್ಲಿರುವೆ ಪೇಳೆನಲು
ಮಂಡಲಾಧಿಪ ಬಾಪುಸಾಹೇಬನೆನ್ನನು
ದ್ದಂಡಮಠಕೊಡೆಯನಾಗಿಸಿದನೆನೆ ಗುರುವರರು ಚಂಡತರಕೋಪದಿಂದ ॥
ಬಂದ ಸೂಳೆಯಮಗನೆ ಏಳೆನುತ್ತಲ್ಲಿರ್ಪ
ಖಂಡೆಯಂ ಕೈಕೊಂಡು ಮುಂಕೊಂಡು ಬರಲವನು
ಕಂಡಂಜಿಯವರ ಪದಪುಂಡರೀಕದೆ ತನ್ನ ಮಂಡೆಯನ್ನಿಟ್ಟುಳಿದನು ॥೩೩॥

ಇತ್ತವರು ಬಹನೆಂದು ಬಾಪುಸಾಹೇಬನುಂ
ಮತ್ತತ್ಸದಿಂದ ತನ್ನರಮನೆಯ ಬಾಗಿಲವ
ನೊತ್ತರದೊಳಿತ್ತಿರಿಸಿ ಬೀಗಮಂ ಹಾಕುತಿರಲತ್ತೂರವರು ವೀಕ್ಷಿಸೆ ॥
ಕಿತ್ತಕತ್ತಿರೆ ಜೋಡಗೊಳವಿ ಗುಂಡಸ್ನೋಂದ
ನೆತ್ತಿಪಿಡಿದಾ ಗುರುವು ಸಿಂಗಮರಿಯಂತೆ ಪಾ
ರುತ್ತೆ ಚೀರುತ್ತೆ ಬೀರುತ್ತೆ ವೀರತ್ವಮಂ ಸಾರ್ತಂದನರಮನೆಗೆ ತಾಂ ॥೩೪॥

ಕರವಾಳವನ್ನೊರ್ಮೆ ಜೋಡುಗುಂಡನ್ನೊರ್ಮೆ
ತಿರುವುತ್ತಲತ್ತಿತ್ತ ತಿರುಗುತಿಹ ಮಡಿವಾಳ
ಗುರುವಿನುಗ್ರತ್ವಕ್ಕೆ ಬಾಗಿಲದೊಳಿದ್ದವರು ಚಲ್ಲವರಿದರು ಭೀತಿಯಿಂ ॥
ದುರುಳ ಒಕ್ಕಲಿಗನೇ ಬಾಪುಸಾಬ್ಯಾ ಕೇಳು
ಮರುಳಗೊಳಿಸೆನ್ನನಾ ಕಾಶಿಗೈದಿಸಿದ ನಿ
ನ್ನರಮನೆಯೊಳಿತ್ತಲುಂ ಕತ್ತೆಹಂದಿಗಳಾಡಲೆಂದು ಶಪಿಸಿದನಾ ಗುರು ॥೩೫॥

ಆಮೇಲೆ ಮಹಿಮನೀ ಮೈಮೇಲಣರಿವೆಯಂ
ತಾ ಮೇಲುಮೊಗಮಾಡಿ ಕಾಮಾರಿಯಂ ನೆನೆದು
ಧೂಮಕೇತನದೊಳಿಡಲುರಿದದಾ ಬೂದಿಯಂ ಮೈಗೆಲ್ಲ ಪೂಸಿಕೊಂಡು ॥
ನೇಮದಂತಾತ ಕೌಪಿನಮಂ ಹರಿದೊಗೆದು
ತಾ ಮೂರು ಬೊಗಸೆಮಣ್ಣನು ತೂರಿಯರಮನೆಗೆ
ಭೂಮಹಿತ ಮಡಿವಾಳಗುರು ದಿಗಂಬರನಾಗಿ ಪೊರಟನಾ ನಿರುಪಾಧಿಯು ॥೩೬॥

ನಿರುಪಾಧಿ ಗುರುವರರ ಘನದಿಗಂಬರತೆ ನೆರೆ
ಯರಿಯೆ ಧರೆಯುದ್ಧಾರಿಗೆ ಬೀಜವೈ ಸಲೆ ಮೇಣ
ವರ ಪರಮ ವಿರತಿ ಸುಜ್ಞಾನ ಸೌಭಾಗ್ಯಕ್ಕೆ ಹೆಗ್ಗುರಿಯು ತಾನಹುದಲಾ ॥
ಧರೆಯ ಭಕ್ತರನೆಲ್ಲ ದರ್ಶನಾಶೀರ್ವಾದ
ಪರಮೋಪದೇಶಗಳನುದ್ಧರಿಸಲಿದು ಮಹ
ತ್ತರ ಸಾಧನವು ಮೇಣವರ ಮಹಿಮ ಪ್ರಸರಕುರೆ ನೆರವು ಜಸದ ಹರವು ॥೩೭॥

ಇಂತು ಮಡಿವಳಯೋಗಿಮಣಿ ದಿಗಂಬರನಾಗಿ
ಯಂತರಂಗದೊಳಿರ್ಪ ತನ್ನ ಘನತರವಿರತಿ
ಯಂತಮಂ ಜಗಕೆಲ್ಲ ತೋರ್ಪಂತೆ ಕಿತ್ತೂರ ಬಿಟ್ಟು ಪೋದನು ಮುಂದಕೇ ॥
ಎಂತು ದಿನಮಣಿಯಸ್ತಗಿರಿಗೈದಲಾ ದಿನದ
ಕಾಂತ ವೈಭವವಳಿದು ಮಬ್ಬದಾವರಿಸಜೇ
ಕಂತೆ ಕಿತ್ತೂರಪುರಿಯೋಗಿಮಣಿ ಪೋಗುತಿರಲತ್ಯಮಂಗಲವಾದುದು ॥೩೮॥

ಶ್ರೀಪತಿ ವಚಸ್ಪತಿ ಶ್ರಿದಿವಪತಿ ಮುಖದೇವ
ತಾಪತಿ ವಧೂವಿತತಿ ವಿನುತಿ ಸಂಪ್ರೀತಿಯುತೆ
ತಾಪಸೋತ್ತಮರ ಹೃತ್ತಾಮರಸದೊಳಗೆಸೆವ ಚಿತ್ಸ್ಫೂರ್ತಿವರಮೂರ್ತಿಯು ॥
ಶ್ರೀಪಿನಾಕಿಯ ಜೀವಸತಿ ಭುವನತತಿ ಜಠರೆ
ಪಾಪಾಳಿವಿಧ್ವಂಸೆ ರಾಜಶಕಲೋತ್ತಂಸೆ
ತಾ ಪಾಲಿಸಲಿ ಪರಾತ್ಪರದೇವಿಯೆನ್ನನ್ನು ಘನದಯಾವತಿ ಪಾರ್ವತಿ ॥೩೯॥

ಶ್ರೀಶಿವಾದ್ವೈತ ಪರವಿದ್ಯಾನವದ್ಯಾತಿ
ವೈಶದ್ಯ ವಿದ್ಯೋತಮಾನನ್ ಮಹಾಲಿಂಗ
ದೇಶಿಕ ಶಿಖಾಮಣಿಯ ಪಾಣಿಕಂಜಾತ ಸಂಜಾತನು ಕವೀಶಚರನು ॥
ಆ ಸದಾಶಿವನೊರೆದ ಭೂಸದಾಶಿವನ ಯೋ
ಗೀಶನ ನಿರಾಶನ ವಿಪಾಶನುರು ಮಡಿವಾಳ
ದೇಶಿಕನ್ಯಸುರುಚಿರ ಪುರಾಣದೊಳಗಾರನೆಯ ಶಾಪಸಂಭ್ರಮದ ಸಂಧಿ ॥೪೦॥

ಅಂತು ಸಂಧಿ ಆರಕ್ಕಂ ಪದಂಗಳು ೩೦೯ ಕ್ಕಂ ಮಂಗಳಂ
ಶ್ರೀ ಶ್ರೀ

## ೭ನೆಯ ಸಂಧಿ

ಸೂಚನಾ:— ಅರಮನೆಯುಂ ಹಾಳಾಗಲೆಂದು ಮಣಿಲ್ದಾರಿ ಪೋ
ಗಿರುವ ರಾಯಳನ ತಂದು ಕರಿಯ ಕಾಲಿಗೆ ಕಟ್ಟಿ
ಕರಮೆಳೆಯಿರೆಂದರಸನಾಜ್ಞೆಗೊಂಡಾ ದಂಡಿಗಾ ಗುರುವು ವಶವಪ್ಪನೇ ||

ಜಡೆಯೆಡೆಯ ಗಂಗೆಯಿಂ ತುಹಿನಕರಖಂಡದಿಂ
ಬಿಡದುತ್ತಮಾಂಗಕ್ಕೆ ಶೀತತ್ವವಡರುತಿರೆ
ಕಿಡಿಗಣ್ಣನುರಿಯಿಂದ ಬಿಸುಪನಾಂತೊಡು ಶೈತ್ಯವಗಲದಿರೆ ತಲೆಗೆಟ್ಟು ತಾ ||
ಕಡು ಹ ಚ್ಚ ತನವಿಡಿಯೆ ಮ್ಮಡನುಟ್ಟುದಂ ಬಿಸುಟು
ಸೊಡಬಲಿಯ ಭೂತಗಳ ಗಡಣದೊಡನಲೆವುತಂ
ಕಡೆಗೆ ತಾನಾ ರೂಪುವೊರೆದು ನಿರೂಪವಂ ಧರಿಸಿದುರುಶಿವ ಪೊರೆಯೊ ನೀಂ ||೧||

ಕಿತ್ತೂಗ ಜಟ್ಟು ಬರಿಬತ್ತಲೆಯು ತಾನಾಗು
ತೆತ್ತಲುಂ ನಿರುಕಿಸದಲುತ್ತಮನುಶಿವಯೋಗಿ
ಹೃತ್ತಟದ ಚಿಜ್ಜ್ಯೋತಿಯೊಳು ತನ್ನ ಚಿತ್ತವಚ್ಯೋತ್ತಿಯಿರೆ ಹುಚ್ಚನಂತೆ ||
ಅತ್ತಿತ್ತ ಪೋಗುತ್ತಮೋಡುತ್ತೆ ನಿಲ್ಲುತ್ತೆ
ಸುತ್ತಣೂರಿನ ಜನರು ಮುತ್ತಿ ಪೊಡಮಟ್ಟಡವ
ರತ್ತ ಕಣ್ಣೆತ್ತಿ ತಾಂ ನೋಡದಲೆ ಲೀಲೆಯಿಂ ಪೋಗುತಿರ್ದನು ಮುಂದಕೆ ||೨||

ಗುಡಿಯು ಗುಂಡಾರದೊಳಗಾ ಹಾಳು ಗೋಡೆಯೊಳು
ಬಿಡದಡರಿ ಬೆಳೆದಿರ್ಪ ಮಳೆಯೊಳಗೆ ಹೊಳೆಯೊಳಗೆ
ಕಡು ಭಯಂಗುಡುವ ಸುಡುಗಾಡಿನೊಳು ಕಾಡಿನೊಳು ಹಳ್ಳದೊಳು ಕೊಳ್ಳದೊಳಗೆ ॥
ನಡುವಗಲ ಬಿಸಿಲೊಳಗೆ ಚೆಲುವಿಡಿದ ತೋಟದೊಳು
ಸುಡುವ ಹುಡಿಯೊಳಗೆ ಮೇಣಾರವೆಯ ಮಧ್ಯದೊಳ
ಗೆಡೆಯಾಡುವನು ಮಹಾಮಡಿವಾಳ ಶಿವಯೋಗಿ ಹಿರಿದು ಕಿರಿದೀತೆನ್ನದೆ ॥೩॥

ಹಳುವು ಮೇಲುಪ್ಪರಿಗೆ ನಲ್ಲುಣಿಸು ಪೊಲ್ಲುಣಿಸು
ಪೊಳೆವ ನುಣ್ಬಟ್ಟೆ ನಾರಿನ ಬಟ್ಟೆ ಸುಖ ದುಃಖ
ಗಳು ಸಂಪದವು ವಿಪದವಿವು ಮೊದಲು ಬೇಕು ಬೇಡೆಂಬಿತು ವಸ್ತುವೆರಡು ॥
ಇಳೆಯೊಳಾಂತರ ಮಹಾಶಮ ಸಂಧಾಪಾನಸಾ
ಫಲಿತ ಮತ್ತತೆಯಾಂತ ಘನ ಮಹಾತ್ಮರಿಗೆ ಮಂ
ಜುಳವ ಮಂಜುಳವಿದೆಂಬಿಂತುಮತಿಯಿಲ್ಲದಿರಲದರಿಂದ ಸರಿಯುಪ್ಪವು ॥೪॥

ಈಪರಿಯೊಳಾ ಗುರುವು ಸಂಚರಿಸುತಿರಲಿತ್ತ
ಕಾಪುರುಷಮಣಿ ಬಾಪುಸಾಹೇಬನಾದೊಡಂ
ಶಾಪದುರ್ವಾರ್ತೆಯಂ ಕೇಳಿ ತಾಪಂಗೊಂಡು ಸೈನಿಕರನನಿಬರನು ॥
ಕೋಪವೆಗ್ಗಳಿಸೆ ಕರೆಕಳುಹಿ ತಾನವರಿಗಾ
ಪಾಪಿಯಹ ದುಷ್ಟಮಡಿವಾಳನಂ ಪಿಡಿತಂದು
ಭೂಪಮಂದಿರದ ಮುಂದವನನಾನೆಯಕಾಲ್ಗೆ ಕಟ್ಟೆಳಸಿ ಕೊಲ್ಲಿರೆಂದಾ ॥೫॥

ಸಾಮಾನ್ಯವಾಗಿ ಮುಳಿಸೆಂಬ ಕಿಚ್ಚದುವೆ ಕೇಳ್
ನೇಮದಿಂ ತನ್ನೋರ್ವನನೆ ಸುಡುಗುಮೆಂದಬಳಿ
ಕಾ ಮಹಾಪುರುಷರೊಡನಾದ ಮುಳಿಸೆಂಬ ಕಾಳ್ಗಿಚ್ಚು ವಂಶವ ದಹಿಸದೇ ॥
ಭೂಮಿಯೊಳಗೀ ಕ್ರೋಧವೆಂಬುದಂ ಬಗೆಯಲಿದು
ಕಾಮಮೊದಲಾದಾರುರಿಪುಗಳೊಳು ಮುಖ್ಯಮೆನ
ಲಾ ಮುಖ್ಯ ಕೋಪವನು ಬಿಟ್ಟೊಡೆಲ್ಲರಿಗೆ ಸುಖವಂತದಿಲ್ಲ ತಿಳಿಯೋ ॥೬॥

ಮುಳಿಸು ಬರಲಿನಿತು ಕಣ್ಗಾಣದಿಹುದಾತ್ಮನುತಿ
ಯಳಿವುದೇಗೈವುದಿನ್ನೆಂಬ ಮುಂದಣ ಕಾರ್ಯ
ದೊಳವು ತಿಳಿಯದು ಮತ್ತಮಾಗುವುಜ್ಜುಗವು ಕೆಟ್ಟುಪೋಪುದು ನೈಜವೈಸೆ ॥
ಇಳೆಯೊಳಗೆ ಚಂಡಾಲನಿರಲಾರುಮವನೊತ್ತಿ
ನೊಳಗಿರದೆ ದೂರಮೈದುತ್ತಿರ್ಪರದರಂತೆ
ಮುಳಿಸೆಂಬ ಚಂಡಾಲನೊಳಗಿರಲು ಸದ್ಗುಣಂಗಳು ಬಾರವವನ ಬಳಿಗೆ ॥೭॥

ವಂಶವಿಧ್ವಂಸನಾಸ್ಪದರೋಪಗೂಡಿದ ನೃ
ಶಂಸನಹ ಬಾಪುಸಾಹೇಬನವನೊರೆದಂತೆ
ಪ್ರಾಂಶುವಾಜಿಗಳೇರಿ ಸೈನಿಕರು ಗುರುವರದ ಪುಡುಕುತ್ತಮೈತರುತಿರೆ ॥
ಅಂಶುಮಂತನುಮಾಗಸದ ನಡುವೆ ಬಂದೊಡಂ
ತಂಸನಾಕರವುಹಿಮು ಮಡಿವಳರ ವಾರ್ತೆ ತಾ
ನಂಶಮಾತ್ರವು ಕಿವಿಗೆ ಬೀಳದಿರೆ ಮುಂದಕ್ಕೆ ಬರುತಿರ್ದರೇನೆಂಬೆನು ॥೮॥

ಅಂದು ದಂಡದು ಮುಂದೆ ಪುಡುಕುತ್ತ ಬರುತಿರಲ್
ನಂದಿಹಳ್ಳಿಯು ಗುಡ್ಡದೊಳಗವನಕಾಣುತ್ತೆ
ಮುಂದೊರೆದು ಪಿಡಿಯುಬರಲಾಗ ಮಡಿವಾಳಗುರು ದಂಡಿನವಗಿಂತೆಂದನು ॥
ಹಿಂದಕ್ಕೆ ಸರಿಯಿರೈ ಸೂಳೆಮಕ್ಕಳೆ ನಿಮಗೆ
ಬಂದುದೇಂ ಸಾವಿಂದು ಪೋಗಿರೈ ಜೀವದಿಂ
ದೆಂದು ನುಡಿದೊಡ ಮಾಗ ಮಡಿವಾಳಗುರುವರನ ಬೆನ್ನಡರಿ ನಡೆದರವರು ॥೯॥

ಕಂಡು ಮಡಿವಾಳಗುರು ಭಂಡರೇ ನಿಮಗಿನ್ನು
ದಂಡಧರನೂರನ್ನು ತೋರಿಸುವೆನೆಂದು ಮುಂ
ಕೊಂಡು ಕಲ್ಗುಂಡುಗಳ ಕೈಕೊಂಡು ವೇಗದಿಂದೆಸೆಯೆ ಕಲ್ಗಗಳ ಹೊಡೆತದಿ ॥
ದಂಡಿನವರಡಿಗಳಾ ಕುದುರೆಗಳ ಕಾಲ್ಗಳುಂ
ತುಂಡು ತುಂಡಾಗುತಿರಲೊರಗಿದರು ಕೆಲಬರದ
ಕಂಡು ಕಣ್ಣಾರೆ ತಾವ್ ಬೆದರಿದರು ಮತ್ತುಳಿದ ಸೈನಿಕರು ತಿರುಗಿದರಲಾ ॥೧೦॥

ಆ ಶಿಶಂಬರವೆಂಬ ಗ್ರಾಮಂಬರಂ ಪಿಡಿಯ
ಲಾಶೆಯಿಂ ಬರುತಿರ್ಪ ದಂಡಿನವನೆಲ್ಲರ
ನ್ನಾ ಶೂರ ಮಡಿವಾಳ ಗುರುಮೂರ್ತಿ ಪಿಂದಿನಂತಾ ಕಲ್ಲು ಗುಂಡುಗಳನು ॥
ನಾಶಗೊಳಿಸಲು ತೂರೆ ಓಮ್ಮೆಟ್ಟಿ ಪೋಣವರು
ಪಾಶರಹಿತನ ವೀರಮಡಿವಳನ ಬೆಂಬತ್ತಿ
ದೇಶದೊಳು ಬಳೆದ ಜಳವಡಿಯ ಸನಿಹದೊಳವನ ಪಿಡಿದರಾ ಸೈನ್ಯಜನರು ॥೧೧॥

ಎಲೆ ಸೂಳೆಮಕ್ಕಳಿರಾ ಪಿಡಿದೇನು ಮಾಡುವಿರಿ
ಖಲನಪ್ಪ ಬಾಪ್ರಸಾಪೇಬನವನೊರೆದಂತೆ
ಮಲತೀಗ ನೀವೆನ್ನ ಪಿಡಿಯಬಹರೇ ಬೇಡ ಕೆಡಬೇಡಿರೈ ಪೋಗಿರಿ ॥
ಛಲದಿಂದ ತಾನುಸುರೆ ಕಾಲಾಳು ಸದ್ಗುರುವೆ
ನೆಲದೊಳಾಳ್ನನ ತಪ್ಪದಾಳಿಂಗೆಯೆಂಬಂತೆ ನಮ
ಗೊಳಗಾದುದಾಪತ್ತದಿಂತಾದೊಡಂ ತಮ್ಮನೊಯ್ಯುವೆವು ನೃಪನ ಒಳಗೆ ॥೧೨॥

ಅನಿತರೊಳು ದಿನಮಣಿಯು ಮುನಿಮಣಿಯ ಬಂಧನವ
ನೆನಿತು ನಿರುಕಿಪುದೆಂದು ನೆನೆದು ಪಶ್ಚಿಮ ಶಿಖರಿ
ಘನನಿತಂಬಸ್ಥಲದಿ ಮರೆಯಪ್ಪುದೊಳಿತೆಂದು ತನುವ ಮರೆಗೈದನವನು ॥
ಇನನಿಂತು ಮರೆಯಾದೊಡಾನೆನಿತು ನೋಳ್ಪುದಕ
ಟೆನುತೆಂದು ಪದ್ಮಿನಿಯು ಕಣ್ಮುಚ್ಚಿದಳು ಕೋಕ
ಗಣವೆಂದು ಮೆಲ್ಲನೇ ಸ ದುದು ಧರಾತಲದಿ ಮಹಿಮರಸ್ವಾರ್ಮರೆವರು ॥೧೩॥

ಸಿಕ್ಕನೈ ಮಡಿವಾಳ ಗುರುದೇವನಕ್ಕಕ್ಕ
ದಕ್ಕಿದನು ನಮಗಿಂದು ರಾಜನೊಲುಮೆಗೆ ನಾವು
ಪಕ್ಕಾದೆವೆಂದೆನುತೆ ಹಿಗ್ಗಿಯವರೆಲ್ಲರುಂ ಮಡಿವಾಳ ಗುರುದೇವನ ॥
ತಕ್ಕ ಬಂಧನದೊಳಿವನಿಡವೇಳ್ಕುಮೆಂದೆನುತೆ
ಗಕ್ಕನೇ ಊರೊಳಿಹ ಮಲ್ಲಿಕಾರ್ಜುನನ ಗುಡಿ
ಮುಕ್ಕರದೊಳೊಳ ಪೊಗಿಸಿ ಮಿಕ್ಕ ಮಾತೇನದಕೆ ಜೀಗಮಂ ತೊಡರಿಸಿದರು ॥೧೪॥

ಬೆಳವಡಿಯ ಜನರೆಲ್ಲ ಕಳವಳಿಸಿ ಕಣ್ಣಿಂದ
ದಳ ದಳನೆ ನೀರೊಕ್ಕುತಿರಲು ಗುರುಮೂರ್ತಿ ಮಡಿ
ವಳದೇವನಿಗೆ ಪೊರಗೆ ನಮಿಸುತ್ತ ಮಿಸುತ್ತೆ ಮುಗುಡಗೊಂಡಿರ್ದರವರು ||
ಬಳಿಕ ಸೈನಿಕ ಜನರು ಬಿಡದಲೀವಾರ್ತೆಯ
ನಿಳೆಯೊಡೆಯ ಬಾಪುಸಾಹೇಬನಿಗೆ ಪೇಳ್ವುದಕೆ
ತಳುವ ಮಾಡದಲವರು ಕಿತ್ತೂರಿಗೈತಂದು ಪೇಳ್ದರಾ ವೃತ್ತಾಂತವ ||೧೫||

ಈಗ ಸಂಜೆಯು ಮೀರಿ ರಾತ್ರಿಯಾಗಿಹುದು ನಾಂ
ಪೋಗಿ ಮಾಡುವದೇನು ಬೆಳಗಾಗಲು ಮೇಲೆ
ಸಾಗಿ ಮಾಡಿವಾಳನಿಲ್ಲಿಗೆ ತಂದು ಶಿಕ್ಷೆಯಂ ಕೊಡುವುದೆಂದಾಲೋಚಿಸಿ ||
ಬೇಗನೇ ಬಾಪುಸಾಹೇಬ ತನ್ನವರಿಗಿದ
ನಾಗಳುಸುರುತೆ ಮೇಣು ದಂಡಿನವರ್ಗಂ ಪೇಳಿ
ರಾಗದಿಂದವರನ್ನು ಬುಲ್ಲವಿಸಿ ನಿಲ್ಲದಲೆ ಬೆಳವಡಿಗೆ ಕಳುಹಿಸಿದನು ||೧೬||

ಆ ರಾತ್ರಿ ಪೊರಗೆ ದಂಡಿನ ಜನರು ಕಾವುತಿರೆ
ವೀರ ಮಡಿವಳಯೋಗಿ ಗುಡಿಯ ಶಿಖರದ ಕಲ್ಲ
ನಾರರಿಯದಂತೆಪೋಲ್ ಕಿತ್ತೊಗೆವುತಾ ಕಂಡಿಯಿಂದ ಪೊರಬೀಳ್ದನವನು ||
ದಾರಿಗಾಣದೆ ಮುಂದೆ ಬೆಳೆದ ಮುಳಗಳ್ಳಿಯಂ
ಪಾರಿ ಮುಂದಣ ದಾರಿವಿಡಿದಿರುಳು ಸೊಗಲವತಿ
ಘೋರತರ ಕಾಂತಾರದೊಳಪೊಕ್ಕು ನಿಲ್ಲುತಿರಲಾಬಳಿಕ ಬೆಳಗಾದುದು ||೧೭||

ನೆಲಸಿರಲ್ಕಣಿಮಾದಿ ಸಿದ್ಧಿ ಯಾಪರಿ ಗುಡಿಯ
ಶಿಲೆಯ ಕೀಳ್ತೊಗೆದು ಪೊರಬೀಳ್ವ ಕೃತಿಯಿಂ ತನಗೆ
ಫಲವದೇನಂಜೆನಲಸಾಧಾರಣದ ಶೌರ್ಯಮುಂ ತನ್ನೊಳಿರ್ಪುದೆನು ||
ಬಲವಂತರಾದ ದಂಡಿನಜನಕೆ ತೋರಿಸ
ಲ್ಕೊಲವಿನಿಂ ಗುರುವರ್ಯನಿಂತು ಗೈದನು ಪಿಂತೆ
ಬಲಿನೃಪನ ತುಳಿದಕೃಷ್ಣನು ತಾನು ಕೈಯಿಂದ ಗೋವರ್ಧನವನೆತ್ತನೇ ||೧೮||

ಕಿಕ್ಕಿರಿದ ಮರಗಳಿಂ ಸೊಕ್ಕಿದೆಕ್ಕಲಗಳಿಂ
ಮಿಕ್ಕುಗರ್ಜಿಪ ಚಿರ್ಚ ಪುಲಿಗಳ ಸಮೂಹದಿಂ
ಸೊಕ್ಕಿ ಸುಳಿವಿತರ ಮೃಗನಿಕರದಿಂದಾವನವು ಭೀತಿಕರಮಾಗಿರ್ಪುದು ॥
ಅಕ್ಕಟಾ ಇಂತಪ್ಪ ವನವನ್ನು ಸದ್ಗುರುವು
ಪೊಕ್ಕು ಪನ್ನೊಂದುದಿನಮುಪವಾಸಮಿರ್ದು ತಾಂ
ತಕ್ಕನುಷ್ಠಾನದೊಳಗಿರ್ದನಾದೊಡಮಾರು ಬಣ್ಣಿಪರೊ ತನ್ಮಹಿಮೆಯು ॥೧೯॥

ಬಲ್ಲಿದನು ಮಡಿವಳಗುರೂತ್ತಮನು ಸೊಗಲದೊಳು
ಸೊಲ್ಲಿಸಲು ಬಾರದಿಪ ತತ್ತಪೋನುಷ್ಠಾನ
ದಲ್ಲಿರ್ಪನವನ ನಾನೇನ ಬಣ್ಣಿಸಲೀಗಳೆನಗಳವು ನೆರೆ ಸಾಲ್ಗುಮೆ ॥
ಚಿಲ್ಲಿಂಗದೊಳು ಸಕಲ ಕರಣಂಗಳೆಲ್ಲವುಂ
ತಲ್ಲೀನಮಾಗಿರಲ್ಕುಪರತಿಯ ದಶೆಯೊದಗೆ
ಬಲ್ಲಹಸಿಗಾತಂಗೆ ಪನ್ನೊಂದುದಿನಗಳೆದೊಡಿಲ್ಲವಂಗದಭಾವವು ॥ ೨೦ ॥

ಇತ್ತ ತತ್ತಾಪಸನ ಕಾಜಿನವರೆಲ್ಲರುಂ
ಹೊತ್ತುದಯಿಸಲು ಗುಡಿಯ ಬೀಗಮಂ ತೆಗೆದು ತಾ
ವೊತ್ತರದೊಳೊಳಪೊಕ್ಕು ನೋಡುತಿರಲಲ್ಲಿ ಮಡಿವಾಳನಂ ಕಾಣದೆ ॥
ಚಿತ್ತದೊಳಗಚ್ಚರಿಯದಚ್ಚೊತ್ತಿದಂತಾಗೆ
ಸುತ್ತಲುಂ ಮತ್ತೆ ಪುಡುಕಲು ಪೋದಡಾ-ಯೋಗಿ
ಸತ್ತಮನು ದೊರೆಯದಿರೆ ಬೇಸತ್ತು ದಂಡಿನವರೈದಿದರು ಕಿತ್ತೂರಿಗೆ ॥ ೨೧ ॥

ಆ ವೇಳೆಯೊಳು ಬಾಪುಸಾಹೇಬನೆಲ್ಲರಿಂ
ಶೀವಿರ್ದ ಘನಸಭಾಮಂದಿರದೊಳಿರುತಿರ
ಲ್ಕಾವೀರಸೈನಿಕರು ಮಣಿದು ನೆಲೆದರೆಯನೇ ಕೇಳಿಮ್ಮಬಿನ್ನಪವನು ॥
ಸಾವಿನಂಜಿಕೆ ದೊರೆದು ವಿಶ್ವಪ್ರಯತ್ನದಿಂ
ನಾವವನ ಮಡಿವಳನ ಹಿಡಿತಂದು ಬೆಳವಡಿಯ
ದೇವಮಂದಿರದೊಳಗೆ ಪುಗಿಸಿ ಬೀಗವನಿಕ್ಕಿ ರಾತ್ರಿ ಕಾವಲಗೈದೆವು ॥ ೨೨ ॥

ತಮ ಗಾದೊಡಿದ ನಾವು ಪೇಳ್ವೆವೈ ದೊರೆಯೆ
ಅಮಮ ಬೆಳಗಾದಮೇಲ್ ಬೀಗದೆಗೆದೀಕ್ಷಿಸಲು
ಕುಮತಿ ಮಡಿವಾಳನೊಳಗಿಲ್ಲದುದ ಕಂಡು ಕಡುಭ್ರಮೆಗೊಂಡು-ನಾವೆಲ್ಲರು ॥
ಶ್ರಮದಿಂದ ಸುತ್ತಲುಂ ಮತ್ತೆ ಪುಡುಕಿದೊಡೆಲ್ಲಿ
ನಮಗವನು ಕಾಣದಿರೆ ಬಂದೆವೈ ನಿಮ್ಮೆಡೆಗೆ
ಯಮನ ಬಾಯ್ಬುದ್ಧತ್ತಾದ ಮಡಿವಳನು ನುಸುಳಿದೊಡೆ ಮುಂದೇನು
ಗತಿಯೆಂದರು ॥೨೩॥

ಎಂದುದಂ ಕೇಳಿ ಮುಳಿಸಿಂದ ನರಪತಿ ತಾನು
ಮಂದ ಸಂತಾಪದಿಂದಾ ದುಷ್ಟ ಮಡಿವಳನು
ಬಂದ ಮಿಳ್ತುವಿನ ಬಾಯಿಂದ ಜಾರಿದನೆ ಫಡ ಎಂದಾಗ ಗರ್ಜಿಸುತ್ತೆ ॥
ಮಂದಮತಿ ಮಡಿವಾಳನೆಲ್ಲಿರ್ಪನಲ್ಲಿರಲಿ
ಮುಂದೆ ನೋಡುವ ಬಿಡಿರಿ ಪೋಗಿರೆಂದಾ ಜನರ
ನಂದು ಕಳುಹಿಸಿ ಮತ್ತಮೊಳಗೊಳಗೆ ತಾಪದಿಂ ಬೆಂದೊಡಲನಾಗಿರ್ದನು ॥೨೪॥

ಎನಿತೊ ಪ್ರಾಕ್ತನ ದುರಿತಕರ್ಮದುಪಟಳವವನು
ಘನಮಹಿಮನನಘನನವದ್ಯನಹ ಮಡಿವಾಳ
ಮುನಿಯೊಡನೆ ಸೆಣಸಿ ಬಾಳುವನೆ ಬಿಡು ಹರಿಯೊಡನೆ ನರಿ ಸೆಣಸಿ ಬಾಳ್ವುದುಂಟೆ ॥
ಅನಲನಂ ಪದಗೊಳಗೆ ಕಟ್ಟಿ ನಂದಿಸಲುಂಟೆ
ಕನಲಿದುರುಗನ ಪಿಡಿದು ಮೇಲೆತ್ತಿದವರೊಳರೆ
ಮುನಿದು ಮದಿಸಿದ ಕರಿಯ ಕೈಯ್ಯನೆಳೆದವರುಂಟೆ ಧರೆಯೊಳಗಿದಚ್ಚರಿಯವು ॥೨೫॥

ಬೆಳವಡಿಯ ಮಲ್ಲಿಕಾರ್ಜುನನ ದೇಗುಲದ ಬಾ
ಗಿಲಕೆ ಹಾಕಿದ ಬೀಗವಿರ್ದಂತೆ ಪೋಲಿರಲು
ಪೊಳಗಿರ್ದ ಮಡಿವಾಳ ಗುರುವಿಲ್ಲವಂತೆ ಗಡ ಇದು ಚೋದ್ಯವೆಂದೆಲ್ಲರು ॥
ತಳುವದಾ ದೇಗುಲಕ್ಕೈತಂದು ನೊಳ್ಪನಂ
ಕಳಚಿರ್ದ ಮಾಳಿಗೆಯ ಕಲ್ಲನೊಂದಂ ನೋಡಿ
ಬಲವಂತರಪ್ಪ ಮಡಿವಳರ ಘನಮಹಿಮೆಯುಂ ಕೊಂಡಾಡಿದರು ಬಿಡದಲೆ ॥೨೬॥

ಸೊಗಲದೊಳಗಿರುತಿರ್ಪ ಮಡಿವಾಳ ಶಿವಯೋಗಿ
ಸುಗಮವಲ್ಲದ ತಪನನೆಸಗಿ ಪನ್ನೊಂದು ದಿನ-
ಮಗಲದಾರರಿಯದಂತಾ ಕೊಳ್ಳದೊಳು ನಿರಾಹಾರದಿಂದಿರುತಿರ್ದನು ॥
ಹಗಲಿರುಳು ಪಟ್ಟು ಮೇಲೆ ಬಟ್ಟೆಸಿಟ್ಟು ಬಟ್ಟೆಯಿ
ಲ್ಲಗದೊಳಾಡುವ ಘೋರವ್ಯಾಗಗಳಂಜಿಕೆಯಿಲ್ಲ
ಸೊಗವನೆಳ್ಳನಿತಾಶಿಸದ ಗಾಳಿವಾಳಿಯೊಳಗೆ ತಪವಿರ್ದನಾ ವಿರತನು ॥ ೨೭ ॥

ಪನ್ನೆರಡನೆಯ ದಿವಸವಲ್ಲಿಂದ ಪೊರಮಟ್ಟು
ಮುನ್ನಿರ್ದ ಬೆಳವಡಿಯ ಗ್ರಾಮಕ್ಕೆ ಸದ್ಗುರುವು
ತನ್ನ ಭಕ್ತರ ಕಾಣಲಿಚ್ಛೆಯಿಂದೈತರಲು ಸದ್ಭಕ್ತರೆಲ್ಲರವರು ॥
ಮನ್ನಣೆಯನಾ ಗುರೂತ್ತಮರ ಮಡಿವಳರ ತಾ
ವುನ್ನತಾಸನದಲ್ಲಿ ಕುಳ್ಳಿರಿಸಿ ವಂದಿಸ
ಲ್ಕಿನ್ನೀಗಳಾಂ ಪೋಗುವೆನು ಜಕಾತಿಯ ಬಸವಲಿಂಗನ ಗೃಹಕ್ಕೆಂದನು ॥ ೨೮ ॥

ಮಂಗಲನು ತಾನೊರೆದಪರಿ ಜಕಾತಿಯ ಬಸವ
ಲಿಂಗಪ್ಪನಾ ಮನೆಗೆ ಬರಲವಂ ಮುದದಿ ಸಾ
ಷ್ಟಾಂಗ ಪ್ರಣಾಮಮಂ ಗೈವುತಿರಲಿರೆ ಬಸವಲಿಂಗ ಕೇಳ್ ಪೇಳ್ವೆನು ॥
ತುಂಗವಹ ಮಲ್ಲಿಕಾರ್ಜುನನ ಗುಡಿಯುಪಲವನು
ಭಂಗಗೈದಿರ್ದ ನಾನಾ ಕಲ್ಲನೀಗಳೇ
ಪಿಂಗದತಿ ಭಕ್ತಿಯಿಂ ಕುಳ್ಳಿರಿಸು ನೀನೆಂದು ಪೇಳಿದನು ಮಡಿವಾಳಗುರು ॥ ೨೯ ॥

ಗುರುವಿನಾಣತಿಯಂತೆ ಬಸವಲಿಂಗಪ್ಪನುಂ
ಮರುದಿವಸಮಾಗುಡಿಯ ಕಿತ್ತಿರ್ದ ಕಲ್ಲನಾ
ತುರದಿಂದ ಕುಳ್ಳಿರಿಸಿ ಮೊದಲಿನಂದದಿ ಮಾಡೆ ಗುರುವು ಸಂತಸಗೊಂಡನು ॥
ನರಜನ್ಮವೆತ್ತಿರ್ದ ನರರಿಗೀಧರೆಯೊಳಗೆ
ಗುರುಭಕ್ತಿಯೋ ಮುಖ್ಯಮಾ ಪರಮಗುರುಭಕ್ತಿ
ಯಿರಲವನೆ ಧನ್ಯನುಂ ಮಾನ್ಯನುಂ ಮೇಣವನೆ ಕೃತಕೃತ್ಯನುಂ ಸ್ತುತ್ಯನು ॥ ೩೦ ॥

ಒಂದು ದಿನ ಗುರುವರನು ಕಮ್ಮಾರನ ಕರೆದು ಕೇ
ಳೊಂದ ಯೋಮಯುಮಾದ ಬೇಡಿಯದು ಬೇಕು ನೀ
ನಿಂದು ನಾಳೆನ್ನದೀಗಳೆ ಮಾಡಿ ತರ್ಪುದೆಲನವನು ನಡುಗುತ್ತೆಂದನು ॥
ತಂದೆ ನಿಮಗೀಗ ಬೇಡಿಯ-ನೀಯಲಪ್ಪೆ ನಾ
ನೆಂದಳ್ಕಿ ಪೇಳೆ ಗುರು ಸೂಳೆಮಗನೇ ಪೋಗು
ಸಂದೆಗವ ಮಾಡದಿರು ನೀನೆಂದು ಬೆದರಿಸಲ್ಕವನದಂ ತಂದಿತ್ತನು ॥೩೧॥

ಪೂವಡಿಗನಂ ಕರೆದು ಪೂದಂಡೆಗಳ ನಾಲ್ಕ
ನೀವುದೆನಲದರಂತೆ ಪೋಲವನು ತಂದು ಕುಡ
ಲಾ ವಿರತಮಣಿ ಜಕಾತಿಯು ಬಸವಲಿಂಗನಿಗೆ ಚಿನಿಪಾಲ ತಂಬಿಗೆಯನು ॥
ಆ ವಿಮಲಶರ್ಕರೆಯ ಸೇರೊಂದನುಂ ತೆಂಗು
ವೀವಿಧವಸ್ತುಗಳ ಮೇಣು ಕೊಡಪೊಂದನುಂ
ಭಾವಿಸದೆ ತರ್ಪುದೆನೆ ತಳುವದಾತನು ನಲುವಿನಿಂ ತಂದು ಮುಂದಿಟ್ಟನು ॥೩೨॥

ಬಳಿಕ ಮಡಿವಾಳ ಗುರು ವೀರಭದ್ರನ ಸದನ
ದೊಳಪೊಕ್ಕು ಕಾಯೊಡೆದು ಪಾಲ್ಸಕ್ಕರೆಯ ಕುಡಿದು
ತಳುವದಾ ಗುಡಿಯ ಶಿಖರದ ಮೇಲೆ ತಾ ನಿಂದು ಬರಿಗೊಡವನೆತ್ತಿ ಸುರಿಯೆ ॥
ಬಳಬಳನೆ ಪೊಂಗಳಂಗಳದಿ ಬೀಳಲ್ಕವನು
ಪೊಲೆಯರೇ ಆಯ್ದು ಕೊಳಲೆಂದು ಸುರಲಂತ್ಯ
ಜರಬಳಗವೆಲ್ಲವದನಾಯ್ದು ಮುದಗೊಂಡು ಗುರುವಿನಂ ಸಂತಸದಿ ಬಣ್ಣಿಸಿದರು॥೩೩॥

ಪೊಂಗಳಂ ಗಡ ಸುರಿದ ಗುರುಗಳ ಮಹತ್ವವನು
ಕಂಗಳಿಂ ಮನವಾರೆ ನೋಳ್ಪ ಜನ ಜಂಗುಳಿಯು
ಸಂಗರಿಪುವಾ ಕೃತಿಯು ಮಡಿವಾಳಯೋಗಿಯನು ಭಕ್ತಿಯಿಂ ಪೊಗಳಿದರಲಾ ॥
ತುಂಗ ಕಲ್ಯಾಣದೊಳು ಬಸವನಾ ಜೋಳವಂ
ಕಂಗೊಳಿಪ ಮುತ್ತುಗಳ ಮಾಳ್ಪುದೇನಚ್ಚರಿಯು
ಮಂಗಲಾಕಾರನೀ ಗುರುವು ಬರಿಗೊಡದಿಂದ ಪೊಂಗರೆದುದರಿದೆಂದರು ॥೩೪॥

ಬಳಿಕ ಸದ್ಗುರುವು ಗುಡಿಯೊಳಪೊಕ್ಕು ತಾಂ ದಂಡೆ
ಗಳ ಮಂಡೆಯಲಿ ಧರಿಸಿ ಬೇಡಿಯುಂ ಕಾಲೊಳಗೆ
ಸಿಲುಕಿಸುತೆ ಬಸವಲಿಂಗಪ್ಪನಂ ಕರೆದೆಲವೊ ಬಾಗಿಲಕೆ ಬೀಗನಿಕ್ಕಿ
ಕಳೆವುದೈ ನೀನಿಲ್ಲಿ ಪನ್ನೊಂದು ದಿನಗಳಂ
ಬಳೆವ ಭಕ್ತಿಯೊಳಿರ್ಪುದೆಂದುಸುರಲವರಂತೆ
ತಿಳಿತ ಭಕ್ತಿಯೊಳವನು ಪನ್ನೊಂದು ದಿನವು ತಾಂ ಬಾಗಿಲವ ಕಾಯ್ದಿರ್ದನು ॥೩೫॥

ಪನ್ನೊಂದನೆಯ ದಿನದಿ ಗುರುವರರು ಕಾಶಿಯೊಳು
ಮುನ್ನಿರ್ಪ ಪಾಂಗಿನಿಂದೊಂದೋಲೆಯುಮದು ಬರಲು
ಹುನ್ನಣೆಗೆ ಪಕ್ಕಾದ ಬಸವಲಿಂಗಪ್ಪನದನೋದಿಯೆಲ್ಲರಿಗೆ ಪೇಳೆ ॥
ಇನ್ನೊರೆವುದೇನಿಲ್ಲಿ ಗುಡಿಯೊಳಗೆ ಗುರುವರರು
ಸನ್ನುತಾತ್ಮರುಮಿರ್ದು ಪೊರಬಾಗಿಲಕೆ ಬೀಗ
ವನ್ನು ಹಾಕಿಸಿ ತಾವೆ ಕಾಪಿರಿಸಿ ಬಳಿಕೀಗ ಕಾಶಿಯೊಳಗಿರ್ದುದರಿದು ॥೩೬॥

ಎಂದು ಬಗೆಯೊಳು ಬಗೆದು ಪ್ರತ್ಯಕ್ಷಮರಿಯುವೇ
ಳ್ಕೆಂದು ಬೀಗವ ತೆಗೆದು ಒಳಪೊಕ್ಕು ನೋಡುತಿರ
ಲಂದು ಗುರುಗಳು ಕಾಣದುಳಿದ ಪೂವಿನದಂಡೆಗಳು ನಿಗಳವಿನಿತಿರ್ದವು ॥
ಮುಂದಿಯೆಲ್ಲವ ನೋಡುತಂದು ಬೆರಗಾಗಿ ಮನ
ಬಂದಂತೆ ಮಡಿವಾಳಗುರುಗಳಂ ಬಣ್ಣಿಸಲು
ಸಂದಿರ್ದರೇನೆಂಬೆನವರ ಭಯಭಕ್ತಿಯುಂ ಪರಮಾನುರಕ್ತಿಯುಮನ್ನು ॥೩೭॥

ಎಲೆ ಗುರುವೆ ನೀನಂದು ದಂಡಿನವರಿಗೆ ಸಿಗದೆ
ಬಲುಯತ್ನದಿಂ ಕಡೆಗೆ ಪಿಡಿವೊಡಂ ಗುಡಿಯೊಡೆದು
ದಳೆದ ಕಣ್ಣಿಗೆ ಬೀಳದಂತೈದೆ ಬಳಿಕ ಮೋಣಿಲ್ಲಿಗೈತಂದೆ ತಂದೆ ॥
ಚೆಲುವಪ್ಪ ವೀರಭದ್ರೇಶ್ವರನ ದೇಗುಲವ
ನೊಲವಿನಿಂ ಪೊಕ್ಕು *ದಂಡೆಯು ನಿಗಳವಿರಿಸಿ ಬಾ
ಗಿಲವಿಕ್ಕಿ ಕಾಪಿರಿಸಿದೀ ನೀನು ಕಾಶಿಯೊಳು ನೆಲಸಿರ್ಪೆ ಗುರುರಾಯನೇ ॥೩೮॥

*ದಂಡೆಗಳನಲವಡಿಸಿ ನಿಗಳವನು ಕಾಲ್ಗಳಿಗೆ ತೊಡರ್ಚಿ

ಅಣುವಿನಿಂದಣುವು ಸುಮಹತ್ತಿಗಿಂ ಸುಮಹತ್ತು
ವೆನಿಸಿರುವ ನಿನಗೆಂಟು ಸಿದ್ಧಿಗಳು ಕಾಲ್ಕಸವು
ತ್ರಿಣಯನನ ರೂಪಿಡಿದ ನಿನಗೇನಸಾಧ್ಯವಿದು ಸರ್ವಮುಂ ವ್ಯಾಪಿಸಿರುವ ॥
ಪ್ರಣವರೂಪನೆ ನಿನ್ನ ಮಹಿಮೆಯುಂ ಪೇಳ್ವಡೆಂ
ಮಣಿಗಾದಿ ಶೇಷಂಗೆ ಸಲ್ಲದೆಂದೊಡೆ ಜಗದ
ತೃಣರೂಪ ಮಾನವರ ಪಾಡೇನು ತೆಗೆಯೆಂದು ಬಣ್ಣಿಸಿದರಾ ಭಕ್ತರು ॥೩೯॥

ಈ ತೆರದಿ ಕೊಂಡಾಡುತಾ ಭಕ್ತರೆಲ್ಲರುಂ
ಮಾತೇನು ಗುರುಯೋಗಸುಸಮಾಧಿಗೊಸುಗಂ
ಪೂತವಹ ಶಿವಗಣಾರಾಧನೆಯನೆಸಗುತಂ ಗುರುದರ್ಶನಾರ್ಥಮಾಗಿ ॥
ಖ್ಯಾತಮಪ್ಪ ಕಾಶಿಗೈತಂದು ಕೆಲವು ಜನ
ರೋತು ಗುರುಪದಸರೋಜಾತಯುಗಳಕ್ಕೆರಗಿ
ಪ್ರೀತಿ ಮಿಗೆ ಗುರುಗಳಂ ಪೊಳಲಿಗೈತರ್ಪುದಕೆ ಬೇಡಿಕೊಂಡರು ಸರ್ವರು ॥೪೦॥

ಆ ಮಾತು ಕೇಳಿ ಗುರುಮಡಿವಾಳಶಿವಯೋಗಿ
ಈ ಮಹಾ ಕಾಶಿಯೊಳು ಕೆಲದಿನಗಳಿರ್ಪೆವೈ
ಪ್ರೇಮದಿಂ ನೀವೀಗಳೂರಿಂಗೆ ತೆರಳಿರಯ್ ಪಿಂತಾವು ಬರ್ಪೆವೆನಲು ॥
ಆ ಮಹಿಮರುಕ್ತಿಯಂತಾ ಯಾತ್ರೆಯುಂ ಗೈದು
ಭೂಮಹಿತ ಮಂಗಲಾಕರ ದೇವಗಂಗೆಯುಂ
ನೇಮದಿಂದರ್ಚಿಸುತೆ ತೀರ್ಥಮಂ ಕೊಂಡವರು ಮರಳಿದರು ತಮ್ಮೂರಿಗೆ ॥೪೧॥

ಕೇವಲಂ ಕೈಲಾಸವೆನಿಪ ಕಾಶಿಯೊಳವನು
ಭಾವಜಾತಾರಿಯವತಾರಿಯಹ ಗುರುವರನು
ಸಾವಧಾನದೊಳಂದು ಶಿವಯೋಗದೊಳು ಕಾಲಗಳೆದಿರ್ಪ ಸಮಯದಲ್ಲಿ ॥
ಧೀವಿದಿತ ನರಸಿಂಹನೆಂಬೋರ್ವನಾಚಾರ್ಯ
ನೀ ವಿಶ್ವನಾಥನಾಕೃತಿಯ ಗುರುಮಡಿವಳರ
ಸೇವೆಗೈವುತೆ ತಾನು ಶಾಸ್ತ್ರದಭ್ಯಾಸವನು ಮಾಡತೊಡಗಿರ್ದನವನು ॥೪೨॥

ಅವನ ಸದ್ಗುಣಗಣವನವನ ಘನ ನಮ್ರತೆಯು
ನವನ ನಿಜಸೇವೆಯನ್ನವನ ಗುರುಭಕ್ತಿಯು
ನ್ನವನ ಧೀಸಂಪದವನವನ ವಿಲಸದ್ಬ್ರಹ್ಮಚರ್ಯವನ್ನವನ ಶಮವ ॥
ಅವನ ನಿರ್ವಂಚನದ ಸುಪವಿತ್ರ ವೃತ್ತಿಯು
ನ್ನವನು ನಿರುತಂ ಮಾಡುವಭ್ಯಾಸ ಸಕ್ತಿಯು
ನ್ನವಿರತು ಕಾಣುತ್ತೆ ಗುರುಗಳಾತಂಗೆ ಘನಶಾಸ್ತ್ರವಂ ಕಲಿಸುತಿಹರು ॥೪೩॥

ಪತಿತನಿವನೆಂದರಿವುತೆನ್ನನತಿಗಳೆದು ನೀಂ
ಪತಿಕರಿಸದೊಡೆ ತಾಯೆ ಭೂವಲಯದೊಳು ನಿನ್ನ
ಪತಿತಪಾವನ ನಾಮವದು ಕೇಳು ನಿಷ್ಫಲವು ದುಷ್ಕೀರ್ತಿ ನಿನಗಪ್ಪುದು ॥
ಕ್ಷಿತಿಯೊಳಗೆ ಸರ್ವಥಾ ನಿನ್ನ ತನ್ನಾಮವ
ನ್ನತಿ ಸಫಲವಂ ಮಾಳ್ಪೊಡೆನ್ನನ್ನು ಮರೆಯುವಲೆ
ಹಿತದಿ ಸಲಹೌ ದಯಾವತಿಯೆ ಪಾರ್ವತಿಯೆ ನೀಂ ದಯೆದೋರಿ ಪ್ರೇಮದಿಂದ॥೪೪॥

ಶ್ರೀಶಿವಾದ್ವೈತಪರವಿದ್ಯಾನವದ್ಯಾತಿ
ವೈಶದ್ಯ ವಿದ್ಯೋತಮಾನನ ಮಹಾಲಿಂಗ
ದೇಶಿಕಶಿಖಾಮಣಿಯ ಪಾಣಿಕಂಜಾತಸಂಜಾತನು ಕವೀಶಚರನು
ಆ ಸದಾಶಿವನೊರೆದ ಭೂಸದಾಶಿವನ ಯೋ
ಗೀಶನ ನಿರಾಶನ ವಿಪಾಶನುರುಮಡಿವಾಳ
ದೇಶಿಕನ ಸುರುಚಿರ ಪುರಾಣದೊಳಗೇಳನೆಯ ದಂಡಿಗುಂ ಸಿಗದ ಸಂಧಿಯು ॥೪೫॥

ಅಂತು ಸಂಧಿ ೭ಕ್ಕಂ ಪದಂಗಳು ೩೫೪ಕ್ಕಂ ಮಂಗಳಂ

ಶ್ರೀ ಶ್ರೀ

## ೮ನೆಯ ಸಂಧಿ

ಸೂಚನಾ.—ಸ್ವಾರ್ಥವನ್ನುಳಿದ ಶಿವಯೋಗಿ ಮಡಿವಾಳಗುರು
ತೀರ್ಥಯಾತ್ರೆಯ ಗೈದು ಬೊಮ್ಮರಕ್ಕಸನ ಬಹು
ಳಾರ್ತಿಯಿಂ ಪರಿಹರಿಸಿ ಮತ್ತಮುದರುದ್ಧೃತಿಯ ಗೈದು ಕಾಶಿಗೆ ಬಂದನು ||

ಶ್ರೀಗೌರಿಯಂಬಕ ಚಕೋರಕಂ ನಲಿವುತಿರ
ಲಾ ಗೌರಿಯಮಲಹೃತ್ಕೈರವಂ ಬಿರಿಯೆ ಮೇ
ಘಾಗಳಾಕೆಯ ಪಿರಿಯ ಹರಿಸಗಡಲದು ತುಂಬಿ ತುಳುಕುತಂ ಮೇರೆವರೆಯೆ ||
ಮೇಗೆ ತದ್ರೋಮಾಂಚ ಸಸ್ಯಾಳಿ ಬೆಳೆವುತಿರೆ
ಸಾಗಿ ದ್ರವಿಸಲ್ದೇಹ ಚಂದ್ರಕಾಂತೋಪಲಂ
ನಾಗಭೂಷಣನೇಂದುವಿನ ದರ್ಶನದೊಳೆಮಗೀಯಲದು ಕಡು ಹರಿಸಮಂ ||೧||

ಪರಮ ಪಂಡಿತ ರತಿವಿರಾಗಮಂಡಿತರು ಭವ
ಹರರು ಜೀವನ್ಮುಕ್ತ ಮಡಿವಾಳಗುರುವರರು
ವರನೃಸಿಂಹಾಚಾರ್ಯನೆಂಬನಂತೇವಾಸಿವೆರಸಿ ಕಾಶೀಕ್ಷೇತ್ರದೆ ।
ಇರಲಿವರ ವಿದ್ಯೆಯೊಳಗಣ್ಯ ನೈಪುಣ್ಯವ
ನ್ನರಿಯದಲ್ಲಿಯ ಕೆಲರು ಪಂಡಿತರಸೂಯೆಯಿಂ
ದರೆ ಬರಿವರಂ ಹೇಯಬುದಿ ಯಿಂ ಕಾಣುತ್ತೆ ವರ್ತಿಪರು ಬಿಡದೇಗಳುಂ ॥೨॥

ಅವರ ಪಂಡಿತರನಾದರಣವನಸೂಯೆಯನು
ಶಿವಯೋಗಿ ಮಡಿವಳರು ಸಮತಾನುಸರಣದಿಂ
ಶಿವಮೆಂದು ಭಾವದೊಳು ಬಗೆದು ವರ್ತಿಪರಲ್ಲದನ್ಯಥಾ ಬಗೆಯರವರು ॥
ಭುವನದೊಳು ಸುಜ್ಞಾನಿಗಳಿಗೆ ಪಂಡಿ
ತರಿಗುರುಶಿವಯೋಗಿಗಳಿಗುಮನು
ಭವಿಗಳಿಗೆ ಸಾರ ಸಮತೆಯು ಬೇಕದಿಲ್ಲವಡೆ ನಿಷ್ಫಲವದವರ ವ್ಯಕ್ತಿ ॥೩॥

ತೋರ್ಪುದದೇನೆಂದೊಡೋರಂತೆ ತಾನಿಹುದೆ
ಸಾರತರ ಸಮತೆ ಮ್ಯೇಣಾರು ಬಣ್ಣಿಸಿದೊಡೆ
ಘೋರತರ ಶೂಲದೊಳಗಿಟ್ಟರೆಂಬುದೆ ಮಹತ್ತರ ಸಮತೆಯೆಂದರಿವುದು ॥
ಆರು ತನ್ನನಳುಂಬವಾಗಿ ನಿಂದಿಸಿನೊಡೆ ಶ
ರೀರಕಾತ್ಮಸ್ವಾಂತಕಡಸಿರುವ ದುರ್ಮಲವು
ಸಾರಿತೆಂಬುದೆ ಮಹಾ ಸಮತೆಯೆಂದೊರೆದನಾ ಕಲ್ಯಾಣ ಬಸವೇಶನು ॥೪॥

ಈ ತೆರದ ಸಮತೆ ಸಮ್ಯಗ್ಜ್ಞಾನಿ ಮಡಿವಾಳ
ಪೂತ ಶಿವಯೋಗಿಗಳವಟ್ಟಿರ್ಪ ಕತದಿ ವಿ
ಖ್ಯಾತ ಕಾಶಿಯೊಳಿರ್ಪ ಪಂಡಿತರ ಗರ್ಹಣವನವಧರಿಸದವನಿರ್ಪನು ॥
ಈತನಲ್ಲತ್ಯಧಿಕ ಪಾಂಡಿತ್ಯನನ್ನರಿಯದವ-
ಧೂತಮಾರ್ಗದವನಿವನೇತಕಿಲ್ಲಿರ್ಪನಂ
ದಾತನಂ ಲೆಕ್ಕಿಸದಹಂಕಾರದಿಂದವದಿರಿರಲಾಗಳೊಂದು ದಿನವು ॥೫॥

ಘನಸಭೆಯುಂ ನೆರೆದವರಿಗಾಮಂತ್ರಣವ ಕೊಡಿಸಿ
ಮನವೊಸೆದು ಬರವಮಾಡಿ ನ್ಯಾಯದೊಳಗಂ ವ್ಯಾಕ
ರಣದೊಳಗುಮುಳಿದ ಶಾಸ್ತ್ರಂಗಳೊಳಗುಂ ಪೂರ್ವ ಪಕ್ಷಮಂ ನೆಗಳೆ ಬಳಿಕ ॥
ಜನವರಿಯೆ ಸರ್ವಜ್ಞ ಮಡಿವಾಳಗುರುಗಳಾ
ಕ್ಷಣ ಪೂರ್ವಪಕ್ಷಕ್ಕೆ ಸಿದ್ಧಾಂತವನ್ನುಸುರಿ
ಬಿರುದದಿಂ ತಾವುಮುಂ ಪೂರ್ವಪಕ್ಷವನೆಸಗೆ ಮೂಕರಾದರು ಸುಧಿಗಳು ॥೬॥

ಸರ್ವಜ್ಞತೆಯುದೆತ್ತ ಕಿಂಚಿಜ್ಞತೆಯುದೆತ್ತ
ಶರ್ವರೂಪವದೆಲ್ಲಿ ಖರ್ವನರರೂಪೆಲ್ಲಿ
ಸರ್ವಶಾಸ್ತ್ರಸ್ವರೂಪತೆಯೆಲ್ಲಿ ಮಿತಶಾಸ್ತ್ರಗಲಿತವರ ಬುದ್ಧಿಯೆಲ್ಲಿ ॥
ಗರ್ವಮಂ ನೀಗಿ ತತ್ಪಂಡಿತರು ಶಿವಯೋಗಿ
ಸಾರ್ವಭೌಮನ ಪದಕ್ಕೆರಗಿ ಶರಣಂ ಬೊಕ್ಕು
ಸರ್ವಥಾ ಸರ್ವದಾತನ ಪಾದಪೂಜೆಯಂ ಮಾಡಿ ಕೃಪೆಯಂ ಪಡೆದರು ॥೭॥

ಬ್ರಹ್ಮಂಗೆ ವೇದಾರ್ಥವನು ಕೇಳ್ವ ಪಾಂಗಿನಿಂ
ಬ್ರಹ್ಮಸುತನಿಗೆ ಭಕ್ತಿಸೂತ್ರಮಂ ಕೇಳ್ವಂತೆ
ಬ್ರಹ್ಮಸೂತ್ರಾರ್ಥವನು ವ್ಯಾಸಂಗೆ ಕೇಳ್ವಂತೆ ಭ್ರಾಂತರಹ ವಿಬುಧರವರು ॥
ಬ್ರಹ್ಮಾದಿ ಸುರರೆಸಪ ಪೂಜೆಗೊಂಬುವ ಪರ
ಬ್ರಹ್ಮರೂಪದ ಶಾಸ್ತ್ರ ಯೋಗಿಮಡಿವಾಳರಿಗೆ
ಬ್ರಾಹ್ಮಣರು ತಿಳಿಯುದವರೆಸಪ ಶಾಸ್ತ್ರದ ಪೃಚ್ಛೆಯಿಂತಾದುದಾ ಕಾಲದಿ ॥೮॥

ಇಂತನಂತಾನಂತಮಾದವನ ವೈದುಷ್ಯ
ಮಂ ತಿಳಿದೊಡಾ ಸುಧಿಗಳೆಂತಾದೊಡಂ ತಮ್ಮ
ಮುಂತಿರ್ದಸೂಯೆಯಂ ಬಿಡದಲೆ ದಿಗಂಬರತೆಗವರು ಪೇಸುತೆ ತಮ್ಮೊಳು ॥
ಸಂತತಂ ನಾಣ್ಗೆಟ್ಟು ಬತ್ತಲೆಯೊಳಿರುವನಿವ
ನೆಂತು ಕ್ಲೀಬನು ತಾನದಲ್ಲವಂತಾದೊಡಿಳೆ
ಯಂತರಾಳದೊಳೀತನೆಂತಹನು ಪೂಜ್ಯನೆಂದೆಲ್ಲರಾಲೋಚಿಸುವರು ॥೯॥

ಆ ವರ್ತಮಾನಮಂ ನರಹಿಂಹ ಶಿಷ್ಯಮಣಿ
ಯಾ ವೇಳೆಯೊಳು ಬಂದು ತಿಳುಪೆ ಮಡಿವಾಳಗುರು
ದೇವನದನೆಣಿಸದತಿ ಶಾಂತತೆಯೊಳಿರುತಿರಲು ಮತ್ತೊರ್ವ ನರಸಿಂಹನು ॥
ಕೋವಿದರ ದುಶ್ಚೇಷ್ಟೆಯನ್ನರುಪಲಂದು ವಿರ
ತಾವತಂಸನು ಮಹಾ ಮಡಿವಾಳಶಿವಯೋಗಿ
ಭಾವದೊಳು ಮುಂದಣ ವಿಚಾರಮಂ ಬಗೆಯು ನರಸಿಂಹನಿಗೆ ಪೇಳ್ದನಿಂತು ॥೧೦॥

ಪುಂಡರಹ ಪಂಡಿತರ ತಂಡವದು ಸಭೆಯೊಳಗೆ
ಮಂಡಿಸಿದ ವೇಳೆಯಂ ಸೂಚಿಸೆಂಬಾಣತಿಯ
ಕೊಂಡು ಶಿಷ್ಯನು ಬಂದು ನೆರೆದ ಸಭೆಗಂಡು ಮುಂಕೊಂಡು ಬಂದುಸುರೆ ಗುರುವು ॥
ತುಂಡರೊಳು ದರಹಸಿತವಿಂಬುಗೊಳೆ ಸಭೆಗೈದೆ
ಕಂಡು ಪಂಡಿತರಿವರನಿದಿರ್ಗೊಂಡು ವಿಷ್ಟರದ
ಮಂಡಲದಿ ಕುಳ್ಳಿರಿಸೆ ಕೆಲರು ದುರ್ಮುಖರಾಗ ಮೊಗದಿರುಹಿ ಕುಳಿತರವರು ॥೧೧॥

ಆ ಹದನವನು ಕಂಡು ಮಡಿವಾಳಗುರುವರರು
ಸ್ನೇಹದಿಂ ನರಸಿಂಹಶಿಷ್ಯನಂ ಕರೆದೆಲವೊ
ಸಾಹಸದಿ ಪಾತ್ರೆಯೊಂದನು ನೀನು ತರಿಸೆನಲು ತರಿಸಿಕೊಡಲೀಸುಕೊಂಡು ॥
ಆಹ ಸಭೆಯೆಲ್ಲವದು ಕಣ್ಣಾರೆ ನೋಡುತಿರೆ
ನೇಹದಿಂತೊಡೆವೊಯ್ಯಲಾಗ ಚೇತನಗೊಂಡ
ಮೋಹನದಿನಿರದೆ ರೇತಸ್ಸು ತಾಂ ಬಳಬಳನೆ ಪಾತ್ರೆದುಂಬಲು ಸುರಿದುದು ॥೧೨॥

ಪೊರಸೂಸಿಬೀಳೆ ಪಾಸಿಕೆಯುರಿವುತುರಿಯೇಳ
ಲರರೇ ಶಿವಯೋಗಿಯೇ ಸಾಕು ಸಾಕಯ್ಯ ಸ
ದ್ಗುರುವೇ ಉಪಸಂಹರಿಸು ನೀನೆಂದು ಪಂಡಿತರು ಪೊರಳಾಡಲಾ ಗುರುಗಳು ॥
ಭರದಿ ತಜ್ಜನನೇಂದ್ರಿಯದಿನೆಲ್ಲ ಧಾತುವನು
ಸರಸರನೆ ಪೀರಿಕೊಳಲವನೀಕ್ಷಿಸುತ್ತೆಲ್ಲ
ದುರುಳ ಪಂಡಿತರ ಮೊಗಬಾಡಿನುದು ಸಂದೆಗವದೋಡಿಹುದು ವೈಕಡೆನುದು ॥೧೩॥

ಭಾಪು ವಿಜಿತೇಂದ್ರಿಯನೆ ಭಾಪುರೇ ಚಿನ್ಮಯನೆ
ಭಾಪು ವಿದ್ಯಾನಿಧಿಯೆ ಭಾಪು ಕರುಣಾಂಬುಧಿಯೆ
ಭಾಪು ಶಿವಯೋಗಿಯೇ ಭಾಪುರೆ ವಿರಾಗಿಯೇ ಭಾಪು ಭೃತಭವರೋಗಿಯೇ ॥
ಭಾಪು ಭಕ್ತ್ಯಾಸಕ್ತ ಭಾಪು ಜೀವನ್ಮುಕ್ತ
ಭಾಪುರೇ ಜಿತಮಾರ ಭಾಪು ಜಗದುದ್ಧಾರ
ಭಾಪುರೇ ಮಡಿವಾಳಗುರುವರನೆ ಭಾಪೆಂದು ಪಂಡಿತರು ಬಣ್ಣಿಸಿದರು ॥೧೪॥

ಸಾರ ಭೂಕೈಲಾಸವೆನಿಪ ಕಾಶಿಯೊಳಿರ್ಪ
ಸೂರಿಗಳ ಸೇವೆಯಂ ಕೈಕೊಂಡು ಮಡಿವಳರು
ದಾರ ಶಿವಯೋಗನಿದ್ರಾಮುದ್ರೆಯೊಳಗಿರ್ದು ಕಾಲವಂ ಕಳೆವರಿವರು ॥
ಧೀರನರಸಿಂಹಶಿಷ್ಯನುವೆರಸು ಬಹು ಕೀರ್ತಿ
ಭಾರಿಯಾಗುತೆ ಮಹಾ ವಾರಾಣಸಿಯ ಪುರದಿ
ಮಿೂರಿ ಮೆರೆದರು ಮಹಾ ಮಡಿವಳರು ಘನಬಳರು ಜಿತಖಳರು ನಿರ್ಮಳಿನರು ॥೧೫॥

ಕೆಲದಿನಂಗಳ ಮೇಲೆ ಮಡಿವಾಳಯೋಗಿ ನಿ
ರ್ಮಲ ಕಾಶಿಯಂ ಬಿಟ್ಟು ಬಹುದೂರ ದೇಶಕ್ಕೆ
ದಲುಮುಲ್ಲಿ ಕುದುರೆಯಾರೋಹಕರು ಕಿತ್ತೂರು ಪಾಳಾದ ವಾರ್ತೆಯನ್ನು ॥
ಹಲಕೆಲವು ಸಂಸ್ಥಾನಿಕರಿಗದಂ ಬೇಗ ಪೇ
ಳಲು ಪೋಗುತಿರ್ಪಿನಂ ದಾರಿಯೊಳು ಯೋಗಿಮಡಿ
ವಳರ ಕಾಣುತ್ತೆ ಸೈಗೆಡೆದು ಕಂಬನಿ ಸುರಿಸೆ ಗುರುಗಳವರ್ಗಿಂತೆಂದರು ॥೧೬॥

ನಿಮಗೇತಕಳಲೀಗಳಳವಟ್ಟಿಹುದು ಭರದಿ-
ನೆಮಗದಂ ಪೇಳಿರೆಂದೆನಲವರು ಗುರುಗಳೇ
ತಮಗರಿಯದೊಂದುಂಟೆ ಬಾಪುಸಾಹೇಬನವನವನಿಪನು ಮೃತನಾದನು ॥
ಸುಮತಿಯುಳ್ಳವನು ದತ್ತಕವನೆಸಗಲ್ಕದಗ
ಕ್ರಮವರಿಯ ಬಂದ ಥ್ಯಾಕರೆಯೆಂಬ ಸಾಹೇಬ
ನಮಮ ಮಸ್ತಕವನ್ನು ಕತ್ತರಿಸಿ ಪುರದೊಳಗೆ ಮೆರೆಯಿಸಿದರಾ ಪುಂಡರು ॥೧೭॥

ಈ ದುರಂತದ ವಾರ್ತೆಕೇಳಿ ಇಂಗ್ಲೀಷರಿವ
ರೀದ ಹುಲಿಯಂತೊಳಗೆ ಮಸಗಿ ಕಿತ್ತೂರೂರಿ
ಗೈದಿ ಕೋಟೆಗೆ ತೋಪುಗಳ ಹೂಡಿ ಪೊಡೆವುತಿರೆ ಚೆನ್ನಮ್ಮ ವೀರಮ್ಮರು ॥
ಕಾದಲಿವರೀರ್ವರಂ ಸೆರೆಗೈದು ಬೇಗನೇ
ಮೋದದಿಂದಲಿ ಧಾರವಾಡಕ್ಕೆ ಕಳುಹಿ ಮೇಣ್ ಮೋ
ಲಾದ ಬೆಳ್ಳಿಯು ಮುತ್ತು ಮಾಣಿಕವು ಭಂಗಾರವಾದಿಯಾದೆಲ್ಲವುಗಳ ॥೧೮॥

ಒಂಟೆ ಕುದುರೆಗಳಾನೆ ಬಂಡಿಗಳ ಮೇಲೆ ನೂ
ರೆಂಟು ಹೇರುಗಳನ್ನು ಹೇರಿಯಲ್ಲಿಂದ ಹೊರ
ಹೊಂಟು ಕಿತ್ತೂರಪುರದರಮನೆಯು ಪಾಳ್ಮಾಡಿ ಧಾರವಾಡಕೆ ಬಂದರು ॥
ಎಂಟು ದೆಸೆಗಳನೆಲ್ಲವಂಟಿರ್ಪ ಜಸಪೆಸೆಯೆ
ಬಂಟನಹ ಶ್ರೀಗುರುವೆ ನಿನ್ನುಕ್ತಿಯಂತೆ ಘನ
ಕಂಟಕಂದೋರಿ ದುಷ್ಪರಿಣಾಮವುಂಟಾಗಿ ಪಾಳಾದುದರಮನೆಯದು ॥೧೯॥

ಹೇಳಲೇಂ ಜಗದೊಳಗೆ ಕಾಲಗತಿಯನ್ನಾರು
ಬೀಳುಗಳೆವವರೊಳರೆ ಮಾತೇನು ಪೋಗಿರೆನೆ
ಕೇಳುತಂ ಕುದುರೆಯೇರುವರತ್ತ ಪೋಗಲೀ ಮಡಿವಾಳಗುರುಗಳಿತ್ತ ॥
ಕೇಳಿಯಿಂ ಬದರಿಕಾಶ್ರಮಕೆ ಹರಿತಂದದರ
ನೀಳವಹ ಭಾಗಮಂ ನೋಡುತ್ತೆ ಕೆಲದಿನಂ
ಲೀಲೆಯಿಂದಿರ್ದು ತಾಂ ಬಳಿಕಯೋಧ್ಯೆಯ ಸಾರ್ದು ಸರಯೂತರಂಗಿಣಿಯೊಳು ॥೨೦॥

ಮಿಂದು ಶುಚಿಯಾಗಿ ತಾಂ ಭೂತಿಯಂ ಪೂಸಿ ಮುದ
ದಿಂದ ಲಿಂಗಾರ್ಚನೆಯ ತೀರ್ಚಿ ತಲ್ಲಿಂಗವಾ
ನಂದದೊಳು ಮುಳುಮುಳುಗಿ ಪರವಶನು ತಾನಾಗುತಿಂತು ಕೆಲ ಕಾಲಮಲ್ಲಿ
ನಿಂದಯೋಧ್ಯೆಯ ರಾಮಣೀಯಕವ ನೋಡುತ್ತೆ
ಕಂದುಗೊರಲನ ನಾಮ ಸಂಕೀರ್ತನದಿ ಮನಂ
ದಂದು ನಿತ್ಯಂ ಭವಸೇವ್ಯವುತ್ತಮಲ್ಲಿಂದ ತಾಂ ಪ್ರಯಾಗಕೆ ಬಂದನು ॥೨೧॥

ಈತನತಿ ಶಿವಯೋಗಿಲಕ್ಷಣವ ಕಂಡು ವಿ
ಖ್ಯಾತರಲ್ಲಿಯು ಸರ್ವ ಧರ್ಮಿಷ್ಠರವರ ಸಂ
ಪೂತಾಂಘ್ರಿಪಂಕೇಜಗಳಿಗೆರಗಿ ಭಕ್ತಿಯಿಂ ತತ್ತ್ವೋಪದೇಶವನ್ನು ॥
ಈ ತಪಸ್ವಿಯು ಮುಖದಿ ಪಡಯುವೇಳ್ಕೆಂದು ತಾ
ವೋತು ಬಿನ್ನವಿಸಲ್ಕೆ ಶಿವಯೋಗಿ ಗುರುವರನು
ಪ್ರೀತನಾಗುತ್ತವರಿಗುಪದೇಶವಂ ತಾನು ಸಂಪ್ರೀತಿಯಿಂ ಗೈದನು ॥೨೨॥

ಧರ್ಮಾರ್ಥಕಾಮ ಮೋಕ್ಷಂಗಳಿವು ಮಾನವನ
ಕರ್ಮಂಗಳಾಗೆ ಪುರುಷಾರ್ಥಂಗಳೆಂಬಿವಕೆ
ಮಾರ್ಮಿಕದ ಸಾರ್ಥಕದ ಪೆಸರಿರ್ಪುದದರಿಂದ ಪುರುಷರಾದವರಾದಿಯು ॥
ಧರ್ಮವನ್ನೆಸಗಿ ಮೇಣರ್ಥವುಂ ಸಂಗ್ರಹಿಸಿ
ನರ್ಮದಾಯಕ ಕಾಮಿತವನ್ನೈದಿಯಾ ಮೇಲೆ
ಶರ್ಮವನ್ನೀವ ವರ ಮೋಕ್ಷವುಂ ಪಡೆವುದಿದು ಪುರುಷರ್ಗೆ ಸಾಮಾನ್ಯವು ॥೨೩॥

ಜ್ಞಾನದಿಂದಲೆ ಮುಕ್ತಿಯೆಂಬ ನಿಗಮೋಕ್ತಿಯಿರೆ
ಮಾನವನು ತಜ್ಞಾನದಧಿಕಾರಿ ಲಕ್ಷಣದಿ
ಲೀನನಹುದಂಕಮುಂ ಸಾಧನಚತುಷ್ಟಯುವದುಳ್ಳವನೆ ಅಧಿಕಾರಿಯು ॥
ನೂನಮಾಕರ್ಮಿಯುು ಮುಮುಕ್ಷುವಭ್ಯಾಸಿಸದ
ನೂನಾನುಭವಿಯು ಮೇಣಾರೂಢನೆಂಬೈವ
ರೇನೊರೆವೆನಧಿಕಾರಿಗಳು ಮತ್ತೆ ಮೂವರಿಹರಧಿಕಾರಿಗಳು ಶಾಸ್ತ್ರದಿ ॥೨೪॥

ಈ ಜಗತ್ತಿನ ಮೂಲವಾವುದುಂಟದನರಿಯು
ಲೋಜೆಯಿಂ ಶ್ರೀಗುರುವಿನ್ನೈದಿ ಸದ್ಜ್ಞಾನದಿಂ
ಸಾಜ ಮುಕುತಿಯ ಪೊಂದುವವನೋರ್ವನು ವಿವೇಕಿ ನಶ್ವರವು ದೇಹವೆಂದು ॥
ಮಾಜದಿಹ ಭೋಗವನು ತೊರೆದು ಗುರುವಂ ಪೊಂದಿ
ರಾಜಿಸುವ ಮೋಕ್ಷಪಡೆವವನೋರ್ವ ವಿರತಮಣಿ
ನೈಜಶಿಷ್ಯಸಿಗೆ ಗುರುವುಪದೇಶಗೈದುದಂ ಕೇಳಿ ತಾನನಿತರಿಂದ ॥೨೫॥

ಕಳ್ಳನೇ ಜ್ಞಾನದೊದವಿಂದ ಸನ್ಮುಕ್ತಿಯು
ನ್ನಳ್ಕರಿಂ ಪಡೆವ ಸದ್ವೈವಿ ಮೂವರು ಭವ
ಕ್ಕಳ್ಕದವರೆಂದು ಗುರುಮಡಿವಳರು ಭಕ್ತಿಯುತಭಕ್ತರಿಗೆ ಪೇಳಿ ಮತ್ತೆ ॥
ಬಳ್ಕಿಬಾಗಿದ ನಿಮ್ಮ ಸಚ್ಚಿತ್ತಪೊಪ್ಪುವಾ
ಮಾಳ್ಕೆಯಿಂದಲಿ ನಾನು ಕಾರುಣ್ಯರಸಲಹರಿ
ತುಳ್ಕುವಂದದಿ ನಿಮಗೆ ಜೀವೇಶ್ವರಾತ್ಮಾದಿ ತತ್ವಮಂ ಪೇಳ್ವೆನೀಗ ॥೨೬॥

ಚಿತ್ತೊಂದೆ ಜೀವನೀಶನು ಮೇಣು ಕೂಟಸ್ಥ
ಮತ್ತೆ ಬ್ರಹ್ಮವದೆಂಬ ನಾಲ್ಕುತೆರವಾಗಿಹುದು
ಮೃತ್ತಿಕಾಘಟಜಲದಿ ಪೊಳೆವಭ್ರನಕ್ಷತ್ರನಭದಂತೆ ಜೀವನಿಹನು ॥
ಮತ್ತಮಂಬುದತುಷಾರೋದಕದಿ ಮೂಡಿದ ನಿ
ವಿತ್ತಾಂಬರದ ತೆರದೊಳೀಶನಿಹನ್ನೈ ಘಟಾ
ಯತ್ತನಭವಂತೆ ಕೂಟಸ್ಥನಿರುವನು ಮಹಾಕಾಶದಂತಿಹುದು ಬ್ರಹ್ಮ ॥೨೭॥

ಜೀವನೆಂಬುವನವಿದ್ಯೋಪಹಿತನೀಶನುಂ
ಭಾವಿಸಲು ಮಾಯೋಪಹಿತನು ಕೂಟಸ್ಥನವ
ನಾ ವಿಮಲ ವಿದ್ಯೋಪಹಿತನು ಬ್ರಹ್ಮವು ತಾನು ನಿರುಪಾಧಿ ನಿರ್ದ್ವಂದ್ವವು ॥
ಜೀವಾತ್ಮನಂತರಾತ್ಮನು ಮೇಣು ಪರಮಾತ್ಮ
ನೀ ವಿಧದ ಮೂವರೊಳು ಸಂಸಾರಸುಖದುಃಖ
ವಾವರಿಸಿ ತಪ್ತಾಯಸದ ಪಿಂಡದಂತೆ ತಾಂ ವ್ಯವಹರಿಸುವನೆ ಜೀವನು ॥೨೮॥

ಆ ವಿಕೃತಜೀವನುರು ಸಂಸಾರವಿಕೃತಿಯ
ನ್ನಾವಾಗಳುಂ ಪೊಂದಿಯುಂ ಪೊಂದದಿಪ್ಪವನೆ
ಆ ವಿಮಲನಂತರಾತ್ಮನುಮಿವರ ವ್ಯವಹಾರಸಾಕ್ಷಿಯೇ ಪರಮಾತ್ಮನು ॥
ಈ ವಿಧದ ಜೀವನಿಗೆ ತೊಡರಿರ್ದ ಸಂಸೃತಿಯ
ವ್ಯಾವಹಾರಿಕ ಭೋಗವೈದುವಡೆ ಗುರುವಿನಂ
ಭಾವಶುದ್ಧತೆಯಿಂದ ಮರೆಹೊಗಲ್ಕಾತನಿಂ ಮುಕ್ತನಪ್ಪನು ಜೀವನು ॥೨೯॥

ಎಂದು ಬೋಧಿಸಿದ ಗುರುಶಿವಯೋಗಿಮಡಿವಳರ
ಚೆಂದದಡಿದಾವರೆಗೆ ಸೈಗೆಡೆದು ತದ್ಬೋಧ
ದಿಂದ ಧನ್ಯತೆಯಾಳ್ದು ಸುಪ್ರಿಯಾಗದ ಜನರು ಸುಖದಿಂದಮಿರುತಿರ್ದರು ॥
ಅಂದು ಮಡಿವಳಯೋಗಿಯಲ್ಲಿಂದ ಪೊರಮಟ್ಟು
ಸುಂದರದ ಮಧುರೆ ವೃಂದಾವನವು ಗೋಕುಲವು
ಕುಂದಿಲ್ಲದಿಹ ತ್ರ್ಯಂಬಕೇಶ್ವರವು ನಾಸಿಕಪದೊಡ್ಡಿಯ ಜಗನ್ನಾಥವು ॥೩೦॥

ಬಾವಡಿಯ ನಾಗನಾಥನು ವೈಜನಾಥನತಿ
ಪಾವನದ ತಿರುವಾಳ ತ್ಯಾಗರಾಜೇಶ್ವರನು
ಭೂವಿದಿತ ಶಿವಕಂಚಿ ಸೇತು ರಾಮೇಶ್ವರವು ಮೊದಲಾದ ಕ್ಷೇತ್ರಗಳಲಿ ॥
ತೀವಿದುತ್ಸಾಹದಿಂ ಸಂಚರಿಸಿ ತತ್ ಕ್ಷೇತ್ರ
ದೇವತಾದರ್ಶನಾರ್ಚಾದಿಗಳನೆಲ್ಲವಂ
ಗೈವುತಂ ಬರುತಿರ್ಪನವನ ಸಂದರ್ಶನಕೆ ಮೇಲಾಡುತಿಹರು ಜನರು ॥೩೧॥

ಎತ್ತಣಾನನಕಾಂತಿ ಎತ್ತಣಾಜಾನುಭುಜ
ವೆತ್ತಣತಿಯೋಗ್ಯವಹ ವೈರಾಗ್ಯಸೌಭಾಗ್ಯ
ವೆತ್ತಣೀತನ ಬ್ರಹ್ಮಚರ್ಯವೆತ್ತಣ ದೇಪದಾರ್ಥ್ಯವೆತ್ತಣ ನಿಪುಣತೆ ॥
ಎತ್ತಣೀತನ ಯೋಗಸಿದ್ಧಿಯೆತ್ತಣ ಬುದ್ಧಿ
ಯೆತ್ತಣೀತನ ಸಮತೆಯೆತ್ತಣೀ ಭೂತದಯೆ
ಯೆತ್ತಣೀ ಘನಶಾಂತಿಯೆಂದು ಬಣ್ಣಿಸುತವರು ಕುಂಬಿಟ್ಟು ಪೋದರಾಗ ॥೩೨॥

ಇಂತು ತೀರ್ಥಕ್ಷೇತ್ರಪರ್ಯಟನಮಂ ಮಾಡಿ
ಸಂತಸಂ ಬೆತ್ತು ಗುರುಮಡಿವಾಳಯತಿವರನ
ನಂತ ವೈಭವದೊಡನೆ ಮೆರವ ಮೈಸೂರಪುರಿಗೈತರಲು ಕೃಷ್ಣನೃಪತಿ ॥
ಶಾಂತಮಡಿವಾಳ ಶಿವಯೋಗಿಮಣಿಯೈತಂದು
ದಂತವನು ಕೇಳಿ ಸಂಭ್ರಮದಿಂದ ಕಾಲಾಳು
ದಂತಿ ರಥ ವಾಜಿಗಳು ವೆರಸು ಶಿವಯೋಗಿಯನು ದಂಡಿಗೆಯೊಳಿರಿಸಿ ತಂದು ॥೩೩॥

ಭದ್ರಮಯ ರಾಜಮಂದಿರ ಚಂದ್ರಶಾಲೆಯೊಳು
ಭದ್ರಪೀಠದ ಮೇಲೆ ಕುಳ್ಳಿರಿಸಿ ನಮಿಸಿ ನೃಪ
ಭದ್ರನಾ ಪ್ರಾಸಂಗಿಕೋಕ್ತಿಯನು ಸೆಗಳುತ್ತಮುಪಚರಿಸಿ ತತ್ಸಮಯದಿ ॥
ಭದ್ರತರ ವಸ್ತುಗಳ ತರಿಸಿ ಲಿಂಗಾರ್ಪಿತಕೆ
ಭದ್ರಮುಖ ಕೃಷ್ಣರಾಜನು ಪೋದನರಮನೆಗೆ
ಭದ್ರಮೂರ್ತಿಯು ಗುರುವು ತನ್ನ ಲಿಂಗಾನಂದ ಸಾಮ್ರಾಜ್ಯದೊಳಗಿರ್ದನು ॥೩೪॥

ಆಸ್ಥಾನ ಕವಿವರರು ಕೋವಿದರು ಶಾಸ್ತ್ರಿಗಳು
ಶ್ರೀಸ್ಥಾನರಕ ಮಹಾರಾಜರಾಣತಿಯಂತೆ
ಪ್ರಸ್ಥಾನವನಲ್ಲಿಗಲ್ಲಿಗೆಸಗುತ್ತೆ ಬಂದ ಮಡಿವಾಳ ಗುರುಗಳನ್ನು ॥
ಸ್ವಸ್ಥಾನವಹ ಸಭಾಮಂಟಪಕೆ ಬರಮಾಡಿ
ಪ್ರಸ್ತಾವನೋಕ್ತಿಯಿಂದುಪಚರಿಸಿಯಾ ಬಳಿಕ-
ಮಾಸ್ಥೆಯಿಂ ಶಾಸ್ತ್ರಾರ್ಥವನ್ನೆಸಗಲವರಂದು ಪೂರ್ವಪಕ್ಷವ ಗೈದರು ॥೩೫॥

ಪೂರ್ವಪಕ್ಷದ ಬೆನ್ನಣೊಡನೆ ಸಿದ್ಧಾಂತವನು
ಸರ್ವರರಿಯಲು ಪೇಳ್ದು ಗುರುವರರು ಪಂಡಿತರ
ಗರ್ವವನ್ನಪಹರಿಸಿ ತಾಂ ಪೂರ್ವಪಕ್ಷವನು ಗೈಯ್ಯಲಾ ವಿಬುಧವರರು ॥
ಖರ್ವಮಾನಸರಾಗುತುತ್ತರಂ ಗಾಣದವ
ರುರ್ವಿಯಂ ತಮ್ಮ ಕೈಬೆರಳಿಂದ ಬರೆವುತ್ತೆ
ಪುರ್ವುಗಂಟಿಕ್ಕಿ ಮೇಣ್ ಮೊಗ ಕಂದಿ ಕಳೆಗುಂದಿ ಭ್ರಾಂತಚೇತಸರಾದರು ॥೩೬॥

ಆ ಮೇಲೆ ಗುರುವರರು ಸರ್ವಪಂಡಿತರನ್ನು
ಪ್ರೇಮದಿಂ ಸಂತೈಸಿ ಬೋಧಿಸಿದರೆಂತೆನಲು
ಭೂಮಿಯೊಳು ಸರ್ವಜ್ಞತೆಯದಾರಿಗಿಹುದು ನೀವ್ ಪಂಡಿತಂ ಮನ್ಯರಹವೇ ॥
ಹೇಮವಾ ಕಾಮಿನಿಯು ವಿದ್ಯೆ ಭೂಮಿಯು ಮೊದಲು
ಶ್ರೀ ಮಹೇಶ್ವರನನುಗ್ರಹದಿಂದೆ ದೊರೆಗುಮೆನ
ಲೀ ಮದವದೇತಕ್ಕೆ ಜಗದೊಳಗೆ ಸರ್ವರಿಗೆ ವಿನಯದಿಂ ವಿದ್ಯೆಬೆಳಗು ॥೩೭॥

ಬಾಯಬಿಗಿಹಿಡಿದದಂ ಕಾಯುಲದು ಮನುಜನಿಗೆ
ಬೀಯದ ಸುಖಂ ಗುಡುಗುವುದರಿಂದ ವಿನಯೋಕ್ತಿ
ಬಾಯಿಗದು ಭೂಷಣವು ಮೇಣು ವಿನಯೋಕ್ತಿಗಿಂದಿಲ್ಲ ಬೇರುಪಚಾರವು ॥
ಶ್ರೀಯುಸವನಿಚ್ಛೆಪೊಡೆ ವಿನಯರ್ವನ್ಯರ ಹಿತವು
ಶ್ರೀಯುನೀಯುುವನಪಶಬ್ದವ ತರ್ಕವನಪಾರ್ಥ
ಗೇಯು ಮಂತ್ರಾಗಮಂಗಳಿವೆಲ್ಲ ವಚನಕ್ಕಲಂಕಾರವೆಂದೊರೆವರು ॥೩೮॥

ಗುಣಗಳೊಳಗಾದಿಯುಹ ವಿನಯುಗುಣವೇ ಮಿಗಿಲು
ಮಣಿಗಳೊಳಗೆಲ್ಲಕ್ಕೆ ಜ್ಞಾನಮಣಿ ಹೆಚ್ಚಿನದು
ಗಣಿಸುತಿರೆ ತಪಗಳೊಳು ಸತ್ಯವೇ ತಪವಯ್ಯ ಧರ್ಮದೊಳು ದಯೆ ಧರ್ಮವು ॥
ಆಣಿಯುರಂ ಸುಚರಿತ್ರದೊಳು ಭಕ್ತಿ ಮಿಗಿಲು ವೀ
ಕ್ಷಣಗಳೊಳು ಸುವಿಚಾರ ವೀಕ್ಷಣವೆ ಮಿಗಿಲು ಮೇ
ಣೆಣಿಸೆ ದೇವರ್ಕಳೊಳು ತ್ರಿಣಯುನನೆ ಮಿಕ್ಕನವನರಿಯಿರೈ ನೀವೆಲ್ಲರು ॥೩೯॥

ಎಂದುದಂ ಕೇಳಿ ನಾಣ್ಗೊಂಡು ತಲೆವಾಗಿ ತಾವ್
ಕಂದುಗೊರಲನ ರೂಪಪೊಂದಿದೀಗುರುವರರ
ಕುಂದದಿಹ ಚರಣಾರವಿಂದಗಳಿಗೆರಗಿ ಮನಬಂದ ಪರಿ ಬಣ್ಣಿಸಿದರು ॥
ಎಂದುಮಿಾಕ್ಷಿಸದಿವನ ಸುಂದರತೆ ಮೇಣು ನಾ
ವೆಂದುಮಭ್ಯಾಸಿಸದ ಶಾಸ್ತ್ರಪರಿಣತೆ ಮತ್ತ
ಮೊಂದು ಮುನ್ನೋಡದಿಹ ವೈರಾಗ್ಯಭಾಗ್ಯಮೆಂದಿಂತವರು ಬಣ್ಣಿಸಿದರು ॥೪೦॥

ಅಲ್ಲಿ ಮೈಸೂರೊಳಗಣಾಸ್ಥಾನ ಪಂಡಿತರ
ನೆಲ್ಲರಂ ಜಯಿಸಿ ತಾನವರ್ಗೆ ಸದ್ಬೋಧಮಂ
ಬಲ್ಲಿಹನು ಕೊಟ್ಟಹಂಕಾರಮಂ ಖಂಡಿಸಿದನೆಂಬ ಜಸವದು ಮುಸುಕಲು ॥
ಸಲ್ಲಲಿತ ವೇದಾಂತ ಸಿದ್ಧಾಂತದೊಳಗೆ ಸಲೆ
ಬಲ್ಲವರು ಪರಕಾಳಮಠದ ವೈಷ್ಣವಗುರುಗ
ಳಲ್ಲಿ ವರದರ್ಶನಕ್ಕೈದಿ ವೇತಾಂತಮಂ ಚರ್ಚಿಸುವರನವರತವು ॥೪೧॥

ಇವರ ಪಾಂಡಿತ್ಯಕ್ಕವಿವರುಕ್ತಿಯುಕ್ತಿಗಳಿ
ಗಿವರ ಶಾಸ್ತ್ರದ ಗುಟ್ಟನರಿವ ಜಾಣತನಕ್ಕ
ವಿವರ ಬೋಧಿಪ ಶಕ್ತಿಗಿವರ ನಿರಹಂಕೃತಿಗೆ ಪರತರಕುಶಾಗ್ರಮತಿಗೆ ॥
ಇವರ ಕಾರುಣ್ಯಕ್ಕೆ ಪದಗಳಾರುಣ್ಯಕ್ಕೆ
ತೀವಿರ್ದವಿರತಿಗಂ ಮೆಚ್ಚಿ ವೈಷ್ಣವಗುರುಗ
ಳಾವಾಗಲುಂ ಬಂದು ಕುಂಬಿಟ್ಟು ಶಾಸ್ತ್ರಮಂ ಕೇಳುತಿರ್ದರು ಮುದದೊಳು ॥೪೨॥

ಪುತ್ರವಾ ಕೃಷ್ಣನೃಪನಾ ಯೋಗಿಸತ್ತಮನ
ಚಿತ್ತದೊಲವೆಂತದಂತುಪಚರಿಸಿ ಭಕ್ತಿಯಿಂ
ವಿತ್ತಪತಿಮಿತ್ರಸಾಕೃತಿವೆತ್ತ ಮಹಿಮುನಿವನೆನುತವನ ಸೇವೆ ತನ್ನ ॥
ಸುತ್ತಿಕೊಂಡಿಹ ಭವದ ಪಾಶವನು ಹರಿದು ಸುಖ
ದೊತ್ತಿಗುಯ್ವುದೆನುತ್ತಮೂಳಿಗವ ಕೈಕೊಂಡು
ಪೊತ್ತುಗಳೆವುತ್ತಿರ್ದನೇದೊಡಾ ಸಜ್ಜನರ ಸೇವೆ ತಾನೇಗ್ಯೆಯುಕ್ತ ॥೪೩॥

ಈ ತೆರದಿ ಕೃಷ್ಣಭೂಪಾಲನವನನುದಿನವು
ಪೂತಶಿವಯೋಗಿಯುಹ ಮಡಿವಳರ ಸೇವೆಯು
ನ್ನೋತು ಗೈವುತ್ತೆ ನಂಜುಂಡೇಶನಚಲಕ್ಕೆ ಚಾಮುಂಡಿಯಾ ಬೆಟ್ಟಕಂ ॥
ಮಾತೇನು ಗುರುಗಳೊಡನೈದಿ ಸಾವಿರಗಣರ
ಪ್ರಾತಕ್ಕೆ ಸಂತೃಪ್ತಿಗೈದು ವಸ್ತ್ರವನಿತ್ತು
ಖ್ಯಾತಮೈಸೂರಪುರಿಗಾತಪಸ್ವಿಯುಮೆರಸಿ ಬಂದನಾ ಕೃಷ್ಣನೃಪತಿ ॥೪೪॥

ಮನ್ನಣೆಗೆ ಪಕ್ಕಾದ ಶಿವಯೋಗಿಮಡಿವಾಳ
ರಿನ್ನೋರ್ಮೆ ಸೇತು ರಾಮೇಶ್ವರಕೆ ಪೋಗವೇ
ಳ್ಕನ್ನುತ್ತೆ ಪೊರಡಲಾ ಕೃಷ್ಣಭೂಪತಿ ಮೇಣು ಪರಕಾಳಮಠದಸ್ವಾಮಿ ॥
ಮನ್ನಿಸುತೆ ಶಿವಯೋಗಿಯೊಡನೆ ಪರಿಜನನಿಚಯ
ವನ್ನು ಮೇಣತರ ಸಾಮಗ್ರಿಯನ್ನಣಿಮಾಡಿ
ಪನ್ನತಿಕೆಯಿಂ ಕಳುಹಲಾಗಲಾ ಗುರುವರರು ಚೆನ್ನಪಟ್ಟಣಕ್ಕೈದಲು ॥೪೫॥

ಮುನ್ನಮೇ ಶಿವಯೋಗಿ ಮಡಿವಳರ ಮಹಿಮೆಯಂ
ಚೆನ್ನಪಟ್ಟಣಜನರು ಕೇಳಿ ಬಲ್ಲುದರಿಂದ
ಲಿನ್ನೇಕೆ ತಳುವೆಂದು ಭಕ್ತಿಯಿಂದಿದಿರ್ಗೊಂಡು ಕರೆತಂದು ಪಟ್ಟಣದೊಳು ॥
ಸನ್ನುತಾತ್ಮನನಾಗಳೋರ್ವ ಧನಿಕನ ಗೃಹದಿ
ಮನ್ನಣೆಯು ಸಡಗರದೊಳಿಳಿಸಿ ಕಾಯ್ಕುಪ್ಪುರಗ
ಳನ್ನಿಟ್ಟು ಪೊಡಮಟ್ಟು ಪ್ರಾಸಂಗಿಕೋಕ್ತಿಗಳನಾಡಿ ಸೇವೆಯುಗೈದರು ॥೪೬॥

ಚಿತ್ತಜಾರಿಯ ಪಾದಭಕ್ತರೇ ನೀವಿತ್ತ
ಚಿತ್ತಗೊಟ್ಟಾಲಿಸಿರಿ ಮುಂದಾಗುವೊಳ್ಗತೆಯು
ನಿತ್ತ ಮಡಿವಾಳಗುರುವಿಳಿದ ಮನೆಯೊಳಗೊಂದು ಬೊಮ್ಮರಕ್ಕಸವಿರ್ದುದು ॥
ವಿತ್ತವುಳ್ಳವನವನು ಮನೆಯೊಡೆಯನೀ ಮನೆಯು
ನೊತ್ತರದಿ ಬಿಟ್ಟು ಬೇರೊಂದು ಮನೆಯೊಳಗಿಹನು
ಮತ್ತಮಾ ಮನೆಯೊತ್ತಿನೊಳಗಾರು ಸುಳಿಯರಾ ಭೂತದುಪಟಳಕಂಜುತೆ ॥೪೭॥

ಊರವರು ಭೂತದಿಂ ಭೀತರಾಗುತ್ತೂರಿ
ಗಾರತಿಥಿಗಳು ಬಂದೊಡವರನ್ನು ಭೂತವಿದು
ಸೇರಿಕೊಂಡೀ ಮನೆಯೊಳಿಳಿಸುತಿಹರವರಿಂದ ಭೂತವಿದು ಪೋಗಲೆಂದು ॥
ಮಾರನೆಯದಿನವಲ್ಲಿನೋಡಲತಿಥಿಗಳುಳಿದು
ಸಾರಿದರೊ ಮೇಣಳಿದು ಪೋದರೋ ಗಡಾ ಎಂಬ
ಕಾರಣಕೆ ಗುರಿಯಪ್ಪ ಪ್ರೇತಕೆನಲವರದೇನೊಂದಿಲ್ಲವಿಹುದು ಗುರ್ತು ॥೪೮॥

ಆ ತೆರದೊಳೀಗಳೀ ಧೂರ್ತವಹ ಭೂತವ ಆ
ಪೂತ ಮಡಿವಾಳಗುರುನಾಥನ ವಿಲೋಕನದಿ
ಭೀತರಾಗುತೆ ಪಲಾಯನವನೆಸಗಲ್ವೇಳ್ಕುಮೆಂದಿಂದು ಗುರುರಾಯನ ॥
ಭೂತವಿರುವವೀ ಮನೆಯೊಳಿರಿಸಿರ್ಪರೂರವರು
ಮಾತದೇಂ ಭೂತದುದ್ಧೃತಿ ಕಾಲವೊದಗಿರ್ಪು
ದೇತಕೆನಲೀತನಶಿ ವಿಖ್ಯಾತ ಮಹಿಮಾಬ್ಧಿ ಮಡಿವಾಳನಿಳಿದ ಕತದಿ ॥೪೯॥

ಮುಚ್ಚುಂಜೆಯಾಗೆ ಶಿವಪೂಜೆಗೈದರ್ಪಿತವ
ನಿಚ ದಂತೆಸಗಿರುವ ಸದ್ಗುರುವ ಸುವಿರತಿಯು
ಹೆಚ್ಚಳಿಕೆಯುಂ ಕಾಣುತಚ್ಚರಿಯುನಾಂತು ಜನರೈದಿದರು ತಮ್ಮ ಮನೆಗೆ ॥
ಬಚ್ಚಬರಿ ಮನೆಯೊಳಗೆ ಮಡಿವಾಳಗುರುಪೋರ್ವ
ನೊಚ್ಚತಂ ಗೊಂಡು ಮಲಗಿರಲು ನಟ್ಟಿರುಳು ಮರು
ಳುಚ್ಚರೂಪಂ ದಾಳಿ ಗುರುಗಳೆಡೆಗೆ ಬಂದು ಗಹಗಹಿಸಿ ನಗಹತ್ತಿತು ॥೫೦॥

ಖುಲ್ಲವಹ ಭೂತದಾ ಸೊಲ್ಲು ಮಡಿವಳರ ಕಿವಿ
ಯುಲ್ಲಿ ಬೀಳಲ್ಕಾಗಳೆಚ್ಚತ್ತು ಗುರುವಗರು
ಹಲ್ಲು ತೆರೆದಿಹ ಬೊಮ್ಮರಕ್ಕಸನ ಕಂಡೊಂದು ಪದವನ್ನು ಹಾಡಿದರಲಾ ॥
ಬಲ್ಲೆ ಹೋಗಲೆ ಮಾಯೆ ಸಲ್ಲದಿದು ನಿಜಬುದ್ಧಿ
ಇಲ್ಲಿ ನೀನಿರಸಲ್ಲ ಬಲ್ಲತಾಣಕೆ ಪೋಗು
ನಿಲ್ಲದಿರು ನೀನೆಂದು ಪದವನ್ನು ಶಿವಯೋಗಿ ಹಾಡಿದನು ದ್ವಂದ್ವಾರ್ಥದಿ ॥೫೧॥

ಆ ಪರಮ ಪುರುಷನುರು ಮಹಿಮೆ ಸಲೆ ಪಾಡಿ
ದಾ ಪದದ ವ್ಯಂಗ್ಯಾರ್ಥವನ್ನರಿದು ಭೂತವದು
ಭೂಪವಿತ್ರಾರ್ಥಮವತರಿಸಿರುವ ಶಿವನೆ ಇವನೆಂದು ಮನದೊಳು ಭಾವಿಸೆ
ಶ್ರೀಪಾದಪಂಕಜಕ್ಕಭಿನಮಿಸುತಲೆ ಗುರುವೆ
ಈ ಪಾಪಿಯಾದೆನ್ನನುದ್ಧರಿಸಿ ಸಲಹಯ್ಯ
ಸುಪರಂಜ್ಯೋತಿ ಸ್ವರೂಪನೇ ಕರುಣಿಸೆಂದಾ ಪಿಶಾಚಿಯು ಪೇಳ್ವುದು ॥೫೨॥

ಸ್ವಾರ್ಥದುದ್ಧರಣಾರ್ಥಮರ್ಥಿಸುವ ಭೂತಕೆ ಪ
ರಾರ್ಥವೇ ಸ್ವಾರ್ಥವೆಂದರಿದ ಮಹಿಮನು ತದಿ
ಷ್ಟಾರ್ಥ ಪೂರ್ತಿಗೋಸುಗಿಂತೆಂದನೆಂತೆನಲು ಭಯಮೇತಕ್ಕೆ ಭೂತವೇ ॥
ವ್ಯರ್ಥ ಮಾದುದು ನಿನ್ನ ಪಾಪವಿಂದಿಗೆ ಕೇಳು
ಸಾರ್ಥಕವದಾಯ್ತು ಜನ್ಮವು ಪೋಗು ನೀನೆನ
ಲ್ಕರ್ಥವದು ಕೈಸೇರಿತೆಂದೆನುತ ಭೂತವದು ಬಂಣಿಸಿದುದೆಂತೆನೆ ॥೫೩॥

ಕೇಳು ಮಹಿಮನೆ ಪಾಪಕರ್ಮಬಲದಿಂದ ವೇ
ತಾಳನಾಗಿಲ್ಲೆಲ್ಲರನು ತಿಂದ ಕತದಿಂದ ಲ
ಖಿಳ ಪಾಪವು ಘಟಿಸಿದುದೆಲ್ಲ ಪೋಯಿತ್ತೀಗ ನಿನ್ನ ದರ್ಶನಮಾತ್ರದಿ ॥
ಫಾಳಾಂಬಕನೆ ನೀನು ನಿಜವಲ್ಲದೊಡೆ ಗುರುವೆ
ಹೇಳೆಂತು ಮುಕ್ತನಾದೆನು ನಾನು ಕರುಣಿಯೋ
ಬಾಳ ಮಾತೇನೀಗ ಧನ್ಯನಹೆ ನಾನೆಂದು ಪೋಯುತ್ತ ಭೂತವು ಬಣಿಸಿ ॥೫೪॥

ಆ ಭೂತವದು ಪೋದುದಕೆ ಚಿನ್ಹವಾವುದೆನೆ
ಶೋಭಿಸುವ ಮನೆಯ ಮುಂದಿರುತಿರ್ಪ ಪುಣಸೆಮರ
ದಾ ಭೀಳಶಾಖೆಯದು ಕಡಕಡನೆ ಮುರಿದು ನೆಲಕೊರಗಿದತ್ತಾಕ್ಷಣದೊಳು ॥
ಆ ಭವನದೊಳು ಯೋಗಿಮಡಿವಾಳ ಗುರುಮೂರ್ತಿ
ಯಾ ಭಾನುವುದಯುಂಬರಂ ಪವಡಿಸಿರೆ ಜನಗ
ಳೀ ಭೂತಮಂದಿರಕೈತರ್ಪವನಿತಕೆ ಕುಳಿತಿರುವ ಗುರುವ ಕಂಡು ॥೫೫॥

ಬೆಳಗಾಗುವನ್ನೆಗಂ ಮಲಗಿಕೊಂಡತಿಥಿ ಜನ
ಗಳು ಭೂತಬಲಿಯಾದರಿಂದಿವರು ಸದ್ಗುರುಗ
ಳುಳಿದರೆ ನಲಿವರೆನಿತು ಮಹಿಮರೆಂದೆಲ್ಲರಿವರಡಿಗೆ ಪೊಡಮಡುತಿರೆ ॥
ತಳುವದವರಂ ಕರೆದು ಕೇಳಿರೀ ಮನೆಯೊಳಿಹ
ಬಲಯುತವು ಭೂತವೈದುದು ನೋಡಿರೆಂದೆನುತೆ
ಕೆಳಗೆ ಮುರಿದೊರಗಿರುವ ಪುಣಸೆಗೊಂಬೆಯ ತೋರಿಸಿದರವರು ಗುರ್ತಿಗಾಗಿ ॥೫೬॥

ಶಿವನ ಸಂಕಲ್ಪದಿಂತಾ ಬೊಮ್ಮರಕ್ಕಸವು
ಜವದಿ ಪೈಶಾಚತನವನು ನೀಗಿ ನಿಜ ಶರೀ
ರವತಾಳ್ದು ತಾನೈದುದದರಿಂದ ನೀವಿನ್ನು ನಿರ್ಭಯದೊಳಿರಪೋಗಿರಿ ॥
ಶಿವಯೋಗಿವಚನಕ್ಕೆ ಬೆರಗಾಗಿ ಜನರುಮಾ
ಭವನದೊಡೆಯನ ಮುಂದೆ ಪೇಳಲವನೈತಂದು
ಭವಹರಮಡಿವಳರ ಪದಕೆರಗಿ ಮನ ಕರಗಿ ಮರೆಪೊಕ್ಕು ಪೇಳ್ದನಿಂತು ॥೫೭॥

ನಿಮ್ಮಪದಧೂಳಿಯಿದು ಬೂದಿ ನಿಮ್ಮಯಮಾತು
ಪೆಮ್ಮನದೊಳಿಹ ಮಹಾಮಂತ್ರವಾಗುತ್ತಿರಲು
ಬೊಮ್ಮರಕ್ಕಸನೆಂತು ನಿಲ್ಲುವದು ಗುರುರಾಯ ಎನ್ನ ಮನೆ ಮಾಮನೆಯಿದು ॥
ದಮ್ಮಯ್ಯ ನಾಂ ಧನ್ಯನಾದೆನ್ನೆ ಗುರುವೆ ಇ
ನ್ನೊಮ್ಮೆ ಭೂತವದು ಬಾರದಂತೆ ಮಾಡೆನಲು ಮುದ
ದಿಂ ಮಹಾತ್ಮನು ತಾನು ರೂಪಾಯಿಸಾವಿರವ ಕೊಡುವದೆನೆ ತಂದುಕೊಡಲು ॥೫೮॥

ನಿನ್ನಮನೆಯೊಳು ಸ್ಕಾಂದಸುಪುರಾಣವುಂ ಮೇಣು
ಸನ್ನುತಾತ್ಮರ ಜಂಗಮರ್ಕಳಾರಾಧನವು
ಸನ್ನೆಯಿಂ ನಡೆವಡಾ ಪುಣ್ಯದಿಂ ನಿನ್ನಮನೆಯಂಗಳವು ಮಂಗಳವಲಾ ॥
ನಿನ್ನಮನೆಯುರಮನೆಯು ಸಿರಿವನೆಯು ಮಂಗಲಕೆ
ಮನ್ನಣೆಗೆ ಸೌಖ್ಯಕ್ಕೆಯುಂ ತವರ್ಮನೆಯಪ್ಪು
ದಿನ್ನು ನಾನೇಪೇಳ್ವೆ ಧನಧಾನ್ಯಸಂತತಿ ಸಮೃದ್ಧಿಯಿಂ ರಂಜಿಸುವದು ॥೫೯॥

ಎಂದಿಂತು ಧನಿಕನಿಗೆ ಪೇಳಿ ಶಿವಯೋಗಿಮಣಿ
ಯಂದೋರ್ವ ಪೌರಾಣಿಕನ ತಾನು ಬರಮಾಡಿ
ಸ್ಕಾಂದನಾಮಕ ಪುರಾಣವನವನ ಮನೆಯೊಳಗೆ ಪ್ರಾರಂಭಿಸಲ್ಕೆಲ್ಲರು ॥
ಸಂದ ಪರಮಾನಂದದಿಂದ ನಿತ್ಯಂ ಬಂದು
ಕಂದುಗೊರಲನ ಮಂದಭಕ್ತಿಮಹಿಮೆಯ ಮನಂ
ದಂದು ಕೇಳುತ್ತೆಯ್ದುತಿರ್ದರಿತ್ತಲ್ ಗಣಾರಾಧನವು ನಡೆದಿದಿರ್ದುದು ॥೬೦॥

ದೃಢಭಕ್ತರ ನಿಕಾಗ್ರಸರನ ಮನೆಯೊಳು ಸದಾ
ಮೃಡಗಣರು ಜಯನಮಃ ಪಾರ್ವತೀಪತಿಯೆಂದು
ಸಡಗರದಿ ತುತ್ತುತುತ್ತಿಗೆ ಬಿಡದೆ ಜಯಘೋಷವನು ಮಾಡುತಿರ್ದರವರು ॥
ಜಡಬಗ್ಗರೊಳನುಗ್ಗಿ ಬಲುಹಿಗ್ಗಿಯಿದು ಸುಗ್ಗಿ
ಯಡಕಿರ್ಪುದೆನುತುಂಡು ಬಿಡದೆ ತಣಿವಂ ಕೊಂಡು
ಕಡಲಾಗಮೊಡನೈದುತಿರ್ದರೆನಲಿವನೇನೊ ಭೂಯಿಷ್ಠಧರ್ಮಿಷ್ಠನೋ ॥೬೧॥

ಸಿರಿವಂತನಿತ್ತ ರೂಪಾಯಿಗಳ ಸಾವಿರದ
ನಿರದೆ ಸ್ಕಾಂದಪುರಾಣಸುಶ್ರವಣದುಜ್ಜುಗಕೆ
ಗುರುವರನು ಕಾಸೊಂದನನಿಸಾನುಮುಳಿಸದಲೆ ವೆಚ್ಚಗೈದೆನಿತೊ ದಿನವು ॥
ಇರುತಲ್ಲಿ ಬಳಿಕೊಂದು ದಿವಸವಾ ಧನಿಕನಂ
ಕರೆದೆಲವೊ ನೀನಿನ್ನು ನಿನ್ನ ಮನೆಯೊಳು ನಿರುತ
ಮಿರು ಪೋಗು ಭಯವೋದುದೆನೆ ಕೇಳಿ ಧನಿಯು ಪೆಂಡಿರುಮಕ್ಕಳೊಡಗೂಡುತೆ ॥೬೨॥

ಶಿವಯೋಗಿಯಿರ್ದ ನಿಜಮಂದಿರಕ್ಕೈತಂದು
ಭವದೂರಗುರುವರನ ಕೃಪೆಯಾದುದಿಂದೆಂದು
ಲವಲವಿಸಿ ಗುರುಪೂಜೆ ಮೊದಲಾದುದಂ ಗೈದು ಸುಖಿಯಿರ್ದನಾ ಧನಿಕನು ॥
ಭವನದೊಳು ತನ್ನ ಹೆಂಡಿರುಮಕ್ಕಳೆಲ್ಲರಿಗೆ
ಲವಮಾತ್ರವಂಜಿಕೆಯು ತೋರದಿರ್ಪುದನಾಗ
ಭವಹರಗೆ ಗುರುವರನಿಗರುಪಲದ ಕೇಳಿ ಸದ್ಗುರುವಿಂಗೆ ನಲುವಾದುದು ॥೬೩॥

ಇತ್ತ ತನ್ನುದ್ಧರಿಸಿದೀ ಗುರುವಿನುಪಕೃತಿಯು
ಚಿತ್ತದೊಳು ಸ್ಮರಿಸಿ ಧನಿ ಸಂತಸವು ಮೆರಸಿ ಗುರು
ಸತ್ತಮನ ಬಣ್ಣಿಸಿದನೆಂತೆನಲು ಸದ್ಗುರುವೆ ನಿಜ ಭಜಕ ಕಲ್ಪತರುವೇ ॥
ಮತ್ತವಹ ಭೂತದ ವಿಪತ್ತಿಯೆಂದೆನಿಪ ಕಡು
ಕುತ್ತದಿಂದೆಮ್ಮನೆಲ್ಲರನೆತ್ತಿ ಸಲುಹಿದೆ ಗು
ರೂತ್ತಮನೆ ಭಾಪು ಮುನಿಕುಲದೀಪ ಗಿರಿಚಾಪನಿರೂಪಗತಪಾಪನೇ ॥೬೪॥

ಚಿತ್ತೈಸು ನಿನ್ನನಾಂ ಸ್ತುತಿಸಲ್ಕೆ ನಾಲಿಗೆಯ
ದೆತ್ತ ನೀನೆತ್ತ ಧ್ಯಾನಿಸಲೆನ್ನ ಮತಿಯೆತ್ತ
ಮುತ್ತುಮಾಂಗದಲಿ ನಿನ್ನ ಪಾದುಕೆಯ ಪೊತ್ತು ನಾಂ ಹೊತ್ತುಗಳಿಪೆನು ಚಿನ್ಮಯ ॥
ಮತ್ತನೂನತೆಗೆ ತ್ವತ್ಪದಸೇವೆಯೇ ಫಲವು
ತತ್ತನುವಿಗದನಿತ್ತು ಪೊರೆಯೊ ಗುರುಸತ್ತಮನೆ
ಎತ್ತಲುಂ ತಾವ್ ಪೋಗದಿಲ್ಲಿರ್ಪುದಿಂತೆಂದು ನುತಿಸಿದನು ಧನಿಕನು ॥೬೫॥

ಎಂದಿಂತು ನುತಿಸುವಾ ಧನಿಕನಿಗೆ ಗುರುರಾಯ
ನೆಂದನೆಲೊ ಧನಿಕ ಕೇಳೊಂದು ತಾವಿನೊಳಾವು
ಬಂದು ನಿಲ್ಲುವರಲ್ಲ ಸಂಚಾರಮೂರ್ತಿಗಳು ಮುಂದೆ ಮತ್ತಂ ಬರ್ಪೆವು ॥
ಕುಂದದಾನಂದದಿಂದಿಂತುಸುರಿ ಶಿವಯೋಗಿ
ಬೃಂದಪತಿ ತಾಂ ಚಿದಂಬರಕೆ ಬಂದದರ ಘನ
ಸುಂದರತೆಯಂ ಕಂಡು ನಲಿದಾಡಿ ಮುಂದೆ ರಾಮೇಶ್ವರಕೆ ಪರಿತಂದನು ॥೬೬॥

ಖ್ಯಾತ ರಾಮೇಶ್ವರಕ್ಷೇತ್ರಮಂ ಕಂಡು ಸಾ
ಕೇತನಾಥನು ತಾನು ಪ್ರೀತಿಯಿಂ ಸ್ಥಾಪಿಸಿದ
ಪೂತಶಿವಲಿಂಗವನು ವಿಧ್ಯುಕ್ತರೀತಿಯಿಂ ಸ್ನಾತನಾಗುತ್ತರ್ಚಿಸಿ ॥
ಧೂತಕಿಲ್ಬಿಷನು ಶಿವಯೋಗಿನಾಥನು ಮಹಾ
ಸೇತುವಂ ಕಂಡಾಗ ರಾಮಚಂದ್ರನ ಮಹ
ತ್ವಾತಿಶಯಮಂ ಪೊಗಳಿ ಮೀರಿದಚ್ಚರಿ ದಾಳಿ ತಾಳಿದನು ಸೊಗದನುವನು ॥೬೭॥

ಹಿಂದೆ ಮುನಿಪತಿಯಗಸ್ತ್ಯನು ತನ್ನನತಿ ಕೋಪ
ದಿಂದೀಂಟಿ ಪೋದನವನೀಗಳನ್ಯನು ಯೋಗಿ
ಬಂದೆನ್ನ ತಡಿಯೊಳಗೆ ನಿಂದಿರ್ಪನಾತಂಗೆ ನಮಿಸಿ ಕೃಪೆಯಂ ಪಡೆವೆನು ॥
ಎಂದೆಂಬವೋಲ್ ತೋರತೆರೆಗಳಂಘ್ರಿಗೆ ಸೋಂಕ
ಲಂದದರ ಗಾಂಭೀರ್ಯವನು ತಾನು ತಾ ಕಾಣುತಾ
ನಂದದಿಂ ಸುತ್ತಣೆಹ ಸೃಷ್ಟಿಸೌಂದರ್ಯಮುಮೀಕ್ಷಿಸುತ್ತಮಿರ್ದನು ॥೬೮॥

ಅಲ್ಲಿ ದೀನರನಾಥರಿವರ್ಗೆ ಕುಂಟರು ಕುರುಡ
ರೆಲ್ಲರ್ಗಮಾರೋಗಣೆಯನಿತ್ತು ಶಿವಯೋಗಿ
ವಲ್ಲಭರು ಮಡಿವಾಳರಲ್ಲಿಂದ ಗೋಕರ್ಣ ಸತ್‌ಕ್ಷೇತ್ರಕೈತಂದರು ॥
ಸಲ್ಲಲಿತ ಗೋಪೃಷ್ಠ ಲಗ್ನನಪ್ಪೀಶನವ
ನಿಲ್ಲಿ ಗೋಕರ್ಣದೊಳಗಿರ್ಪನರಿದೆಂದನು
ತ್ಸುಲ್ಲಸಿತ ಕೌತುಕದೊಳವರು ಸುಮಹಾಬಲೇಶ್ವರ ಲಿಂಗಮಂ ಕಂಡರು ॥೬೯॥

ಹಿಂದೆ ಲಂಕಾಧಿಪತಿ ತಪವಿರಲ್ ಶಿವನೊಲಿದು
ಬಂದವನಿಗಾ ಪ್ರಾಣಲಿಂಗವಂ ಕುಡಲು ಬಳಿ
ಕಂದವನು ಲಿಂಗವಂ ಧರೆಗಿಡಲು ಪಾತಾಳವೂಲವನಿತಕ್ಕಿಳಿದಿಪ ||
ಚಂದವಾದೀ ಲಿಂಗದರ್ಶನೆಯು ಗೈದು ಮೇಣ್
ಸುಂದರದ ಮುನ್ನೀರಿನಂದವಂ ಕಂಡು ಮುದ
ದಿಂದ ಕೆಲದಿನವಿರ್ದು ಶಿವಯೋಗಿ ಮಡಿವಳನು ಪಂಢರಪುರಕ್ಕೈದಿದಂ ||೭೦||

ದಿಟ್ಟ ಮುರುಳ್ಳನಡಿಗೊಟ್ಟಜೆಯು ನಿತ್ತಂತೆ
ದಿಟ್ಟಿಯಂ ಕೀಳ್ತಿಟ್ಟು ಪೂಜಿಸುತ್ತಂ ಬಳಿಕ
ಬಟ್ಟಿತದ ಚಕ್ರವಂ ಪಡೆದುದನುಜರಸಿರಿದ ವಿಠ್ಠಲನ ಗುಡಿಗೆ ಬಂದು ||
ಕಟ್ಟಳ್ಕರಿಂದವನ ನಿಟ್ಟಿಸುತೆ ಕ್ಷೇತ್ರದಾ
ಬಟ್ಟೆಯಲ್ಲವ ನೋಡಿ ಮನವುಟ್ಟಿ ಮುದವಟ್ಟು
ಬಿಟ್ಟದಂ ಮುಂದೆ ನಡೆದುತ್ಸಾಹದಿಂದ ತಾನಾಳಂದಿಗೈತಂದನು ||೭೧||

ಆಳಂದಿಕ್ಷೇತ್ರದಾ ಮೂಲನೆಲ್ಲವ ನೋಡಿ
ಪೇಳಲಾರದ ಮುದಂಗೊಂಡು ಶಿವಯೋಗಿಮಡಿ
ವಾಳಗುರುವಲ್ಲಿರ್ಪ ಶಿವದಾಸ ರಾಮದಾಸರುಮೆಂಬ ಸಂತರಿಂದ ||
ಕೇಳಿಯಿಂದೊಡವೆರೆದು ಕೆಲಕಾಲವಲ್ಲಿರ್ದು
ಬಾಳ ಮಾತೇನೀರ್ವಸಂತರೊಡಗೂಡಿ ಕ್ಷೇ
ತ್ರಾಳಿಗೆಲ್ಲಕೆ ತಾನು ಮಿಗಿಲಪ್ಪ ಕಾಶಿಗಂ ಮತ್ತಮೈತಂದನವನು ||೭೨||

ಮುನಿಗಳೆದೆವನೆಯೊಳಗೆ ತೊಳಗಿ ಬೆಳಗುವ ಕಳೆಯೇ
ಚಿನುಮಯನ ಪರಶಿವನ ಸಿಂಗರದ ಸಿರಿಬೆಳೆಯೇ
ಮನುಮಥನ ರಾಣಿಯು ಹರತಿಗೆ ವರವಿತ್ತವಳೆ ಜಗವನುರೆ ಬಳಸಿದವಳೇ ||
ದನುಜರ್ಕಳೆಲ್ಲರನೊ ಕ್ಕಲಿಕ್ಕಿದ ನಿನ್ನ
ನನುದಿನದೊಳಂಗವಿಸಿ ನೆನೆನೆನೆದು ನುತಿಗೈವೆ
ಘನಮಹಾತ್ಮಳೆ ಭವಾನಿಯೆ ಪಾರ್ವತಿಯೆ ನೀನು ಪಾಲಿಸಾ ಬಿಡದೆನ್ನನು ||೭೩||

ಶ್ರೀ ಶಿವಾದ್ವೈತ ಪರವಿದ್ಯಾನವದ್ಯಾತಿ
ವೈಶದ್ಯ ವಿದ್ಯೋತಮಾನನ ಮಹಾಲಿಂಗ
ದೇಶಿಕ ಶಿಖಾಮಣಿಯ ಪಾಣಿಕಂಜಾತ ಸಂಜಾತನು ಕವೀಶಚರನು ॥
ಆ ಸದಾಶಿವಕವಿಯು ಭೂಸದಾಶಿವನ ಯೋ
ಗೀಶನ ನಿರಾಶನ ವಿಪಾಶನುರುಮಡಿವಾಳ
ದೇಶಿಕನ ಸುರುಚಿರ ಪುರಾಣದೊಳಗೆಂಟನೆಯ ತೀರ್ಥಯಾತ್ರೆಯ ಸಂಧಿಯು ॥೭೪॥

ಅಂತು ಸಂಧಿ ೮ಕ್ಕಂ ಪದಂಗಳು ೪೨೮ಕ್ಕಂ ಮಂಗಳಂ
ಶ್ರೀ ಶ್ರೀ

## ೯ನೆಯ ಸಂಧಿ

ಸೂಚನಾ:—ಪೇಳಲೇಂ ಯೋಗಿ ವಾರಾಣಸೀಕ್ಷೇತ್ರ ನೇ
ಪಾಳ ಹಿಮಗಿರಿಶಿಲಾ ನದಿಗಳಿಗೆ ಮೇಣು ಶ್ರೀ
ಶೈಲ ಗೋಕರ್ಣ ಸತ್ಕ್ಷೇತ್ರಂಗಳಿಗೆ ಪೋಗಿ ಮತ್ತೆ ಸೊಗಲಕೆ ಬಂದನು॥

ಹೆಣ್ಣನುಳಿದವನೆಂದೊಡೀರ್ವರಂಗನೆಯರನು
ಬಣ್ಣಗೊಳಿಸಿಟ್ಟಿರುವೆಯಂತುಮಲ್ಲದೆ ಕೇಳು
ಮಣ್ಣು ಬಿಟ್ಟವನೆಂದೊಡೆಲ್ಲ ಜಗಕೊಡೆಯನಿಹೆ ಹೊನ್ನುಗಳೆದವನೆಂದೊಡೆ
ಪೊನ್ನವೆಟ್ಟದ ಮೇಲೆ ಕುಳ್ಳಿರುವೆ ನೀನಿಂತು
ಹೊನ್ನು ಹೆಣ್ಣುಮಣ್ಣುಗಳ ಪರಶಿವನೆ ನಿನ್ನ ಬಿಡು
ಗಣ್ಯರರ್ಜಿಪರೆನಲ್ ಸ್ವಾತ್ಮಾನುರಕ್ತನಂ ವಿಷಯಂಗಳೇಗೈವವು ॥೧॥

ವಾರಾಣಸೀಪುರದಿ ಪೂರಾರಿ ಸಾಂಬನವ
ತಾರಗೊಂಡಿರ್ದ ಮಡಿವಾಳ ಗುರುಯೋಗಿಯುಂ
ಸೇರಿರ್ದ ಘನಸೂರಿವಾರವೆಲ್ಲವದಾಗ ಗೌರವದೊಳಿದಿರ್ಗೊಳ್ಳುತೆ ॥
ಸಾರದೇವಾಗಾರದೊಳಗಿರಿಸಿ ಯುಪಚರಿಸಿ
ಧೀರಮಣಿಯಪ್ಪ ಮಡಿವಾಳರಿಂದದು ತಾನು-
ಪಾರಶಾಸ್ತ್ರದ ತತ್ವ ಪರಿಣತೆಯನನುದಿನಂ ತಿಳಿದು ಪೋಗುತಿಹುದು ॥೨॥

ಸಲ್ಲಲಿತ ಮಡಿವಾಳಗುರುವರರು ಕೆಲದಿನಗ
ಳಲ್ಲಿರ್ದು ಬಳಿಕೊಂದುವಾಸರಂ ತನ್ನೊಳಗೆ
ಮೆಲ್ಲನಾಲೋಚಿಸಿದನೆಂತೆನಲು ನೇಪಾಳದೇಶಕಾಂ ಪೋಗುವೆಳ್ಳು ॥
ಅಲ್ಲಿಂದ ಹಿಮಶೈಲದಾಸನ್ನದುನ್ನತಿಯು
ನೆಲ್ಲವೀಕ್ಷಿಸಿ ಮತ್ತಮಂತಲ್ಲದೇನಿರ್ಪು
ದೆಲ್ಲಮಂ ಬಿಡದೆ ಕಂಡೈತರ್ಪುದೆಂದರಿದು ಕಾಶಿಯಿಂ ಪೊರಮಟ್ಟನು ॥೩॥

ಸೂರಿಮಣಿ ವಿರತಿಖನಿಯಪ್ಪ ಮಡಿವಾಳರಂ
ಧೀರರಾದರದಿಂದ ಕಳುಪಲ್ಕೆ ನೇಪಾಳಸಾರದೇಶಕ್ಕೆ ಗುರುಮಡಿವಾಳರೈತರಲ್
ಭೂರಮಣನಾ ಮುನ್ನ ಮಿವರ ವಾರ್ತೆಯನೆಲ್ಲ ಕೇಳಿ ಬಲ್ಲವರಿಂದಲೀ ॥
ಮೀರಿದುತ್ಸವದಿಂದ ದಂಡಿಗೆಯೊಳಿರಿಸಿ ಪರಿ
ವಾರವದು ಮಂದಿರಕ್ಕೈತಂದು ವರನಿಜಾ
ಗಾರದೊಳಗವರನ್ನು ತಂದಿಳಿಸಿ ಮನವಾರೆಯುಪಚರಿಸಿದರು ಭಕ್ತಿಯಿಂ ॥೪॥

ಇವರ ಮೊಗದಾ ಬ್ರಹ್ಮವರ್ಚಸವನಂಗಸೌ
ಷ್ಟವವನುಂ ಮೇಣಿವರ ವಿಜಿತೇಂದ್ರಿಯತ್ವಮುಮ್ಮ
ನ್ನಿವರ ವಿರತಿಸಂಪತ್ತಿಯುಂ ರುಚಿರಜೀವನ್ಮುಕ್ತಲಕ್ಷಣವನು ॥
ಇವರ ಸಮತಾಮತಿಯನಿವರ ಶಾಂತಿಯರೀತಿಯು
ನ್ನಿವರ ಮಹಿಮೋತ್ಕರವನಿವರ ಪೊಸಜಸದಿರವ
ನಿವರಘನಭೂತದಯವನುಮಿವರ ಗುಣಗಣವನರಿದು ನೃಪ ಬೆರಗಾದನು ॥೫॥

ಲೋಕದೊಳು ಧನಸುತಾವನಿ ಮುಖ್ಯಸಂಪತ್ತಿ
ಯೇಕಗುಣಸಂಪತ್ತಿಯುಳ್ಳೊಡದು ಸಂಪತ್ತಿ
ಬೇಕದಿಲ್ಲದೊಡವು ವಿಪತ್ತಿಯುದರಿಂದ ಸದ್ಗುಣಗಣವ ಸಿರಿಯೆ ಮಿಗಿಲು ॥
ಶ್ರೀಕರಮದಾದ ಗುಣರತ್ನವೊಂದಿಲ್ಲದೊಡ
ದೇಕುಳಿದ ಭೋಗಸಂಪದವೆನಲು ಜಗದೊಳಗ-
ನೇಕ ಸದ್ಗುಣಗಣವು ಯೋಗಸಂಪದಕವಶ್ಯಕವಾಗಿ ಬೇಕಲ್ಲವೇ ॥೬॥

ಮೇಲೊರೆದ ರೀತಿಯಂತಾ ಯೋಗಿಗಾ ಸುಗುಣ
ಜಾಲವಿರೆ ಶಿವಯೋಗಿ ಈತನೇ ಎಂದು ಭೂ
ಪಾಲನಿವನಾತ್ಮಮನದೊಳಗರಿದು ಭಕ್ತಿಯಿಂದುಪಚರಿಸಿದನು ನಿತ್ಯದಿ ॥
ಕಾಲಕಾಲಕ್ಕೂರಜನರು ವರಶಿವಯೋಗಿ
ಲೀಲೆಯಂ ಕಾಣಲ್ಕೆತಂದು ದರ್ಶನಗೊಂಡು
ಮೇಲೆನಿಪ ಭಕ್ತಿಯಿಂ ಪೊಡಮಟ್ಟು ಪೋಗುತಿರಲೆಸದನಾ ಶಿವಯೋಗಿಯು ॥೭॥

ರಾಜರಾಜನ ಸಖನ ಪರಿಜುದಾಳಿದಯೋಗಿ
ರಾಜನಿಗೆ ಮಾಜದಲೆ ಭಕ್ತಿಯಿಂ ನೇಪಾಳ
ರಾಜನುಂ ಹೊಂಬಣ್ಣದೆಸೆವ ಮಂಟಪವನ್ನು ರಚಯಿಸುತ್ತಾದರದೊಳು ॥
ರಾಜಿಪಾ ಮಂಟಪದಿ ಮಡಿವಾಳಭಕ್ತಸುರ-
ಭೂಜನಂ ಕುಳ್ಳಿರಿಸಿಯಡಿದೊಳೆದು ಮೇಣ್ ಪಾದ
ಪೂಜೆಗೈದಾ ಪಾದತೀರ್ಥವಮಂ ಕೈಕೊಂಡು ತೃಪ್ತನಾಗಿರ್ದನು ॥೮॥

ಈ ಪಾದದರ್ಶನೆಯು ಸಡಗರವ ನೋಳ್ಪುದಕೆ
ನೇಪಾಳಜನಗಳುಂ ಮಿಂದು ಮಡಿಯನ್ನುಟ್ಟು
ಪಾಪಲೋಪಂಗೈವ ಭಸಿತವುಂ ನೆರೆಪೂಸಿ ತೆಂಗು ಪಣ್ಕರ್ಪುರವನು ॥
ಆಪರಿಯಕಾಣ್ಕೆಯನ್ನಾಗಿ ಮುಂದಿಟ್ಟು ಭವ
ಲೋಪಕರ ಮಡಿವಳರ ಚರಣಗಳಿಗಡಗೆಡೆದು
ಭೂಪನೆಸಗುವ ಪಾದಪೂಜೆಯುತ್ಸವವನ್ನು ನೋಡಿ ನಿತ್ಯಂ ಪೋಪರು ॥೯॥

ಇಂತು ಶ್ರೀಗುರುಪಾದಪೂಜನೋತ್ಸವದೊಳಗೆ
ಸಂತತಂ ನರಪತಿಯು ಕಾಲಗಳೆವುತ್ತೆ ವೇ
ದಾಂತವಾಕ್ಯ ಶ್ರವಣಗೊಂಡು ಸುಖದಿಂದ ಸತ್ಸಂಗದೊಳು ನಿರತನಾಗಿ ||
ಶಾಂತನಹ ಮಡಿವಾಳಗುರುವಿನೊಳಗನುದಿನಾ-
ತ್ಯಂತಕರುಣಂಬಡೆದು ಮುಂದೆ ತನಗಪ್ಪ ರಾ
ಜ್ಯಾಂತನರಕವದೆಂಬ ನೀತಿಕಾರರು ಪೇಳ್ದ ವಾಕ್ಯಮಂ ಪುಸಿಗೈದನು ||೧೦||

ಅನವದ್ಯಗುರುಸೇವೆಯಾಜ್ಞಾನುವರ್ತನವು
ದಿನದಿನದಿ ಗುರುಪೂಜೆ ಮುಂತಾದುವೆಲ್ಲವಂ
ತನುವಿಂಗೆ ಭೂಷಣವದೆಂದರಿದು ತನುವಿನಿಂ ಗುರುಸೇವೆಗೈವನವನು ||
ಘನದಯಾತ್ಮಕ ಗುರುವಿನೊಡನೆ ನಲ್ವಾತು ಮೇ
ಣನಘ ಮಂತ್ರೋಚ್ಚರಣವಾಗಮದಪಠನವಿವು
ದಿನದಿನವು ವಚನಕ್ಕಲಂಕಾರವೆಂದರಿದು ವಚನದಿಂ ಸೇವಿಸುವನು ||೧೧||

ಶಮೆಯು ದಮೆಯು ವಿವೇಕವುರುವಿದ್ಯೆ ಸುವಿರತಿಯು
ಕ್ರಮವಿಡಿದಿವೆಲ್ಲವುಂ ಮನಕೆ ಭೂಷಣವೆಂದು
ಶ್ರಮಗೊಂಡು ಮನದಿಂದೆ ಸೇವಿಸುವನಿಂತವನು ತ್ರಿಕರಣದಿಂ ಪರಿಶುದ್ಧನು ||
ಅಮಮರಾಜ್ಯದ ಪಿರಿಯಸಿರಿಯನತಿಗಳೆದು ತಾ
ನಮಲ ಮಡಿವಾಳಗುರು ಪದಕಮಲವೇ ತನಗೆ
ವಿಮಲಗತಿಯೆಂದು ಭಾವಿಸಿದ ಭೂಪನ ಪುಣ್ಯವೆಂತುಟರಿಯಲುಬಾರದು ||೧೨||

ಕಾಯದೊಳು ವಾಙ್ಮನಸಗಳೊಳು ಪರಿಶುದ್ಧನಹ
ರಾಯನಂ ಕಂಡು ಗುರುರಾಯನಾನಂದದಿಂ
ಹೇಯ ವಿಷಯವನೆಲ್ಲ ಕಡೆಗಣಿಸಿ ಮೇಣು ನಿಃಶ್ರೇಯಸವ ಪೊಂದಲೆಂದು ||
ಗಾಯ ಕೇಳಿಲೊ ಮೊದಲು ಮಾಯೆಯಿಂ ಬಳೆದು ಬಳಿ
ಕಾಯತದ ಕಾಯವೆನಿಸುತ್ತೆ ಮೇಣದು ಕಡೆಗೆ
ನಾಯನರಿಗಳ ಬಾಯ್ಗೆ ತುತ್ತಾಗುವಂಗವಿದು ನಿನ್ನದೆಂತಾಯ್ತು ತಿಳಿಯೆ ||೧೩||

ತನುನಿನ್ನದಲ್ಲವೆನಲನ್ಯರಾರ್ನಿನ್ನವರು
ಜನಕ ನಿನ್ನವನೆ ನಲ್ವೆಂಡತಿಯು ನಿನ್ನವಳೆ
ತನುಜರನುಜರು ನಿನ್ನವರೆ ನೀನುಮವರಳಿವ ಕಂಡು ಕಂಡೇತಕಳುವೆ ॥
ಘನಪರಾಕ್ರಮಿ ವಾಲಿ ಬಲಿಚಕ್ರವರ್ತಿ ರಾ
ವಣ ನಹುಷ ಸಗರ ರಾಘವ ಕೌರವಪ್ರಭೃತಿ
ಜನಪರೆಲ್ಲರ ಹಾನಿಗತಿಯ ಕೇಳ್ದುಂ ಕೇಳ್ದು ಭೋಗವಮಂ ನೀಗದಿಹುದೇ ॥೧೪॥

ಭೋಗವದು ಸುರಚಾಪಲತೆಯಂತೆ ಚಂಚಲಾ
ಭೋಗದಂತುದಿತವಿಪ್ಪುದರಂತೆ ತುಹಿನಜಲ
ಯೋಗದಂತೇಗಳುಂ ಕ್ಷಣಿಕಮಲ್ಲವೆ ದೊರೆಯ ನಿನ್ನ ರಾಜ್ಯದ ಭೋಗವ ॥
ರೋಗವೆಂದರಿದು ಭವರೋಗವೈದ್ಯನ ಶಿವನ
ಭೋಗಿಭೂಷಣ ಮಹಾದೇವನಂಘ್ರಿಯ ವಿಡಿದು
ಜೋಗಿಜಂಗಮರ ಕೃಪೆವಡೆದು ನೀಂ ಬಾಳಿ ವರಮೋಕ್ಷವಂ ಪಡೆವುದಯ್ಯ ॥೧೫॥

ಕ್ಷಣಭಂಗುರವದಾದೊಡಂ ಭೋಗವನು ಲಕ್ಕ
ದೆಣಿಕೆಗೂಡಿದ ಹಣವ ವೆಚ್ಚಗೈದಾ ಭೋಗಿ
ಜನರು ಸಂಪಾದಿಸುವರವರದೇಂ ಪಾಮರರೋ ನಿಜವಾದ ಮೋಕ್ಷವನ್ನು ॥
ತ್ರಿಣಯನನ ಪಾದಕ್ಕೆಯಾರು ಬಿಲ್ವಪತ್ರಗಳ
ನಣಿಯರಂ ಧರಿಸಿ ಪಡೆವಡೆ ರಾಯ ಕೇಳ್ ತನ್ನ
ಹಣದ ಕಾಸೊಂದದೇಂ ವೆಚ್ಚವಹುದೇ ತಿಳಿಯರಿದನಾರುಮೀ ಜಗದೊಳು ॥೧೬॥

ಭವಭೋಗವನು ನೀಗುವಡೆ ಘೋರವಿಪಿನಕ್ಕೆ
ಜವದಿ ಪೋಗಲುಬೇಡ ಜನಸಹಾಯವುಬೇಡ
ದ್ರವಿಣದಾಸೆಯು ಬೇಡ ತನುವ ದಂಡಿಸಬೇಡವುಪವಾಸವಿರಬೇಡವು ॥
ಭವಹರನ ಪರತರನ ಸ್ಮರಹರನ ಹರಿಶರನ
ಶಿವನಂಘ್ರಿ ಕಮಲದೊಳಗಚ್ಚೊತ್ತಿದಂತೆ ಮನ
ವವಿರತಂ ನೆಲಸಿ ನಿಲೆ ಸಾಕದುವೆ ಶಕ್ಯವಹುದೇಕುಳಿದ ಜಂಜಾಟವು ॥೧೭॥

ಮನವೊಂದೆ ಬಂಧಕ್ಕೆ ಮೋಕ್ಷಕ್ಕೆ ಕಾರಣವು
ಮನವೆ ಪಾಪದ ಮೂಲವದನಳಿಸಲಿಕೆ ಕಾಲ
ಮನವೆ ತಾನೆ ಜಗತ್ತು ಪರವಸ್ತುವಿನಗೊತ್ತು ಸಂಪತ್ತುವದು ವಿಪತ್ತು ॥
ಮನವೊಂದನಂ ನೀನು ವಶಗೈದೊಡದು ಸಾಕು
ಚಿನುಮಯನ ಸಾರೂಪ್ಯವಿರದೆ ನಿನಗಪ್ಪುದೆಂ
ದೆನುತೆ ನಿಜಭಕ್ತನಹ ರಾಜನಿಗೆ ಮಡಿವಾಳಯೋಗಿಯುಪದೇಶಿಸಿದನು ॥೧೨॥

ಮೊದಲೆ ಗುರುವಡಿಯಾಳುತಾನಾದ ನರಪತಿಯು
ಸದುಪದೇಶವದಾಗೆ ಕೇಳ್ವುದೇಂ ಪುಟಪಾಕ
ಪೊದಗಿರ್ದ ಮಿಸುನಿಯಂತೊಳಹೊರಗೆ ಸ್ವಚ್ಛತೆಯಂದುಂಟಾಗಿ ಗುರುವಿಗೆರಗಿ ॥
ಸದಮಲಾತ್ಮನೆ ಪದುಳವೆರಸಿ ಯುಪದೇಶಿಸಿದ
ಮಧುರವಚನಾಮೃತವನಾದರದಿ ಕುಡಿದು ನಾಂ
ಮುದಿತನಾದೆನು ಮೇಣು ವಿದಿತನಾದೆನು ಗುರುವೆ ಎಂದಿಂತು ಬಂಣಿಸಿದನು ॥೧೯॥

ಎಂದಿನಂದದಿ ತಾನು ಗುರುವಿನಂ ಕುಂದಣದ
ಚೆಂದವಹ ಮಂಟಪದೊಳಿರಿಸಿ ಪೂಜೆಯಗೈದು
ಕುಂದದಂಘ್ರಿಯ ತೀರ್ಥಗೊಂಡು ಸುಖದಿಂದಿರಲೊಕ್ಕೊಂದುದಿವಸಂ ಯೋಗಿಯು ॥
ಮುಂದೆ ನಿಂದಿರ್ದ ನಿಜಭಕ್ತನಪ್ಪವನಿಪನಿ
ಗೆಂದನೆಲೊ ರಾಯ ಕೇಳ್ ಹಿಮವದದ್ರಿಯಭಾಗ
ದಂದವಂ ಕಾಣಲಿಚ್ಛೆಯದುಂಟು ಪೋಗುವೆನು ನೀನಿತ್ತ ಸುಖವಿರ್ಪುದು ॥೨೦॥

ಚಳಿವೆಟ್ಟದತ್ತಲಂ ಬಲ್‌ಚಳಿಯು ಮುಸುಕಿಹುದು
ಬಳಬಳನೆ ಆಲಿವರಲೊಡ್ಡನವು ಬೀಳುವುದು
ಬಳಯುತನುನಾದೊಡವನ ಕೈಕಾಲ್ಗಳ್ಕೈ ಕೀಲದಿಂದ ಸೇದುತಿಹವು ॥
ಇಳಿತೇರು ತಾಣದೊಳು ನೀರ್ಗಲ್ಲಪಾಸರಿಯು
ಕುಳಿತೇರುವದು ಮತ್ತೆ ಕುಳಿತಿಳವುದಾ ತನುವಿ
ನೊಳಗೆ ನಡುಕಂ ಕಂಠದೊಳಗೆ ಗದ್ಗದರವ ವುಣ್ಮುವುದು ಚಳಿಯಿಂದತಿ ॥೨೧॥

ಶೀತಗಿರಿಯಾತ್ರೆಯದು ದುಃಖದಾಯಕವಹುದು
ಮಾತದೇಂ ಸದ್ಗುರುವೆ ಬೇಡವಲ್ಲಿಗೆ ಪಯಣ
ವಾ ತೆರದ ಪರ್ವತದ ಚಿತ್ರಪಟವಿಲ್ಲಿಹುದು ನೋಡಿರೆಂದಾಗ ತಾನು ॥
ಪ್ರೀತಿಯಿಂ ಚಿತ್ರಪಟವನ್ನು ತೋರಿಸಲಾಗ
ಳಾ ತಪೋನಿಧಿ ತದೌನ್ನತ್ಯ ಪರಿಣಾಹಗಳ
ನಾ ತರದ ಸುಂದರತೆಯುಂ ಕಂಡು ನೆಲ್ಲಿ ಚ್ಚೈತನಗದಿಮ್ಮಡಿಯಾದುದು ॥೨೨॥

ಕೇಳು ರಾಜನೆ ಸಾವಿಗಂಜಿ ಬಾಳುವದುಂಟೆ
ಹೇಳು ಮನೆಯೊಳು ಕುಳಿತಡಾ ಸಾವು ಪೋಪುದೇಂ
ಕೀಳಾದ ದೇಹವಂ ಪುಣ್ಯಕರ್ಮದೊಳಿರಿಸೆ ಫಲವಿತ್ತು ಸಾಹತಿಹುದು ॥
ಬಾಳೆಯದು ನೀರೊಳಗೆ ಬಾಳಿ ಕೆಲಕಾಲದಲಿ
ಬಾಳಸಿಹಿಯಾದ ಪಣ್ಗಳನಿತ್ತು ತಾನುಮಳಿ
ಗಾಲದೊಳಗಾದಪ್ಪುದೆಂಬುದಿದು ಜಗದೊಳಗೆ ಸರ್ವರಿಗೆ ದೃಷ್ಟವೈಸೆ ॥೨೩॥

ಇಂತುಸುರಿ ಹಿಮಗಿರಿಯ ಯಾತ್ರೆಗುಜ್ಜುಗಿಸಿ ಸಾ
ಮಂತ ನೇಪಾಳರಾಜನಿಗೆ ಪರಕೆಯನಿತ್ತು
ಶಾಂತಶಿವಯೋಗಿ ನೇಪಾಳದಿಂ ಪೊರಮಟ್ಟು ಹಿಮಗಿರಿಯ ದಾರಿವಿಡಿದು ॥
ಸ್ವಾಂತದೊಳು ತನ್ನ ಬಾವಾಅಜ್ಜರೆಂಬುವರ
ಚಿಂತಿಸುತ್ತಲ್ಲಲ್ಲಿಳಿದು ಕೆಲದಿನಂ
ಅಂತದಲಿ ಹಿಮಗಿರಿಯಪ್ರಾಂತವನು ಸೇರಿದನು ಕಾಂತಮಹಿಮಾಕ್ರಾಂತನು ॥೨೪॥

ಅಲ್ಲಿ ಹಿಮನಗದಲ್ಲಿ ಪೊಲ್ಲವಹ ಚಳಿಯಲ್ಲಿ
ಬೆಲ್ಲಿಯುಂ ಮುಸುಕಿರ್ದ ಮಂಜಿನತಿಪುಂಜದಲಿ
ಚಲ್ಲವರಿದಿರ್ದ ಬಲ್‌ಚಳಿಗಾಳಿಯಲ್ಲಿ ತಾಂ ಬಲ್ಲಿದನು ಹಾ ಎನ್ನದೇ ॥
ಸೊಲ್ಲುಸೊಲ್ಲಿಗೆ ಶಿಪಾವಲ್ಲಭನ ನೆನೆಯುತ್ತ
ಎಲ್ಲೆಡೆಯೊಳಿರ್ಪ ನೀರ್ಗಲ್ಲಮೇಲಡಿಯಿಟ್ಟೊ
ಡಲ್ಲಿ ತಾನುಸ್ಸೆನ್ನದೈತಹನು ಗುರುರಾಯ ಮಾರಾಯ ಚಿತ್ಕಾಯನು ॥೨೫॥

ಆ ಶೀತಬಾಧೆಯನು ಪರಿಹರಿಪ ವಸ್ತುಗಳ
ನಾಶಿಸದೆ ಸನ್ಮಹಿಮವಾರಾಶಿ ಶಿವಯೋಗಿ
ನಾಶಿಕಾಗ್ರದಿ ಲಕ್ಷವಿಟ್ಟೇಕತಾನನಾಗುತ್ತೆ ಮೈಮರೆದು ತಾನು ॥
ಪಾಶಹರ ಶಿವಯೋಗಸುಸಮಾಧಿಗತನಾಗಿ
ಯಾ ಶಮಿಯು ತನಗೇಸುದಿವಸಗಳು ಗತಿಸಿದೊಡ
ಮಾ ಸಮಾಧಿಯೊಳು ತಾಂ ಮುಳುಗಿರ್ದನೆಂದೊಡಾನೇನೆಂಬೆನಾ ಮಹಿಮನಾ ॥೨೬॥

ಆ ಯೋಗಸುಸಮಾಧಿ ಬಲದಿಂದ ಚರಿಸಿದೊಡ
ಮಾ ಯೋಗಿ ನಿಂದೊಡಂ ಪ್ರೊರಗಣಾಗುವ ತನ್ನ
ಕಾಯಭಾನವದಿನಿತು ತನಗಿರದಕತದಿಂದ ಹಿಮವದದ್ರಿಯ ಮಧ್ಯದಿ ॥
ಆಯಸವದಿನಿಸಾನುಮಿಲ್ಲದಿರುತಿರಲು ತಾ
ನಾ ಯೋಗಿ ನಾಲ್ಕೈದು ಮಾಸವಲ್ಲಿರ್ದು ಬಳಿ
ಕಾಯತಾದ್ರಿಯ ಮೇಲಣೇಶಗೃಹದೊಳಪ್ರೊಕ್ಕು ನೋಡಲದು ನೀರ್ದುಂಬಿರೆ ॥೨೭॥

ನೀರಿಡಿದ ಲಿಂಗಮೂರ್ತಿಯು ಪಿಂದಣೆದೆಯೊಳಿಹ
ನೀರೊಳಗೆ ಮೂರುದಿವಸಂಬರಂ ಕುಳಿತನಾ
ರಾರಾರಿದಂ ಕೇಳಿಯಚ್ಚರಿದಾಳರೇತಕೆನಿಸಿ ಮೊದಲು ಚಳಿಯುದಶಕ್ಯವು ॥
ಈ ರೀತಿ ಚಳಿಗಾಳಿ ಮುಸುಕಿರ್ದ ನೀರಿನೊಳು
ಸೇರಿರ್ಪುದಂತಿರಲಿ ಕೇಳ್ವುದಕ್ಕಾಗದಿದು
ಸಾರತರಯೋಗಸಿದ್ಧರಿಗೆ ಸಿದ್ಧಿಪುದನ್ಯ ಭೋಗಸಿದ್ಧರಿಗಪ್ಪುದೇ ॥೨೮॥

ಅಣಿಮಾದಿ ಯೋಗಸಿದ್ಧರಿಗಾವುದಸದಳವು
ತ್ರಿಣಯನನೆ ಅವರು ಕೈಬಸನಿರ್ಪನೆಂದೊಡುಳಿ
ದಣುಮಾತ್ರವವರಿಗಾವುದಸಾಧ್ಯವಿಳೆಯೊಳಗಣಖಿಲ ಸದ್ವಸ್ತುಗಳೊಳು ॥
ತ್ರಿಣಯನನೆ ತಾನಾಗಿ ಮೆರೆವ ಮಡಿವಾಳಗುರು
ಪ್ರಣವರೂಪನ ಚಳಿಯುಗಾಳಿ ನೀರ್ಗಲ್ಲುಗಳ
ಗಣವದೇಂಗೈವುದೆನಲೀ ಮಹಾತ್ಮನ ಮಹಾತ್ಮತೆಯನ್ನೇನೆಂಬೆನು ॥೨೯॥

ಆ ತರಣಿಕಾಂತದೊರತೆಯು ಮಧ್ಯಭಾಗದೊಳ
ಗಾತಪವು ಬೀಳೆ ನೀರುಕ್ಕುತಿರಲದರಲ್ಲಿ
ಯಾ ತಪೋನಿಧಿಯುಕ್ಕಿಗಂಟನಿಡಲಾದನ್ನ ವಾತುರದೊಳರ್ಪಿಸ ತ್ತೆ ॥
ಶೀತಕರಕಾಂತದೊರತೆಯು ನಿರ್ಮಲೋದಕವ
ಪ್ರೀತಿಯಿಂ ಕುಡಿವನೋರೋರ್ವೆ ಗುರುಮಡಿವಾಳ
ನಾ ತಪಸ್ವಿಯು ಮಹತ್ತರ ಯಶಸ್ವಿಯು ತುಷಾರಾಚಲದ ಪ್ರಾಂತದಲ್ಲಿ ॥೩೦॥

ಈ ಪರಿಯೊಳಿತ್ತ ಗುರುಚಿರಕಾಲವಿರಲತ್ತ
ನೇಪಾಳರಾಜನಾ ಹಿಮಗಿರಿಗೆ ಪೋದಗುರು
ತಾಪಸೊತ್ತಮನಿನ್ನುಮೈದಲಿಲ್ಲೆನುತೆ ಬಹು ಚಿಂತೆಯೊಡಗೂಡಿ ಬಳಿಕ ॥
ಆ ಪರಮಯೋಗಿ ಗುರುವರನ ವಾರ್ತೆಯ ತಿಳಿವ
ಡಾ ಪಾವನಾಕೃತಿಯನೊರೆದು ತನ್ನನುಚರಕ
ಲಾಪಕ್ಕೆ ಕರೆತಹುದಕಾಣತಿಯನಿತ್ತು ಕಳುಹಿದನವನು ಸಂಭ್ರಮದೊಳು ॥೩೧॥

ಆಗಳವನನುಚರರು ಹಿಮನಗದ ದಾರಿವಿಡಿ
ದಾ ಗುರುವಿನಾ ರಾಜನೊರೆದ ಲಕ್ಷಣಗಳಿಂ
ದಾ ಗುರ್ತುಗಾಣಲಿಚ್ಛೆಯಿನೈದುತಿರಲತ್ತ ಹಿಮಶೈಲದತ್ತಣಿಂದ ॥
ಸಾಗಿ ನಡೆಗೊಂಡು ಬಹ ಮಡಿವಾಳಗುರುವರರು
ಪೋಗುತಿರ್ಪನುಚರರುಮವರೆಲ್ಲರುಂ ಕೂಡ
ಲಾ ಗುರುವಿನಂ ನೋಡಿ ನರಪಾಲನನುಚರರು ನೃಪನೊರೆದ ಲಕ್ಷಣಗಳಿಂದ ॥೩೨॥

ರಾಜಿಸುವ ಪರಮಗುರುರಾಜನಂ ಗುರ್ತುಗೊಂ
ಡೋಜೆಯಿಂದಡಿಗೆರಗಿ ಕೈಮುಗಿದು ನೇಪಾಳ
ರಾಜ ನಿಮ್ಮನ್ನು ಬರಮಾಡಿಕೊಳ್ಳಲಿಚ್ಛೆಯಿಂದಟ್ಟಿದನು ನಮ್ಮೆಲ್ಲರ ॥
ನೈಜ ಮಾತಿದು ಗುರುವೆ ತಳುವದೈದುವುದೆಂದು
ಮಾಜಿಸಿ ಬಿನ್ನೈಸಲವರೊಡನೆ ನೇಪಾಳ
ರಾಜನೂರಿಗೆ ಬರಲ್ ನೃಪನವರನಿದಿರ್ಗೊಂಡು ಸಡಗರದಿ ಕರೆತಂದನು ॥೩೩॥

ಬಂದ ಗುರುವಿನನವನಿಪಾಲನಾನಂದದಿಂ
ದಂದವೊಂದಿರ್ಪ ಕುಂದಣದ ಪೀಠದೊಳಿರಿಸು
ತಂದವರ್ಗೆ ವಂದನಂಗೈದಷ್ಟವಿಧ ಪೂಜೆಯಿಂದಡಿಯನರ್ಚಿಸಿದನು ॥
ಮಿಂದಾಗಳೈತಂದ ಮಂದಿ ಸಂದಣಿಭಕ್ತಿ
ಯಿಂದ ವಂದಿಸಿ ಪೂಜೆಯಂದವಂ ನೋಡಿ ಮುದ
ದಿಂದ ಕಾಣ್ಕೆಯನಿತ್ತು ಬಂದರಾ ತಮತಮ್ಮ ಮಂದಿರಕ್ಕವರೆಲ್ಲರು ॥೩೪॥

ಮುನ್ನವೆಸಗಿದ ಪಂಚವಿಧರುಚಿರ ಮಧುರ ಪ
ಕ್ವಾನ್ನದಿಂ ಮಡಿವಳಗುರೂತ್ತಮನ ಮನವು ದಣಿ
ವನ್ನವಂವನಿಪನ ಮಾನವ ತಣಿಗೊಳಿಸಲೀರೀತಿ ತಿಂಗಳೊಂದು ಗತಿಸಲು ॥
ಇನ್ನೊರೆವೆನೊಂದುದಿನವೇಕಾಂತದೊಳು ರಾಜ
ನನ್ನು ಗುರುಕುಲತಿಲಕ ಕೇಳ್ದನೆಂತೆನೆ ನರಪ
ನೊನ್ನದಿಂ ಗೈದಿದೀ ಪೀಠವನ್ನಾರ್ಗೆ ನೀಂ ಗೈಸಿರುವೆ ಪೇಳ್ವುದೀಗ ॥೩೫॥

ಗುರುವೆ ನೀವೇರುವೀ ಹೊಂಬನ್ನದಾಸನವಿ
ತರರಿಗೇಂ ಸಲ್ಲುವದೆ ನಿಮಗೋಸುಗೆಸಗಿರ್ಪೆ
ನಿರದಿಂದು ಸದ್ಗುರುವೆ ಚರಣಕರ್ಪಿಸುವೆನಿದನಪ್ಪುಗೈದೆನ್ನ ಸಲಹು ॥
ನರಪನುಕ್ತಿಗೆ ಗುರೂತ್ತಮನೊರೆದನೆಲೊ ಭೂಪ
ವಿರತಿಯೊಳು ನಿರತನಪ ವಿರತನಿಗೆ ಕನಕವರವು
ವಿರಸವೆಂದೊಡದೇತಕೆಮಗೆನಲು ಭೂಪನನು ಗುರುವರನಿಗಿಂತೆಂದನು ॥೩೬॥

ದಾನವದು ಸತ್ಪಾತ್ರ ಶಿವಯೋಗಿಗುಚಿತವಭಿ
ಮಾನಿಗೆ ದುರಾಚಾರಿಗವಿಚಾರಿಯನುಚಿತಗುಚಿತ
ವೇನದು ನಿಮಿತ್ತವಿಗಾನು ನಿಮಗೀವೆನೆಂದೆರಗಿತ್ತು ನೀರ್ಬಿಟ್ಟನು ॥
ಮೌನಿವರನವನಿತ್ತ ಸ್ವರ್ಣಪೀಠವ ಗ್ರಹಿಸಿ
ನಾನೇನ ಪೇಳ್ವುದಾತನ ವಿರತಿಭರನನು
ಮಾನವಿಲ್ಲದೆ ಸ್ವರ್ಣಕಾರನಂ ಬರಮಾಡಿ ಚೂರ್ಚೂರು ಮಾಡಿಸಿದನು ॥೩೭॥

ಮಂಗಳಾತ್ಮಕಯೋಗಿಯುಊರೊಳಿಹ ಬಡ ಜ
ನಂಗಳಿಗೆ ಬಂಗಾರದಾಸನದ ತುಂಡುಗಳ
ನಂಗವಿಸುತೊಂದೊಂಡನೆಲ್ಲರಿಗೆ ಕೊಟ್ಟು ಭುವನಂಗಳಲಿ ಕೀರ್ತಿವಡೆದು ॥
ತುಂಗಮಹಿಮನು ತನ್ನ ನಿಜವಾದ ವಿರತಿಯನು
ಕಂಗೊಳಿಸುವಂತೆಸಗಿ ನೇಪಾಳದಲಿ ಕೆಲದಿ
ನಂಗಳಿರ್ದಾಬಳಿಕವಾ ಶಿಲಾನದಿಗೆ ಪೋಪಿಚ್ಛೆಯಂ ನೃಪಗೊರೆದನು ॥೩೮॥

ಆ ವಿರತಗುರುವಿನುಕ್ತಿಯ ಕೇಳಿ ಭೂಮಿಪತಿ
ಭಾವದೊಳು ಹರಿಸಗೊಂಡಾ ಗುರುಗಳಡಿಯೆಡೆಯೊ
ಳೈವತ್ತು ಸಾವಿರದ ರೂಪಾಯಿಗಳ ಕಾಣ್ಕೆಕೊಟ್ಟು ಪೊಡಮೊಟ್ಟು ನಿಲಲು ॥
ಆ ವೇಳೆಯೊಳು ಗುರುವು ಭೂಪ ಕೇಳೀ ಹಣವು
ಭಾವಿಸಲು ನಿನ್ನ ಬಳಿಯೊಳಗಿರಲ್ವೇಳ್ಕುಮೆನ
ಲೀ ವಸುಧಿಪನು ಯೊಡೆಯ ಹಸಾದವೆನುತ್ತಾ ಹಣವ ಕೈಕೊಂಡು ಬೀಳ್ಕೊಟ್ಟನು ॥೩೯॥

ಆ ಮಹಾ ಗುರುವರರು ನೇಪಾಳದಿಂ ಪೊರಟು
ಭೂಮಹಿತತರ ಶಿಲಾನದಿಗೈದುವವಸರದಿ
ರಾಮದಾಸನು ಮೇಣು ಶಿವದಾಸನುಂ ಮಿಕ್ಕ ಬೈರಾಗಿಗಳನೇಕರು ॥
ಪ್ರೇಮದಿಂ ತನ್ನೊಡನೆ ಬರೆ ದಾರಿಯೊಳಗವರು
ನೇಮದಿಂ ಮಳೆ ಸುರಿಯೆ ತೊಯ್ದು ಬಟ್ಟೆಗಳಿಂದ
ರಾಮ ರಾಮಾ ಎನುತ ನಡುಗುತ್ತನಿಂದರಾ ಬೈರಾಗಿಗಳು ಸರ್ವರೂ ॥೪೦॥

ಮುಂದೆ ಗುಡಿಯೊಂದು ಬರಲಾಗಳೊಳಪೊಕ್ಕು ಚಳಿ
ಯಿಂದ ನಡಗುವ ಪಿಂದಣೊಡನಾಡಿಗಳನೆಲ್ಲ
ರಂದಯುದಿ ನೋಡಿ ಮಡಿವಾಳಗುರು ಗುಡುಗುಡಿಯ ನೇದಿ ಬೆಂಕಿಯ ಮಾಡಲು ॥
ಅಂದವರ ಮಹಿಮೆಗಚ್ಚರಿದಾಳಿ ಕಟ್ಟಿಗೆಯ
ತಂದದರಮೇಲಿಡಿಲ್ ಪೊತ್ತಿ ಯುರಿಯೇಳಲುರಿ
ಯಿಂದ ತಮ್ಮರಿವೆಗಳನಾರಿಸುತೆ ಕಾಸಿದರು ಮೈಯ ಕೈಕಾಲ್ಗಳನ್ನು ॥೪೧॥

ಹಸಿವೆಯಿಂ ಬಸವಳಿದು ಬೆಂಡಾಗಿ ಬಾಯಾರಿ
ಕಸವಿಸಿಯಕೊಂಬ ವೈರಾಗಿಗಳನಿರುಳಿಸು
ತ್ತಸಮಾಕ್ಷನವತಾರಿ ಮಡಿವಾಳಶಿವಯೋಗಿ ವೈರಾಗಿಗಳೊಳೋರ್ವನಂ ॥
ಒಸೆದು ಕರೆದೆಲವೊ ಮುಂದೆಸೆಯೊಳಿಹ ಕಲ್ಗುಂಡ
ನಸವಸದೊಳಿತ್ತ ತಹುದೆನೆ ತರಲ್ಕೈಳಿಗೈದು
ವಸುಧೆಯೊಳು ಹೂಳಿರೆನೆ ಕೇಳಿ ಬೈರಾಗಿಗಳು ಹೂಳಿದರು ಕಲ್ಗುಂಡವ ॥೪೨॥

ಅದರಮೇಲುರಿ ಪೊತ್ತಿಸಲ್ಕೊಳಗೆ ಕಲ್ಲದುವೆ
ಮೃದುವಾಗಿ ಕಂದ ಮೂಲಾದಿಯಂತೊಳಗೆ ಬೆಂ
ದ-ದು ಸಿದ್ಧವಾಗುತಿರಲದನರಿದು ಬೈರಾಗಿಜನರಿದರಿದರಿದೆಂದರು ॥
ಸದಮಲನ ಮಡಿವಾಳಗುರುವಿನ ಮಹತ್ವವನು
ಪದುಳದಿಂ ಕೊಂಡಾಡಿ ಎಲ್ಲರಾಪಾಕವನು
ಮುದಗೂಡಿಯುಂಡುಂಡು ತೇಗಿದರು ತತ್ಪದಕೆ ಬಾಗಿದರು ಬಿಡದೆಲ್ಲರು ॥೪೩॥

ಶಿವದಾಸ ರಾಮದಾಸರು ಮಹಾಸಿದ್ಧರುಂ
ಶಿವಯೋಗಿಮಡಿವಳರ ಯೋಗಸಿದ್ಧಿಯ ಕಂಡು
ತವೆ ಬೆರಗುವಟ್ಟವರ ಪಾದಕ್ಕೆ ತಲೆಬಾಗಿ ನುತಿಸಿದರದೆಂತೆಂದೆನೆ ॥
ಭುವನದೊಳು ಕಲ್ಗುಂಡನಾರು ಪಕ್ವಾನ್ನಮಂ
ಸವೆದರೊಳರೇ ಮತ್ತಮುಂಡುಂಡು ತಣಿವ ಕೊಂ
ಬುವರೊಳರೆ ಭಾವಿಸಲು ಮಡಿವಾಳಶಿವಯೋಗಿವರನೆ ನೀನೇ ಮಹಿಮನು ॥೪೪॥

ಎಂದು ಪಲವಂದದಿಂ ತುತಿಸಲವರೆಲ್ಲರೊಡ
ನಂದು ಶಿವಯೋಗಿ ತಾನಾ ಶಿಲಾನದಿಗೆ ಮುದ
ದೀದ ಬಂದದರ ವಿಸ್ತಾರಮಂ ಮಹಿಮೆಯಂ ಕಾಣುತಚ್ಚರಿಗೊಂಡನು ॥
ಅಂದಗೆಡಿಸುವ ಶಿಲಾನದಿಯುದಕದೊಳು ಲೀಲೆ
ಯಿಂದ ಕೈಕಿರಿಬೆರಲನೂರೆ ಶಿಲೆಯಾಗಲದ
ರಿಂದದನ್ನೆಲ್ಲರಿಗೆ ತೋರಿಸುವಕತದಿಂದ ಕಾಪಿಟ್ಟನದನಾತನು ॥೪೫॥

ಅಲ್ಲಿಂದ ಕಾಶ್ಮೀರದೇಶಮಂ ಪೊಕ್ಕು ತಾ
ನಲ್ಲಿರ್ಪ ರಾಜನಿಂ ಮನ್ನಣೆಯನಾಂತು ಗುರು
ವಲ್ಲಿರ್ದಖಂಡ ಪಂಡಿತರ ಮಂಡಲವನೆಲ್ಲವನು ತಾಂ ಜಯಿಸಿ ಮುಂದೆ ॥
ಮೆಲ್ಲ ಮೆಲ್ಲನೆ ಬಡೋದೆಗೆ ಪೋಗಿ ರಾಜನಿಂ
ಸಲ್ಲುವಾ ಮರ್ಯಾದೆಯಂ ಪಡೆದು ಗುರುವರನು
ಮಲ್ಲಿಂದ ಪೊರಮಟ್ಟು ಪುಣೆಗೆ ಬರುತಿರಲದಂ ಕೇಳಿ ಬಾಜೀರಾಯನು ॥೪೬॥

ಇದಿರ್ಗೊಂಡು ಕರೆತಂದು ಸಿಂಹಪೀಠದೊಳಿರಿಸಿ
ಪದಪದ್ಮಕಭಿನಮಿಸಿ ಯಡಿದೊಳೆದು ಸತ್ಕರಿಸಿ
ಪದುಳದಿಂದುಪಚರಿಸೆ ಗುರುವರನು ಕೆಲವುದಿನಮಲ್ಲಿರ್ದನಾ ಮಹಿಮನು ॥
ಸದಮಲರ ಗುರುವರರ ಮಹಿಮೆಗುರೆ ಬೆರಗಾಗಿ
ಚದುರ ಬಾಜೀರಾಯನವರ್ಗೆ ಸೇವೆಯ ಸಮೆದು
ಪಗೆದೀಯಲವರಲ್ಲಿ ವಾಸಗೈದಿರ್ದು ಶಿವಯೋಗದೊಳಗಿರುತಿರ್ದರು ॥೪೭॥

ಮತ್ತಮಲ್ಲಿಂ ಪೊರಟು ಹೈದರಾಬಾದಕ್ಕೆ
ತತ್ತಪಸ್ವಿಯು ಬಂದು ವಿಜನವಹ ತಾಣದೊಳಿ
ರುತ್ತಿರ್ದೊಡಂ ಜನರ ಸಂದಣಿಯು ಪಿರಿದಾಗಲೊಂದುದಿನಮಾ ಯೋಗಿಯು ॥
ಒತ್ತಿನೊಳಗಿರ್ದ ಗುಡಗುಡಿಯ ಕೈಯಿಂದ ಪಿಡಿ
ದೆತ್ತಿ ತಾನದರ ಮೇಲ್ಬರಳೆರಡನಾಗಳಿ
ಟ್ಟೊತ್ತಿ ಸೇದಲು ಹರಳು ಬೆಂಕಿಯಾದುದು ಕಂಡು ಬೆರಗುವಟ್ಟರು ಜನಗಳು ॥೪೮॥

ಆ ಸುದ್ದಿಯದು ನಿಜಾಮನ ಕಿವಿಗೆ ಬೀಳಲವ
ನಾ ಸಮಯದೊಳಗವನ ಕಾಣವೇಳ್ಕೆಂದು ಮನ
ದಾಸೆ ವಿಡಿದೈತಂದು ಸಡಗರದಿ ಕರೆತಂದು ಶುಭಗೃಹದೊಳಿರಿಸಿದನವಂ ॥
ಆ ಸಚ್ಚರಿತ್ರನಂ ಶುಭರುಚಿರಗಾತ್ರನಂ
ಭೂಸದಾಶಿವನ ನೃಪನುಪಚರಿಸುತಿರೆ ಮಹಾ
ದಾಸಭಾವದೊಳೊಂದು ದಿನಮಾತ್ಮಮಾನಸದಿ ಯೋಚಿಸಿದನಿಂತೆಂತೆನೆ ॥೪೯॥

ಮಿಗೆ ಯಾ ಮಹಾತ್ಮರ ಮಹತ್ವಮಂ ಕಾಣಲ್ಕೆ
ಆ ಮಹೀಪತಿ ಹೇಮಮಯ ಪಾತ್ರದೊಳಗಂದು
ಗೋ ಮಾಂಸವನು ತುಂಬಿ ಬೇರೊಂದು ಪಾತ್ರದೊಳು ವಿವಿಧಫಲಗಳ ತುಂಬಿಸಿ ॥
ಪ್ರೇಮದಿಂದಧಿಕಾರಿಗಳ ಕೈಯೊಳಿತ್ತು ತಾಂ
ಶ್ರೀ ಮಹಾಂತರ ಪಾದಕರ್ಪಿಸುವದೆಂದುಸುರಿ
ಸಾಮದಿಂ ಕಳುಹಲವರೈತಂದು ಗುರುಗಳಡಿಗಳಿಗೆರಗಿ ಮುಂದಿಟ್ಟರು ॥೫೦॥

ಮಿಗೆ ಬಿಳಿಯ ಬಟ್ಟೆಯಿಂ ಬಾಸಣಿಸಿದಾ ಪಾತ್ರೆ
ಯುಗವನೀಕ್ಷಿಸುತಾಗ ಸರ್ವಜ್ಞ ಮೂರ್ತಿತಾ
ನುಗುವ ನಗೆಯಿಂದ ಮೇಲಣ ಹೊದಕೆಯಂ ತೆಗೆಯೆ ಕೆಂಪು ಪೂವಾಯ್ತು ಮಾಂಸಂ ॥
ಜಗದ ಗುರುವಿನ ಮಹತ್ವವ ನೋಡಿ ಸರ್ವರುಂ
ಬಗೆಯೊಳಚ್ಚರಿಪಾಳಿ ತಮ್ಮೊಡೆಯನಿಗೆ ಪೇಳೆ
ಜಗತಿಯೊಡೆಯನು ಕೇಳಿ ಬೆರಗಾಗಿ ತಲೆವಾಗಿ ತುತಿಸಿದನು ಭಕುತಿಯಿಂದ ॥೫೧॥

ಇವರ ಗುರುವರರ ಸನ್ಮಹಿಮೆಯಂ ಕಂಡು ಭೂ
ಧವನು ಮೇಣಿವರ ವಿದ್ವತ್ತೆಯಂ ಕಾಣಲ್ಕೆ
ವಿವಿಧಭಾಷಾಭಿಜ್ಞರೆಲ್ಲರಂ ಬರಮಾಡಿ ಸಭೆಯೊಂದನೆಸಗುತಿರಲು ॥
ದಿವಿಜ ಭಾಷಾದ್ಯಖಿಲ ಭಾಷೆಯೊಳು ಗುರುವರರು
ತವೆ ಸರ್ವಪಂಡಿತರ ಬಾಯೇಳದಂತೆ ಪ್ರೋಲು
ಜವದಿ ಗೆಲ್ಲಲ್ಕರಸನಾಕ್ಷಣದಿ ಪೊಡಮಟ್ಟು ಪಾದಪೂಜೆಯ ಮಾಳ್ದನು ॥೫೨॥

ಗುರುದೇವ ನಿಮಗೊಂದು ಮಠವನಿರ್ಮಿಸುವೆನಾ
ಪರಮದಯದಿಂ ವಾಸಗೈದು ನೀನೆನ್ನನು
ದ್ಧರಿಸೆಂದು ಬಿನ್ನೈಸೆ ಶಿವಯೋಗಿಗಣರಾಯನಿಂತೊರೆದನವಗಿಂತೆನೆ ॥
ವಿರತನಿಗೆ ನಿರುತವೊಂದೆಡೆಯಲ್ಲಿ ವಾಸಿಪುದ
ವಿರಸವಲ್ಲವೆ ಕೇಳು ಪಟ್ಟಣಕ್ಕೈದಿರುಳು
ಮಿರುಳೊಂದು ಹಳ್ಳಿಗೆಂದೊರೆವುದೈ ಶಾಸ್ತ್ರವದು ಪೇಳ್ಗು ಮಾನಿರಲಾರೆನು ॥೫೩॥

ಎನಲದಂ ಕೇಳಿ ಭೂಪತಿ ನಿಜಾಮನು ತಾನು
ಘನಮಹಿಮರಪ್ಪ ಮಡಿವಾಳ ಗುರುತಿಲಕನಿಗೆ
ಮನವೊಲ್ದು ಕಪನಿಟೊಪ್ಪಿಗೆಯಾವುಗೆಯನೆಲ್ಲ ಕೈಕೊಂಡು ಸಲಹೆಂದನು ॥
ಚಿನುಮಯನು ಸ್ವೀಕರಿಸಿ ರಾಜನಿಗುಮೆಲ್ಲ ಪರಿ
ಜನರಿಗುಂ ಪರಕೆಯುಂ ತಾನಿತ್ತು ಪೊರಟು ಮುಂ
ದಣುರುಮಕ್ಕಾಯಾತ್ರೆಗೈದುವೇಳ್ಕೆಂದು ಪಂಜಾಬಕ್ಕೆ ಬಂದನವನು ।೫೫॥

ಅಲ್ಲಿರ್ಪ ಜಮುನಶಹವಲ್ಲಿ ಸತ್ಪುರುಷನೊಡ
ನಲ್ಲಿಂದ ಕಾಬೂಲ ಗಿರ್ಝನಿ ಮೊದಲಾದೂರ
ನೆಲ್ಲಮಂ ನೋಡುತ್ತೆ ಬರುತಮರಬಸ್ತಾನದೊಳಗೆ ಮಕ್ಕಾನಗರದ ॥
ಸಲ್ಲಲಿತ ರಮಣೀಯಕವನೀಕ್ಷಿಸುತೆ ಮ
ತ್ತಲ್ಲಿ ಮಕ್ಕಾಗಿರಿಯನೇರಿಯೊಳಪೊಕ್ಕು ನಿಲ
ಲಲ್ಲಿ ಬಹುಮುನಿಜನರು ತಪವಮಾಳ್ಪುದಂ ಕಂಡು ಬೆರಗಾದನಾ ಯೋಗಿಯು ।೫೬॥

ಆ ಮುನಿಗಳೆಲ್ಲರವರೀ ಮಹಾಯತಿಯ ಮುಖ
ಧಾಮವನು ಕಾಣುತೆ ಪ್ರಣಾಮವನು ಗೈಯಲಭಿ
ರಾಮಚರಿತನು ಗುರೂತ್ತಮನುಮವರೆಲ್ಲರಂ ಪ್ರೇಮದಿಂದುಪಚರಿಸಿದಂ ॥
ಆ ಮನೋಹರಮಾದುದಗ್ರ ಮಕ್ಕಾಗಿರಿಯ
ಭೀಮಶಿಖರದ ಮೇಲೆ ಕೆಲದಿವಸಮಿರ್ದು ಶಿವ
ನಾಮಜಪನಿಯಮದೊಳಗವಿರತಂ ತೊಡಗಿರ್ದನನುಪಮನು ಶಿವಯೋಗಿಯು ।೫೭॥

ಆರುಮೇರದ ಮಹಾಘೋರ ಮಕ್ಕಾಗಿರಿಯ
ನೇರಿ ಶಿಖರವ ಪೊಕ್ಕುದಾರ ಶಿವಮಂತ್ರಜಪ
ಸಾರ ಕರ್ಮದೊಳಿರ್ಪ ಧೀರ ಮಡಿವಾಳಗುರುಮಹಿಮೆಯಂ ಪೊಗಳಲಳವೇ ॥
ಧಾರುಣಿಯ ತಲದೊಳಗಪಾರ ಶಿವಯೋಗ ಗಂ
ಭೀರವಹ ಸಿದ್ಧಿ ಕೈಸೇರಿದ ಮಹಾಮಹಿಮ
ನಾರು ಕೈವಾರಿಸಲು ಶೂರರೊಳರೇನು ಬಿಡು ಮಾರಹರನೇ ಬಲ್ಲನು ।೫೮॥

ಮಕ್ಕೆಯಂ ಬಿಟ್ಟು ಕಾಶೇಪಾಡವೆಂಬ ನಗ
ರಕ್ಕೆ ಬರೆ ಸಿದ್ಧಮಲ್ಲಾರ್ಯರೆಂಬುವರ ಜ್ಞಾ
ನಕ್ಕೆ ನಿಧಿಯಾದ ಶಿವಯೋಗಿವರ್ಯರ ಮಹಾತ್ಮರ ದರ್ಶನವದಾಗಲು ॥
ತಕ್ಕರಾದೀರ್ವರಿಗೆ ಮಿಕ್ಕನೇಹವು ಕೂಡ
ಲಕ್ಷರತೆಯಿಂದಿರಲು ಮಿಕ್ಕಮಾತೇನಾತ
ನಕ್ಕ್ಯವನುಭವವು ಮಡಿವಾಳಗುರುವಿಂಗೆ ಬೆರಳ್ಗಚುವಂತೆಸಗಿತಮಮಾ ॥೫೯॥

ಪಾಲು ಪಾಲ್ ಬೆಲ್ಲ ಬೆಲ್ ಸಕ್ಕರೆಯು ಸಕ್ಕರೆಯು
ಮೇಲೆನಿಸಿದಾತುಪ್ಪ ತುಪ್ಪವುಂ ಮಧು ಮಧುವು
ಮೇಳುಗೊಂಡಂತೀರ್ವರಿವರ ಸಮ್ಮೇಲನವು ಸಖ್ಯದಿಂದೊಡಗೂಡಿತು ॥
ಆಲೋಚಿಸಿದೊಡೀರ್ವರಿವರೆಂದುಃವೊಂದು ಕ್ಷಣ
ಕಾಲವಗಲದೆ ಸದಾ ಬೆರಿಸಿಕೊಂಡಿಹರೆನಲ್
ಮೇಲಾದ ಸಜ್ಜನರ ಪ್ರೇಮವದು ಜಗದೊಳಗೆ ಕೀಳಾಗದೆಂದೆಂದಿಗೂ ॥೬೦॥

ಆ ಸಿದ್ಧಮಲ್ಲಾರ್ಯರೊಡಗೂಡಿ ಶಿವಯೋಗಿ
ಯು ಸುಪ್ರಸಿದ್ಧ ಮಡಿವಳ ಗುರೂತ್ತಮನಿವರ
ವಾಸವಾಗಿರ್ದ ಬಾಣಾವರಕ್ಕೈತಂದು ಕೆಲದಿವಸಮಲ್ಲಿರ್ದನು ॥
ಆ ಸಮಯದೊಳು ಮರುಳಸಿದ್ಧನೆಂಬುವಯೋಗಿ
ಭಾಸುರ ಮಹಾಮಹಿಮೆಯಾಂತು ಶೋಭಿಸಲಲ್ಲಿ
ಸಾಸಿರವು ಜನರವರ ದರುಶನಕ್ಕೈದುತಿರಲದ ಕೇಳಿ ಮಡಿವಳಗುರು ॥ ॥೬೧॥

ತಾನುಮಾ ಸಿದ್ಧಮಲ್ಲಾರ್ಯನೊಡವೆರೆದು ಸು
ಮ್ಮಾನದಿಂದವರ ದರ್ಶನಕೆ ಪೊರಡುತಿರ
ಲೇನೊರೆವೆನೊಂದೂರೊಳೋರ್ವ ಮುದುಕೆಯು ಮನೆಯೊಳಿಳಿಯೆ ಬಳಿಕಾ ಮುದುಕೆಯು ॥
ಏನಣುಗನೀನದೆಲ್ಲಿಗೆ ಪೋಪೆ ಪೇಳೆನಲ್
ಸ್ವಾನುಭವಿ ಮರುಳಸಿದ್ಧರ ದರುಶನಕೆ ಪೋಪೆ
ನಾನೆನಲ್ಕಾಕೆ ಸಾಸಿರಮಂದಿ ನೆರೆದಿಪ್ಪುದವರ್ಗಿಲ್ಲ ನಿನಗಪ್ಪುದೇ ॥೬೨॥

ತಾಯೆ ನಿನ್ನಯ ದಯವದೊಂದಿರ್ದೊಡದು ಸಾಕು
ಸಾಯಸವಗೈದು ಸಾವಿರಮಂದಿಯೊಳನುಗ್ಗಿ
ಬಾಯಮಾತೇಕೆ ದರುಶನವ ಕೊಡ್ಯೆದುವೆನು ಸುಳ್ಳಲ್ಲ ನೋಡು ಜನನಿ ॥
ಈಯು ಪರಕೆಯು ನನಗೆ ನೀನೀಗಳೆಂದುಸುರಿ
ಕಾಯಜಾರಿಯರೂಪವಾಂತ ಮಡಿವಾಳಗುರು
ರಾಯನಾ ಸಿದ್ಧಮಲ್ಲಾರ್ಯರುಂ ಪೊರಗುಮಿರೆ ಬೆಂಗಡೆಯೊಳೈತಂದನು ॥೬೩॥

ಎಲ್ಲಿಹರು ಶ್ರೀ ಮರುಳಸಿದ್ಧಸ್ವಾಮಿಗಳಲ್ಲಿ
ಗೆಲ್ಲರಿಗೆ ಬೆಂಬಿಡದೆ ಮಡಿವಾಳಶಿವಯೋಗಿ
ಬಲ್ಲಿದನು ಕಡುಗವಂ ಪಿಡಿದಾರ್ದುಬರೆ ಜನರ ಜಂಗುಳಿಯು ನೋಡಿ ಬೆದರಿ ॥
ನಿಲ್ಲದೆತ್ತಲುಮೋಡೆ ಗುರುವೋರ್ವನುಳಿಯೆ ಕಂ
ಡುಲ್ಲಾಸದಿಂದವರ ದರ್ಶನವ ಕೊಳಲಾಗ
ಮೆಲ್ಲೆದೆಯ ಮರುಳಸಿದ್ಧನು ನೋಡಿಯವರನ್ನು ಬದಿಯಲ್ಲಿ ಕುಳ್ಳಿರಿಸುತೆ ॥೬೪॥

ಕುಶಲಾನುಯೋಗಮಂ ಗೈವುತಿರಲದನರಿದು
ಕುಶಲಮತಿ ಜನರಿವರ ಪುಣ್ಯಮೆಂತುಟೊ ಅವರ
ಕುಶಲ ಕರದರ್ಶನವೆ ದುರ್ಲಭವದಿವರೊಡನೆ ಪ್ರಾಸಂಗಿಕೋಕ್ತಿಯೆತ್ತ ॥
ಶ್ರೀ ಶಂಭುರೂಪರನ್ನೀರ್ವರಂ ಬಣ್ಣಿಸ
ಲ್ಕಾಶೆಯಿಲ್ಲದ ಮಹಾದೇಶಿಕರು ಮಡಿವಳರು
ಪಾಶಹರ ಸಿದ್ಧಮಲ್ಲಾರ್ಯರೆಂಬುವ ಮಹಾತ್ಮರಿಗೊರೆದನಂತೆಂದೊಡೆ ॥೬೫॥

ಗುರುಸಿದ್ಧಮಲ್ಲಾರ್ಯರೇ ಕೇಳಿಮೆನ್ನ ಬಳಿ
ಇರುವ ಹಣವೆಲ್ಲವದು ತೀರಿದುದು ನಿಮ್ಮ ಬಳಿ
ಇರುತಿರ್ಪ ಹಣವನ್ನು ಕೊಡಿರೆನಲ್ಕವರಾಗಳೈನೂರು ರೂಪಾಯಿಯ ॥
ಇರದೀಯಲರ್ಥವಹ ಹಣದಿಂದ ಗಣಸಮು
ತ್ಕರವ ತಣಿಗೈವನಾಥರಿಗೆ ದೀನರಿಗಿತ್ತು
ಮೆರೆವ ಮಥುರಾನಗರಿಗೋರ್ವನೇ ಪೋಪವೇಳ್ಕೆಂದು ಯೋಚಿಸಿ ಪೊರಟನು॥೬೬॥

ಚತುರ ಮಡಿವಳಗುರುವು ಮಥುರೆಗೈತರಲುಮ
ಲ್ಲಿತರ ಸಂತರುಮಿವರದರುಶನಂಗೊಂಡು ಮೇಣ್
ಪ್ರತಿಯಿರದ ಮಡಿವಳರ ಬ್ರಹ್ಮಚರ್ಯವ ಕಂಡು ಪದಕೆರಗಿ ನುತಿಗೈದರು ॥
ಸತತಮಿಂತವರಿರಲ್ಕವರೊಳಗೆ ಕೆಲರು ದೂ
ಷಿತಮಪ್ಪ ಗಾಂಜಿಯುಂ ಸೇದುತಿರ್ಪುದನರಿದು
ವಿತತ ಮಹಿಮರು ಬುದ್ಧಿವಾದಮಂ ಹಲವರಿಗೆ ಮುದದಿಂದ ಪೇಳ್ದರಿಂತು ॥೬೭॥

ಬಾಯಿಲವು ಪಂದಿ ನರಿಕುರಿಯಾಡು ಮುಟ್ಟದಕು-
ಪಾಯವಹ ಗಾಂಜಿಯುಂ ಸೇದುವದು ಸಾಮಾನ್ಯ
ಕಾಯಮಂತರಿಗೆಲ್ಲರಿಗೆ ನಿಷೇಧವದಾಗೆ ನಿಮಗೆಂತು ಯೋಗ್ಯವಹುದು ॥
ತೋಯಜಾಸ್ತ್ರಾರಿಯ ಪ್ರಸಾದವನ್ನುಂಬುವೀ
ಬಾಯಿಗತಿ ಹೇಯವಹ ಗಾಂಜಿಯನು ಸೇದುವದ-
ಪೇಯಪಾನವುಮೆರಡು ಬಗೆವುತಿರಲನವರತಮತಿನಿಂದ್ಯವತಿನಿಂದ್ಯವು ॥೬೮॥

ಮಾಕಳಂಜಂ ಭಕ್ಷಯೇದಿತಿ ಶ್ರುತ್ಯುಕ್ತಿ
ಬೇರಿಲ್ಲವಾದಪಶ್ರುತಿಯ ಪೊಂದುವರೇಕೆ
ಸಾಕದೇತಕೆನಿಮ್ಮ ದುರ್ನೀತಿಯೊಳಗಾದ ಸನ್ಯಾಸಿಯಾಶ್ರಮವಿದು ॥
ಕಾಕುಮಾನವರಾಗಿ ವಿಧಿನಿಷೇಧವನುಳಿದು
ಶೋಕಕಾಸ್ಪದಮಾದ ನಿರಯಕ್ಕೆ ಪೋಗದಿರಿ
ನಾಕ ವಂದ್ಯ ಪಿನಾಕಿನಾಮಮಂ ನೆನೆನೆನೆದು ಸದ್ಗತಿಯ ನೆರೆ ಪಡೆಯಿರೈ ॥೬೯॥

ಕೆಟ್ಟಚಟವೆಲ್ಲರಿಗೆ ಹುಟ್ಟುಗುಣವಿರ್ಪುದದ
ನಟ್ಟುವಡೆ ತಿಳುವಳಿಕೆ ಮನಮುಟ್ಟಬೇಕದುವೆ
ಕೆಟ್ಟಚಟ ಬರ್ಪುದಕೆ ಶಿಕ್ಷಣವು ಬೇಕಿಲ್ಲವಟ್ಟುವಡೆಬೇಕು ಶಿಕ್ಷೆ ॥
ಹೊಟ್ಟುತೂರಿದಡೇನು ಕಾಳುಸಿಗುವದೆ ಜಗದೊ
ಳೊಟ್ಟುಮಾತೇನೀಗ ಭ್ರಷ್ಟರಾಗದೆ ನೀವು
ನೆಟ್ಟನೇ ಕೆಟ್ಟಚಟಬಿಟ್ಟು ಮಾನುಷ್ಯಮಂ ಶ್ರೇಷ್ಠಮೆನಿಸಿರಿ ಲೋಕದಿ ॥೭೦॥

ಮಾದಕವದಾದ ಗಾಂಜಿಯು ಸೇದುವುದರಿಂದ
ನಾದವದು ಕುಗ್ಗುತಿಹುದೆದೆಯೊಣಗುವದು ಕಫವ
ದಾದರುರೆ ಘಟ್ಟಿಯುಪ್ಪುದು ಶರೀರವು ಶುಷ್ಕವಾದಪ್ಪುದಂತಲ್ಲದೇ ॥
ಶೋಧಿಸಲು ನೆತ್ತರೊಡನೊಳಗೊಳಗೆ ಸುಡುತಿಹುದು
ವೇದವಿದರವರು ಮೇಣವರು ಪಾಮರರೆಂಬ
ಭೇದವರಿಯುದವೋಲು ಸ್ಮೃತಿದಪ್ಪುದೆಂದೊಡಾ ಗಾಂಜಿಯಂ ಸೇದಬಹುದೇ ॥೭೦॥

ನುತಿವೆತ್ತ ನರಜನ್ಮವಿತ್ತ ಪರಮಾತ್ಮನುಪ
ಕೃತಿಯನಡಿಗಡಿಗೆ ನೀವ್ ಸ್ಮರಿಸಿ ತನ್ನಾಮವಂ
ಸತತಮುಚ್ಚರಿಸಿ ದುರ್ಭವವ ಪರಿಹರಿಸಿ ಗಡ ಪೊಂದುವುದು ಮೋಕ್ಷಸುಖವ ॥
ಸ್ವತನುವಲ್ಲಿಗೆ ಸದಾಚರಣವೆಲೆ ವಿರತಿ ಪೂ
ವತಿ ಭಕ್ತಿ ಕಾಯುರಿವು ಪಾಣಂತುಟಾದೊಡಿದು
ಕ್ಷಿತಿಯೊಳಗೆ ಸಫಲವಹುದಲ್ಲದೊಡೆ ವಿಫಲವೆಂದೆಲ್ಲರಿಂತರಿವುದೈಸೆ ॥೭೨॥

ಎಂದು ಬಲ್ಲಂದದಿಂದುಪದೇಶಿಸಲು ಸಂತ-
ರಂದು ಗುರುಮಡಿವಾಳರಡಿದಾವರೆಗೆ ಮಣಿದು
ತಂದೆ ಕೇಳಿಂದು ಮೊದಲಿನ್ನುಮುಂದೆಂದೆಂದು ಸೇದೆವೈ ಗಾಂಜಿಯನ್ನು ॥
ಇಂದು ನಿಮ್ಮಡಿಯಾಣೆಯೆಂದು ಪಂಥವ ಗೈದು
ಕುಂದದಾನಂದದಿಂ ಸಂತರಾ ಪರಶಿವನ
ಮುಂದಸಂಕೀರ್ತನದೊಳಿರಲಿತ್ತ ಗುರುರಾಯನೇಗೈದೊಡೆಂದೊಡುಸುರ್ವೆ ॥೭೩॥

ಮಡಿವಾಳಗುರುವರರು ಸಿದ್ಧಮಲ್ಲಾರ್ಯರಿ
ಪ್ಪೆಡೆಗಾಣಲಿಚ್ಛೆಯಿಂ ಬಾಣಾವರಕೆ ಪೋಗಿ
ಸಡಗರದೊಳೀರ್ವರುಂ ಶಿವಯೋಗದೊಳಗಿರ್ದು ಚಿಲ್ಲಿಂಗದಾನಂದದಿ ॥
ಎಡೆವಿಡದೆ ಮುಳುಗಿರ್ದು ಚಿತ್ರವುಳ್ಳವರಾಗಿ
ಕಡುನೇಹದಿಂದೊಂದು ದಿನವಿರ್ವರುಂ ಕೂಡಿ
ಬಿಡದೆ ಶ್ರೀಶೈಲಕ್ಕೆ ಪೋಪುವೇಳ್ಕೆಂದು ನಡೆಗೊಂಡರಂವಲ್ಲಿಗೆ ॥೭೪॥

ಹಾದಿಯೊಳು ಜಾವಾಲಿನರಸಿಂಹ ಮೂರುತಿಯು
ದಾದ ದೇಗುಲದೊಳಿಳಿದು ಲಸದಷ್ಟಪೂಜೆಯಿಂ
ದಾ ದೇವರಂ ಯಜಿಸಿ ತಾವೀರ್ವರಿರ್ಪಿನಂ ತದ್ದೇವಮಂದಿರದೊಳು ॥
ವೇದವೇದಾಂತಾದಿ ಶಾಸ್ತ್ರಪ್ರವೀಣನುಂ
ವಾದಿಜನಗಜಸಿಂಹನೆಂಬ ಬಿರುದಾಂಕಿತನು-
ಮಾದ ರಂಗಾಚಾರ್ಯನೆಂಬ ಪಂಡಿತನೋರ್ವನಿವರೀರ್ವರಂ ನಿರುಕಿಸಿ ॥೭೫॥

ನೀವಾರು ಪೇಳಿ ಮೇಣೇನೋದಿರ್ಪಿರೆನೆ ಕೇಳಿ
ಕೋವಿದಾಗ್ರಣಿಯು ಗುರುಮಡಿವಾಳಯೋಗಿ ತಾ
ನಾ ವೇದ ವೇದಾಂತ ವೈಶೇಷಿಕನ್ಯಾಯಮಾದಿಯಹ ಶಾಸ್ತ್ರದೊಳಗೆ ॥
ಸಾವಧಾನದೊಳಾಗಳನುಯೋಗವಂ ಮಾಡ
ಲಾ ವಿಬುಧಮಣಿಯೆಂದು ಮೆರೆದ ರಂಗಾಚಾರ್ಯ
ನೋವಿ ಪ್ರತ್ಯುತ್ತರಂಗುಡಲಶಕ್ಯತೆಯಿಂದ ಮೂಕಭಾವಂ ದಳೆದನು ॥೭೬॥

ಆ ಚತುರ ಮಡಿವಳರು ತಲೆವಾಗಿ ನಿಂದ ರಂ
ಗಾಚಾರ್ಯನಧಿಕವಿದ್ಯಾಮದವ ತವಿಸಿ ತಾ
ನಾಚಾರ ವಿನಿಯಮಂ ಕಲಿಸಿ ಬಳಿಕಾ ಸಿದ್ಧಮಲ್ಲಾರ್ಯಯೋಗಿಯೊಡನೆ ॥
ಆ ಚಿತ್ರತರಮಪ್ಪ ಶ್ರೀಗಿರಿಗೆ ಪೋಗಿ ಮೇಣ್
ಪ್ರಾಚೀನ ಮಲ್ಲಿಕಾರ್ಜುನಲಿಂಗಮೂರ್ತಿಯಂ
ಗೋಚರಿಸಿ ತಲ್ಲಿಂಗಕಷ್ಟವಿಧ ಪೂಜೆಯನ್ನೆಸಗಿ ತುತಿಸಿದನೆಂತೆನೆ ॥೭೭॥

ಆಖಂಡಲಾದಿ ಸುರಮಂಡಲಾರ್ಚಿತಪದನೆ
ಶ್ರೀಖಂಡಡಿಂಡೀರಪಿಂಡಧವಳಾವಯವ
ಗೌಖಂಡಮಂಡಿತಜಟಾಂಕಿತನೆ ಬ್ರಹ್ಮಾಂಡಪಿಂಡಾಂಡಖಂಡಮಯನೆ ॥
ಪಾಖಂಡಿಗಜಖಂಡನಪರಶುಧರನೆ ಬಹ
ಭೂಖಂಡ ಪಿಂಡ ಭರಿತೋದರನೆ ಶಂಕರನೆ
ನಾ ಕಂಡೆನಯ್ಯ ನಿನ್ನನು ಮಲ್ಲಿಕಾರ್ಜುನನೆ ಭ್ರಮರಾಂಬಿಕಾರಮಣನೇ ॥೭೮॥

ಎಂದಿಂತು ಮಲ್ಲಿಕಾರ್ಜುನನ ಕೊಂಡಾಡಿ ಬಲ
ವಂದು ಬಲ್ಲಂದದಿಂ ಭ್ರಮರಾಂಬಿಕೆಯು ನುತಿಸಿ
ಚೆಂದವಹ ಶ್ರೀಶೈಲಭಾಗದಂದವ ಕಾಣಲೆತ್ತಲುಂ ಸುಳಿದರವರು ॥
ಎಂದುಮಾರುಂ ಪುಗದ ಕಮರಿಮಠಕೈದುವೇ
ಳ್ಕೆಂದು ಯೋಚಿಸಿ ಮುಂದೆ ನಡೆತರಲು ಕ್ರೂರಮೃಗ
ವೃಂದವೈತಂದೊಡವರಂದವಂ ಕಂಡೋರೆಯಾಗಿ ತಾನೇ ಪೋದುದು ॥೭೯॥

ಲೋಕದೊಳು ಶಾಂತಿ ಸಮತಾ ವಿರತಿ ಸದ್ದಯಾ
ಶೋಕ ಸದ್ಭಕ್ತಿ ಸಮ್ಯಜ್ಞಾನ ಸದುಪರತಿ
ಸೌಕರ್ಯಮಿರ್ದುದಕೆ ಕುರುಪಾವುದೆನೆ ಶಾಂತರಂ ನೋಡಿ ಹಿಂಸ್ರಂಗಳು ॥
ಸಾಕಿರ್ದ ಕ್ರೂರತನವನ್ನುಳಿದು ತಮ್ಮೊಳಗೆ
ಬೇಕಾದ ಹಗೆತನವ ಬಿಟ್ಟು ಶಾಂತತೆಯುನ್ನು
ಸ್ವೀಕರಿಸಿ ಚರಿಪುದೇ ಹೆಗ್ಗುರುತದೆಂದೊಡಿವರೀರ್ವರೇಂ ಶಾಂತಾತ್ಮರೋ ॥೮೦॥

ದೂರಮಿವರಂ ಕಂಡು ಕಮರಿಮಠದೊಳಗಿರ್ಪ
ಸಾರಶರಣರ್ಕಳಾ ಮಾರಾರಿಯೇ ದ್ವಿಧಾ
ಕಾರದಾಳುತಮೈಯ್ದಿಯ್ತೈತಂದನೆಂದು ಮುದದಿಂದವರನಿದಿರ್ಗೊಳ್ಳುತೆ ॥
ವಿೂರಿರ್ಪ ಭಕ್ತಿಯಿಂದುಪಚರಿಸಲಿವರೀರ್ವ
ರಾ ರಮ್ಯವಸತಿಯೊಳು ಕೆಲದಿನಂಗಳೆದು ಸೊಂ
ಡೂರ ರಮ್ಯಕ್ಷೇತ್ರಕೈತಂದು ಷಣ್ಮುಖನ ದರ್ಶನಂ ಗೊಂಡರವರು ॥೮೧॥

ಅಲ್ಲಿಂದ ರಾಮೇಶ್ವರಕೆ ಪೊರಟು ನಡುದಾರಿ
ಯಲ್ಲಿ ಕಂಕೊಳ್ಳಿಯೆಂಬೂರಿಂಲ್ಕಲ್ಲಿರುವ
ಮಲ್ಲಿಕಾರ್ಜುನ ಲಿಂಗಮೂರ್ತಿಯಂ ಕಂಡಲ್ಲಿ ವಾಸಗೈದೊಂದು ದಿನವು ॥
ಸಲ್ಲಲಿತ ಸುಪ್ರಸಾದವ ಮೆಲ್ಲುವವಸರದೊ
ಳಲ್ಲಿ ಕೆಲಬಲದಾಣದಲ್ಲೆರಡು ಹುಲಿಗಳವು
ಮೆಲ್ಲನೇ ಬಂದೊರಗುತಿರೆ ಕಂಡು ಗುರುವರರು ಸನಿಪಕ್ಕೆ ಬಂದು ತಾವು ॥೮೨॥

ಬುಲ್ಲವಿಸಿ ಬಾಯೊಳುತ್ತತ್ತಿಯನ್ನಿತ್ತು ಬೆ
ನ್ನಲ್ಲಿ ಕೈಯಿಟ್ಟು ತಮ್ಮಮಂದಿರಾ ಪೋಗಿರೆನ
ಲುಲ್ಲಾಸದಿಂದಡಿಯು ಮೇಲುರುಳಿ ಬಾಲವನ್ನಲಗಿಸುತೆ ಪೋದವೆರಡು ॥
ಬಲ್ಲವರು ಭಾವಿಸಲು ಪಶುಗಳೊಳಗೀ ಭಕ್ತಿ
ಪಲ್ಲವಿಸಿದಲ್ತೆಂದೊಡೀ ಯೋಗಿವುಹಿಮೆಯಂ
ಸೊಲ್ಲಿಸಲು ಬಪ್ಪುದೇನಿಂತುಟೆಂದಂತುಟೆಂದಿದು ಚೋದ್ಯವೈ ಜಗದೊಳು ॥೮೩॥

ಮಡಿವಾಳ ಸಿದ್ಧಮಲ್ಲಾರ್ಯರೀರ್ವರು ಪೊರಡು
ತುಡುಪಿ ಸುಬ್ರಹ್ಮಣ್ಯಕೈತಂದು ಕೆಲದಿನಂ
ಬಿಡದಿರ್ದು ಶೇಷನವಲೋಕಿಸುತ್ತಲ್ಲಿಂದ ಗೋಕರ್ಣಕೈತಂದರು ॥
ಮೃಡನ ಸುಮಹಾಬಲೇಶ್ವರಲಿಂಗಮೂರ್ತಿಯಂ
ಕಡುರಾಗದಿಂದ ಪೂಜಿಸಿ ಭಜಿಸಿ ಕೆಲದಿವಸ
ಮುಡುಗದಾನಂದದಿಂದಿರುತಿರ್ದರೀರ್ವರಾ ಶಿವಯೋಗಿವರ್ಯರವರು ॥೮೪॥

ವಿಪ್ರಪ್ರವರೇಣ್ಯನೆಂಬೆಸೆವ ಜಸದಿಂದ ತಾ
ನದ್ವಿತೀಯನುಮೆನಿಪ ರಾಮಭಟ್ಟನು ಮಹಾ
ಚಿದ್ವಿಲಾಸಾನ್ವಿತರ ಮಡಿವಳರ ಬಳಿಸಾರ್ದನೈ ಶಾಸ್ತ್ರವಾದಕೆಂದು ॥
ಸದ್ವಿರತಶೇಖರರು ಪೂರ್ವಪಕ್ಷವ ವಿಪ
ಶ್ಚಿದ್ವರನಿಗೆಸಗಲವನದರುತ್ತರಂ ಗುಡಲು
ಸದ್ವಿಚಾರವು ತೋರದಿರೆ ನಾಣ್ಚಿ ನಿಜವಾಗಿ ತಲೆವಾಗಿ ಶರಣುಹೋಗಿ ॥೮೫॥

ಗುರುರಾಯ ಚಿತ್ಕಾಯ ಜಿತಮಾಯ ಮುನಿಗೇಯ
ನಿರಪಾಯಗತಹೇಯಸಮುಪಾಯ ಭವದೀಯ
ಕರುಣಾಮೃತವ ಕುಡಿಸಿ ಜಾಡ್ಯರೋಗವ ಬಿಡಿಸಿ ತೊಡಿಸೆನಗೆ ವಿನಯಮಣಿಯ ॥
ಇರದಿಂತು ನುತಿಸಲೀ ವಿರತಮಡಿವಾಳಗುರು
ವರರವನಿಗಭಯವಿತ್ತಾತನಂ ಬೀಳ್ಕೊಟ್ಟು
ನೆರೆ ಸಿದ್ಧಮಲ್ಲಾರ್ಯನೊಡಗೂಡಿ ಬಂದರಾ ಸೊಗಲ ಸುಕ್ಷೇತ್ರಕಾಗ ॥೮೬॥

ದೇಶಿಗನು ನಾಂ ನಿಜದೇಶಿಗರ ಬಂಧುವಾ
ನಾಶೆಯುಳ್ಳವನು ನೀನಾಶೆಗೆಡಿಸುವವಳು ನಾಂ
ಹೇಸಿ ನೀಂ ಪರಿಶುದ್ಧಳದು ಕಾರಣಂ ತಾಯೆಯೆಲೋಸರಿಸದೆಸಗು ಕೃಪೆಯ ॥
ಪಾಶಯುತ ನಾನು ನೀಂ ಭವಪಾಶಗಳೆವವಳು
ನಾಶಜನನಾಮಯಕೆ ಕೋಶನಾಂ ನೀನು ಜನಿ
ನಾಶವಂ ತವಿಪೆ ಜಗದಂಬೆ ನಾಂ ಮರೆಹೊಕ್ಕೆ ಸಲಹೆನ್ನನಳ್ಕರಿಂದೆ ॥೮೭॥

ಶ್ರೀಶಿವಾದ್ವೈತ ಪರವಿದ್ಯಾನವದ್ಯಾಕೃತಿ
ವೈಶದ್ಯವಿದ್ಯೋತಮಾನನ ಮಹಾಲಿಂಗ
ದೇಶಿಕ ಶಿಖರಮಣಿಯ ಪಾಣಿಕಂಜಾತಸಂಜಾತನು ಕವೀಶಚರನು ॥
ಆ ಸದಾಶಿವಕವಿಯು ಭೂಸದಾಶಿವನ ಯೋ
ಗೀಶನ ನಿರಾಶನ ವಿಪಾಶನುರು ಮಡಿವಾಳ
ದೇಶಿಕನ ಸುರುಚಿರ ಪುರಾಣದೊಳಗೊಂಭತ್ತನೆಯ ಸೊಗಲಕ್ಕೆತಂದ ಸಂಧಿ ॥೮೮॥

ಅಂತು ಸಂಧಿ ೯ಕ್ಕಂ ಪದಂಗಳು ೫೧೭. ಮಂಗಳಂ
ಶ್ರೀ ಶ್ರೀ

# ೧೦ನೆಯ ಸಂಧಿ

ಸೂಚನೆ :— ಸೊಗಲದೊಳಗೆಲ್ಲರ್ಗೆ ಮಿಷ್ಟಾರ್ಥಗೊಟ್ಟು ಗುರು
ಜಗವರಿಯೆ ಮುರುಗೋಡಕೈದಿ ದೀಕ್ಷಿತರ ಬಳಿ
ಗೊಗುಮಿಗೆ ವಿನಯದಿ ದರ್ಶನಂಗೊಂಡು ಬಳಿಕೋರ್ವ
ತರ್ಕಶಾಸ್ತ್ರಿಯ ಗೆಲಿದನು ॥

ಸೊಮನಂ ಮಹಿಮಾಭಿರಾಮನಂ ವಿಜಿತ ದು
ಷ್ಕಾಮನಂ ವಿಧಿಶಿರೋಧಾಮನಂ ಕೈಲಾಸ
ಧಾಮನಂ ಕೋಟ್ಯರ್ಕಧಾಮನಂ ಭವಭೀಮನಾಮನಂ ಶಿವನ ಭವನಂ ॥
ಸೋಮನಂ ಧರಿಸಿದನ ಸೀಮನಂ ಮಿತಿರಹಿತ
ನಾಮನಂ ಪರಮನಿಷ್ಕಾಮನಂ ಗಿರಿಸುತಾ
ಪ್ರೇಮನಂ ಸುಜ್ಞಾನಭೂಮನಂ ಸ್ವಾತ್ಮಾತಿರಾಮನಂ ನುತಿಪೆನು ಸದಾ ॥೧॥

ಸೊಗಲದೊಳು ಗುರುವರನು ಮಡಿವಾಳಶಿವಯೋಗಿ
ಮಿಗುವ ಸೊಗದಿಂದ ತಾಂ ಸಿದ್ಧಮಲ್ಲಾರ್ಯನ
ನ್ನಗಲದಲೆ ಮಿಸುಪನುಷ್ಠಾನದೊಳಗೆನಿತು ದಿನಮಿರೆ ಸಿದ್ಧಮಲ್ಲಾರ್ಯನು ॥
ಸೊಲದಿಂ ಬಾಣಾವರಕೆ ಪೋಗಲಿವನಿಲ್ಲಿ
ಮಿಗೆ ತನ್ನನುಷ್ಠಾನದೊಳಗಿರ್ದು ನೆನವಾಗೆ
ಲಗುಬಗೆಯಿನೈದುವನು ಬಾಣಾವರಕೆ ತಾನುಮವನುಮಿಂತೈದುತಿಹನು ॥೨॥

ಇಂತೀರ್ಪರಿವರಲ್ಲಿಗಲ್ಲಿಗುಂ ನಡೆಗೊಳಲ
ನಂತ ಮಹಿಮರ ಯೋಗಿ ಮಡಿವಳರ ಬದಿಯೊಳೋ
ರಂತೆ ವಿದ್ಯೆಯುಂ ಕಲಿಪನಿಷ್ಟೆಯಿಂ ದೊಡವಾಡ ಕುಲಕರ್ಣಿಸಂಗಪ್ಪನು ॥
ಸಂತಸದೊಳೈತಂದು ವಂದಿಸುತೆ ಗುರುವೆ ನಿ
ಮ್ಮಂತಿಕದಿ ಸಂಸ್ಕೃತಾಭ್ಯಾಸವನು ಗೈವೆನೆನ
ಲಂತಾಗಲೆನಲವನು ತಾನುಮಂತೇವಾಸಿಯಾಗಿ ಕಲಿಯುತಿರ್ದನು ॥೩॥

ಹೇಳಲೇಂ ಶಿವಯೋಗಿ ಸೊಗಲದೊಳಗಿರ್ಪುದುದ
ನೂಳಿಗವ ಗೈದಿರ್ಪ ಗಂಗಪನ ಮುಖದಿಂದ
ಕೇಳಿ ಸುತ್ತಣ ಪಳ್ಳಿಯೊಳಗಣಾ ಜನರೆಲ್ಲರೈತಂದು ಸೊಗಲಕಲ್ಲಿ ॥
ಮೇಳೈಸಿ ವಂದಿಸಲು ಶಿವಯೋಗಿಯುವರನ್ನು
ಬೋಳೈಸಿ ಯೇವಂದಿರೆನಲವರು ತಮತಮ್ಮ
ಹೇಳಿಕೆಯನೆಸಗಲವರವರಿಷ್ಟಸಿದ್ಧಿ ಸೂಚನೆಗೆ ಬೂದಿಯ ಕೊಡುವರು ॥೪॥

ಗರಹೊಡದವರು ಮೇಣು ಮಕ್ಕಳಂ ಬೇಳ್ಪವರು
ದರಶೂಲವುಳ್ಳವರು ಗ್ರಹಚಾರಪೀಡಿತರಿ
ವರೆ ಮೊದಲುಗೊಂಡೆಲ್ಲ ಜನರೈದಿ ಮರೆಹೊಕ್ಕಡವರ್ಗೆ ಬೂದಿಯ ಕೊಡುವರು ॥
ನೆರೆಬೂದಿಯಿಂದವರನಿಷ್ಟಕಷ್ಟಗಳೆಲ್ಲ
ಪರಿಹಾರವಾಗಿಷ್ಟ ಸಿದ್ಧಿಯದು ಕೈಗೂಡ
ಲರರೆ ಸುತ್ತಣ ಜನರ ಮೊತ್ತವದು ಮುತ್ತಿದುದು ಬೂದಿಯಾ ಮಹಿಮೆ ಕೇಳಿ ॥೫॥

ಆವ ಸದ್ಗುರು ಜಗವನುದ್ಧರಿಸುತಿಹ ಕೈಯ
ನಾವ ಮನುಜನ ತಲೆಯ ಮೇಲಿಡಲ್ಕವನ ದು
ರ್ಭಾವಮಂ ಭವರೋಗವುಮನಳಿಸಿ ಕೈವಲ್ಯಗೊಡುವನೋ ಆ ಯೋಗಿಯು ॥
ಪಾವನದ ಕೈಯಿಂದ ಕೊಟ್ಟ ಬ[illegible]
ಭಾಪಿಕರ ಜನರ ಕೀಳ್ಬೇನೆಯುಂ ಕಳೆವುದರಿ
ದಾವುದೆಂದೋವಿ ಕೊಂಡಾಡಿದರು ಸುತ್ತಲುಂ ಜನರು ತಮತಮ್ಮರೊಳು ॥೬॥

ಶ್ರೀ ಗುರುಗಳಾ ಸೊಗಲದಲ್ಲಿ ಸಿದ್ಧನಗವಿಯೊ
ಳೀಗಳುಂ ವಸತಿಗೊಂಡಿರಲೊಂದು ವಾಸರದೊ
ಳಾ ಗುರುಗಳವಲೋಕನಾರ್ಥಮಲ್ಲಿಗೆ ಬಸವನೆಂಬವಂ ಬಂದನಂದು ॥
ಆಗಳಾತನು ಗುರುಗಳೊಡನೆ ಮಾತಾಡುತಿರೆ
ಬೈಗೆಯಾಗೆಲ್ಲ ಕಡೆಗಾವರಿಸೆ ಕಳ್ತಲೆಯು
ಸಾಗಿ ತನ್ನೂರಿಂಗೆ ಪೋಗಲಳವಿಲ್ಲದಿರಲಲ್ಲಿಯೇ ವಸತಿಗೈದಾ ॥೭॥

ಗವಿಯ ಮುಂಗಡೆಯೊಳಗೆ ತಾನೊರಗೆ ನಡುವಿರುಳು
ಜವದಿಂದ ಗರ್ಜಿಸುತ್ತೆರಡು ಹುಲಿಗಳು ಬರ
ಲ್ಕವನೆರಡನವನು ಕಂಡನಿತರಿಂದಾಗ ತನ್ನೆದೆಯೊಡೆದು ನೀರಾದುದು ॥
ಶವದಂತೆ ಮಿಸುಕದುಸುರಾಡಿಸದೆ ಮೈಮರೆದು
ಬುವಿಯೊಳಗೆ ಬಸವಪನು ಬಿದ್ದುದರಿದಾ ವಿರತ
ಧವನು ಮಡಿವಳನು ತಾನಗ್ಗದಾ ಬಗ್ಗಗಳಿಗೈದುವೇಳ್ಕೆಸಲ್ಕೈದವು ॥೮॥

ಚಚ್ಚರನೆ ಗುರುಗಳವನೆಚ್ಚರಿಸಲಿಚ್ಛೆಯಿಂ
ಮುಚ್ಚಿದಚ್ಚಿಗೆ ಮೇಣು ನೆತ್ತಿಗುಂ ನೀರನ್ನು
ಹಚ್ಚಿ ಶೀತೋಪಚಾರದಿಂದವನನುಪಚರಿಸಲೆಳ್ಚತ್ತು ಕುಳಿತನವನು ॥
ಹುಚ್ಚಪ್ಪ ಬಸವಪ್ಪ ಕೇಳ್ಮತ್ತೆ ಬಪ್ಪವವು
ಕೆಚ್ಚೆದೆಯನಾಗೆನ್ನ ಪಿಂದೆ ಕುಳಿತಿರು ನೀನು
ಬೆಚ್ಚದಿರು ನಾನಿರ್ಪೆನೆಂದಭಯಗೊಟ್ಟವನಂತೆ ಗೈದೈದಿಸಿದನು ॥೯॥

ಇತ್ತ ಗುರುಶಿವಯೋಗಿಯುರು ಮಹಿಮೆ ಸುತ್ತಲುಂ
ಮುತ್ತಲೊ ಮುರುಗೋಡಪತ್ತಣಂ ಶೆಟ್ಟರುಂ
ಮತ್ತಮೂರವರೆಲ್ಲ ಮುಖ್ಯರುಂ ಕೆಲಗೆರೆಯ ಬಾಪುದೀಕ್ಷಿತರು ಕೂಡಿ ॥
ತತ್ತಪೋನಿಷ್ಠರಿಹ ಸೊಗಲಕ್ಕೆ ಬಂದವರ
ಹತ್ತಿರಕೆ ಕಾಯ್ಕಪ್ಪುರವನಿಟ್ಟು ಕುಂಬಿಟ್ಟು
ಚಿತ್ತೈಸು ಗುರುರಾಯ ಮುರುಗೋಡ ಗ್ರಾಮಕ್ಕೆ ತಾವು ಬಿಜಯಂಗೈವುದು ॥೧೦॥

ಎಂದವರು ಭಕ್ತಿಯಿಂ ಬಿನ್ನೈಸಲಾ ಗುರುಗ
ಳಂದವರ ವಿಜ್ಞಪ್ತಿಗನುಮತಿಸುತಿರೆ ಭಕ್ತ
ವೃಂದವಮದು ಮುರುಗೋಡಗ್ರಾಮಕ್ಕೆ ಮುದದಿಂದ ವಿಜಯಗೈಸಿದುವವರನು
ಬಂದ ಮಡಿವಾಳ ಶಿವಯೋಗಿಯನ್ನಿದಿರ್ಗೊಂಡು
ಮಂದಿಯೆಲ್ಲರು ಮಹಾನಂದದಿಂ ಶೆಟ್ಟರಿಹ
ಮಂದಿರದೊಳಿಳಿಸಿ ಸಾಷ್ಟಾಂಗಪ್ರಣಾಮವನು ಗೈದಿದರವರು ಸರ್ವರು ॥೧೧॥

ಅಂದಪ್ಪವಿಧ ಪೂಜೆಯಿಂದ ಮೇಣುಪಚಾರ
ದಿಂದವರ ಪಾದಾರವಿಂದವನು ಶೆಟ್ಟರಾ
ನಂದದಿಂ ಯಜಿಸಿ ಮನದಂದು ಮೃಷ್ಟಾನ್ನದಿಂ ತಣಿಸಿಗೊಳಿಸಿದರು ಗುರುಗಳಾ ।।
ಎಂದುಮಿಾಪರಿಯೋಗಿವೃಂದಗಧಿಪತಿಯಪ್ಪ
ತಂದೆ ಮಡಿವಳಗುರುವಪಾದಾಬ್ಜದೊಳಿಗದೊ
ಳೊಂದಿ ಶೆಟ್ಟರು ಕಾಲಗಳೆದು ಗುರುಭಕ್ತರೆಂಬೆಸೆವ ಪೊಸಜಸವಾಂತರು ॥೧೨॥

ಪಗಲೊಳೊಪ್ಪತ್ತರ್ಪಿತವನೆಸಗಿ ಪವಡಿಸುತೆ
ಪಗಲೊಡೆಯನಸ್ತಮಿಪ ಮುನ್ನವೇ ತಾಂ ಸಿದ್ಧ
ನ ಗವಿಗೈತಂದಿರುಳುಗಳೆದಲ್ಲಿ ಬಳಿಕಿಲ್ಲಿಗೈತಹನದೆಂತೆಂದೆನೆ ॥
ಬಗೆಯೆ ಬೆಳಗೆರಡು ತಾಸಿರುತಿರಲು ನಾಗರ್ಘುರಿ
ಗೊಗುಮಿಗೆಯಿನೈದಿ ಮಿಂದಾಬಳಿಕ ಶೆಟ್ಟರ ಮ
ನೆಗೆ ಬರುವನಾರರಿಯದಂತೆಪೋಲಿದು ನಿತ್ಯನಿಯಮವಾ ಶಿವಯೋಗಿಗೆ ೧೩॥

ಅಲ್ಲಿ ಗವಿಯಲ್ಲಿ ಗುರುವಲ್ಲದೇ ಕಾಳ್ಗಳಂ
ಮೆಲ್ಲುತಿಹ ಬಾಮಾನುಮೊಂದೋರ್ವನಿವನು ಮಂ
ತಲ್ಲದಲೆ ಕುರುಬ ರಾಯಪ್ಪನೆಂಬೋರ್ವನಿವರೀರ್ವರಿರುತಿಹರಾವಗಂ ।।
ಬಲ್ಲಿದನ ಗುರುತಲ್ಲಜನ ಸೇವೆಗೈವುತ್ತ
ಸಲ್ಲಲಿತ ಲೀಲೆಯಿಂದೀರ್ವರಾ ಗವಿಯಲ್ಲಿ
ಸಲ್ಲುವಾಚರಣೆಯುಳ್ಳವರಾಗಿ ಮೆರೆದಿರ್ಪರೀರ್ವರುಂ ಶಿಷ್ಯರಾಗಿ ॥೧೪॥

ಅಮವು ಮುಂಜಾವಿನೊಳು ಗುಪಿತದಿಂದಲಿ ಶೆಟ್ಟ
ರ ಮನೆಗೈತಹುದಿದುವೆ ಊರಜನರಾರಿಗಂ
ಶ್ರಮಗೊಂಡು ಶೋಧಿಸಿದೊಡರಿಯದಾಯ್ತೆನೆ ಮಹಾಯೋಗಿಮಹಿಮೆಯು
ತಿಳಿಯದು ॥
ರಮಣೀಯದಣಿಮಾದಿ ಸಿದ್ಧ್ಯಷ್ಟ ಕಾನ್ವಿತರಿ
ಗಮಿತ ಮಹಿಮಾತ್ಮರಿಗೆ ಗುಪಿತವುಂ ಪ್ರಕಟವುಂ
ಸಮವಲ್ತೆ ತಿಳಿಯಲಾರವಂತದನೀ ಶಿವಯೋಗಿವರ್ಯನಿಗಸದಳವಾವುದು ॥೧೫॥

ಮುರುಗೋಡ ಮಲ್ಹಾರಿರಾವ ಕುಲಕರಣಿ ತಾ
ಸರಕಾರಕಪರಾಧಿಯಾದ ತನ್ನಾತ್ಮಜನ
ನೆರೆ ದುರಂತದ ಶಿಕ್ಷೆಗಂಡು ಘನಭಯದಿಂದ ಶಿವಯೋಗಿಯೊತ್ತಿಗೈದಿ ॥
ಸರಸಗನೆ ಪೊಡಮಟ್ಟು ಗುರುವೆ ಮತ್ಪುತ್ರಂಗೆ
ಸರಕಾರದತ್ತಣಿಂ ಶಿಕ್ಷೆ ಬಂದೊದಗಿಹುದು
ಕರುಣಾಳು ಸದ್ಗುರುವೆ ಆ ಶಿಕ್ಷೆಯೋಡುವಂತೆನಗನುಗ್ರಹವ ನೀಡು ॥೧೬॥

ಹೊಣೆಗಾರನಂ ಕೊಡಲು ಬಿಟ್ಟಿರ್ಪರವನನ್ನು
ತ್ರಿಣಯನಾಕಾರನೇ ಕುಲಕರ್ಣಿಯ ಸೂನು
ಕ್ಷಣಕಾಲಗಳೆಯಲೆನಗಳವಿಲ್ಲ ಗುರುರಾಯ ಪರಿಹರಿಸು ತತ್‌ಶಿಕ್ಷೆಯ ॥
ಅಣಿಯರಂ ನುತಿಪ ಕುಲಕರ್ಣಿಯಂ ನೋಡಿ ನಿ-
ನ್ನಣುಗನಿಲ್ಲಿಗೆ ಬರಿಸು ಹೆದರದಿರು ನೀನೆನಲ್
ಮಣಿದವನು ಮನೆಗೈದಿ ಸುತನೊಡನೆ ಬಂದವನ ಗುರುವಿಗೆರಗಿಸಿ ಪೋದನು ॥೧೭॥

ಅಡಿಗೆರಗಿ ನಿಂದಿರ್ಪ ಕುಲಕರ್ಣಿ ತನುಜಾತ
ನೊಡಗೊಂಡು ಗಾಣಗಾಪುರಕೆ ಗುರುವರನು ಬಂ
ದೊಪರ್ದ ಪ್ರಮುಖ ಜನರೊಡಗೂಡಿ ಮಿಯಲಾ ನದಿಗೆ ಹರಿತಂದನವನು ॥
ಮೃಡಮಹಾದೇವಶಂಕರ ಎಂದು ನಾಮವನು
ಬಿಡದುಚ್ಚರಿಸಿ ಮಿಂದು ತಾನೊಂದು ತಂಬಿಗೆಯು
ತಡೆಯ ಮೇಲಿಟ್ಟಿರಲು ಕುಲಕರಣಿಯರಿಯದಲೆ ತಂಬಿಗೆಯು ಮುಟ್ಟಲಾಗಿ ॥೧೮॥

ಬಲ್ಲಹನು ಗುರುವರನು ಕಂಡು ಕಡು ಕೋಪದಿಂ
ಖುಲ್ಲನೇ ಶಿವಪೂಜೆಗೆಂದಿಟ್ಟ ತಂಬಿಗೆಯು
ನಿಲ್ಲೀಗಳೆಲೆ ಮುಟ್ಟಲಹುದೇ ನೀನೆಂದು ಕೈಬೆತ್ತದಿಂ ಪೊಡೆ ಪೊಡೆದನು ।।
ಸಲ್ಲಿಸಿದ ಪೊಯ್ಲಗಳಿಂ ಕುಲಕರಣಿ ಕಳವಳಿಸು
ತ್ತಲ್ಲಿ ತೊಪ್ಪನೆ ನೆಲಕೆ ಬೀಳೆ ಸುಂಗಡಿಗರವ
ರೆಲ್ಲರುಪಚರಿಸಲಸು ಬಂದುದು ಗಡಾತನಿಗೆ ಗುರುವೆಂದನಿಂತೆಂದೆನೆ ॥೧೯॥

ಎನ್ನ ಬೆತ್ತದ ಶಿಕ್ಷೆಯಾದಮೇಲ್ ಸರಕಾರ
ದಿನ್ನಲ್ಲಿ ಶಿಕ್ಷೆ ಬಿಡಿ ನಡೆಯಿರೈ ನೀವೆಂದು
ತನ್ನ ಸರ್ವಜ್ಞತೆಯು ಸೂಚಿಸಲು ಸರ್ವರಿಗೆ ಸಂತಸವನಂತವಾಯ್ತು ।।
ಪನ್ನತಿಕೆಯಾಂತ ಗುರುಮಡಿವಾಳ ಶಿವಯೋಗಿ
ಬೆನ್ನನೇಳ್ವರರೆಲ್ಲರಾಗ ಮುರುಗೋಡಕ್ಕೆ
ಚೆನ್ನಮೆನೆ ಹರಹರಾ ಪಾರ್ವತೀ ಪತಿಯೆಂದು ಭಜನೆಗೈವುತ ಬಂದರು ॥೨೦॥

ಬಂದ ಮಾರನೆ ದಿವಸದಲ್ಲಿ ನ್ಯಾಯಾಧೀಶ–
ಮಂದಿರದೊಳಾ ನ್ಯಾಯ ಬಿತ್ತರದಿ ನಡೆವುತಿರ
ಲಂದದು ವಿಚಾರಾಂತ್ಯದೊಳು ನಿರಪರಾಧಿಯೆಂದವನನ್ನು ಬಿಟ್ಟಿತಾಗ ।।
ಸಂದಮಂದಾನಂದದಿಂದ ಸುತನೊಡಗೊಂಡು
ಬಂದು ಮಲ್ಹಾರಿ ಕುಲಕರಣಿ ಗುರುಗಳ ಪದಕೆ
ವಂದಿಸುತೆ ಮಹಿಮಾಂಕ ನಿನ್ನ ಮಹಿಮೆಯು ತಿಳಿಯಿತೆಂದು ಬಣ್ಣಿಸಿ ಪೋದನು ॥೨೧॥

ಮುರುಗೋಡದಲ್ಲಿ ಶೆಟ್ಟರ ಮನೆಯೊಳೊಪ್ಪುತ್ತು
ಪರಮ ಪ್ರಸಾದಮಂ ಕೊಂಡು ತಾನರೆಗಳಿಗೆ
ಜರಗಿ ವಿಶ್ರಮಿಸುವರು ಗುರುವರ್ಯರೀಗಳಾ ತಾಣದೊಳು ಮಲಗರಾರೂ ।।
ಇರುತೊಂದುದಿನವೆಲ್ಲ ಭಕ್ತರಿಗೆ ಪೇಳಿ ತಾ
ನಿರುವ ಸಿದ್ಧನಗವಿಗೆ ಪೋಗಿ ಬಾಮಾನು ಮೇಣ್
ಕುರುಬ ರಾಯಪನುಮಿರ್ವರುವೆರಸಿ ವಾಸಿಸಲು ಗುರುರಾಯನೊಂದು ದಿನವು ॥೨೨॥

ನೀವು ಬಾವಾ ಕುರುಬ ರಾಯಪ್ಪ ಕೇಳಿರೈ
ನಾವೆಲ್ಲರೀ ಗವಿಯೊಳಿರಸಲ್ಲದೇತಕೆನೆ
ಭಾವಿಸಲ ಸರಕಾರವೆಮ್ಮನೆಳದುಯ್ಯುವುದು ನಾಳಿಗೆನಲವರೀರ್ವರು ।।
ನಾವೇನನೆಸಗಿರ್ಪೆವೆಳೆದೊಯ್ಯೆ ಸರಕಾರ
ನಾವೇನು ಪೋಗೆವೈ ನೀವೆ ಪೋಗೆನಲಾಗ
ತಾವಂದು ಮಡಿವಳರು ಪೋಗಲಾ ರಾತ್ರಿ ಕಳ್ಳರುಮಾಊರೊಳಗೆ ಧನಿಕನಾ ॥೨೩॥

ಮನೆಯ ಕನ್ನವ ಕೊರೆದು ಮಿಸುನಿದೊಡವೆಗಳ ಸಿ
ದ್ಧನ ಗವಿಯು ಬಾವಾನ ಕಾಳಿನೊಳಗಿಟ್ಟು ಮೆ
ಲ್ಲನೆ ಸರಿದು ಪೋದರೈ ಬೆಳಗಾದಮೇಲೆ ಸರಕಾರದಾಳುಗಳೆಲ್ಲರು ।।
ಜನವರಿಯೆ ಪುಡುಕುತ್ತೆ ಗವಿಗೈದಿ ಪುಡುಕೆ ಕಾ
ಳಿನ ಪುಟ್ಟಿಯೊಳು ತೊಡುವುಗಳು ಸಿಗಲ್ಕವರೀರ್ವ
ರನು ಬೇಗ ಪಿಡಿದೆಳೆದು ಕೊಂಡೊಯ್ದು ಸೆರೆಮನೆಯೊಳಿಟ್ಟು ಕೇಳಲ್ಕೀರ್ವರು ॥೨೪॥

ನಾವಾವುದನ್ನರಿಯವೀ ಮಾತು ನಮ್ಮಗುರು
ದೇವನಹ ಮಡಿವಾಳಯತಿಗೆ ಗೊತ್ತುಂಟೆನಲ್
ಧಾವನಂಗೊಂಡು ಸರಕಾರದಾಳ್ಗಳುವೆರಸಿ ಮಡಿವಾಳರಂ ಕಂಡರಾಗ ॥
ತಾಪಾಗಿಯಧಿಕಾರಿಗಳು ಬಂದು ಕೇಳುತಿರೆ
ಪಾವನನು ಗುರುವವರ್ಗೆ ಮುನ್ನೊರೆದ ರೀತಿಯ
ನ್ನೋವಿ ಪೇಳಲು ಕೇಳಿ ಬೆರಗಾಗಿ ಸೆರೆಯಿಂದ ಬಿಟ್ಟರವರೀರ್ವರನ್ನು ॥೨೫॥

ಚಿತ್ತಜಾತಾರಿ ಸದ್ಭಕ್ತರೇ ಚಿತ್ತೈಸಿ
ರಿತ್ತ ಸಿದ್ಧನ ಗವಿಯೊಳಾ ಗುರುವು ಮಹಿಮ ಸಂ
ಪತ್ತಿಯಿಂದಿರೆ ಚಿದಂಬರ ದೀಕ್ಷಿತರ ದರ್ಶನಾರ್ಥಮವರಾಶ್ರಮಕ್ಕೆ ।।
ಒತ್ತರದಿ ಬರಲಾಗ ದೀಕ್ಷಿತರು ನೋಡಿ ಮುಂದ
ವೆತ್ತು ಬೋಧಿಪ ಬೋಧವನ್ನೊತ್ತಿ ಪೋಣಿಸಿದ್ದು
ತತ್ತ್ವನಯ ಬುದ್ಧಿಯಿಂದೆತ್ತಿ ಯೆದೆಗೊತ್ತಿ ತವೊತ್ತಿನೊಳಗಿರಿಸಿದಳಲಾ ॥೨೬॥

ಅಲ್ಲಿ ಶ್ರವಣಕ್ಕೈದಿದೆಲ್ಲ ಬ್ರಾಹ್ಮಣರು ಮನ
ದಲ್ಲಿದೇನಾವನಿವನೆಲ್ಲಿಂತಹದು ಮಮತೆ
ಪಲ್ಲವಿಸಿದುದಕಾವ ಕಾರಣವು ತಿಳಿಯದೆಂದೊಳಗೊಳಗೆ ಯೋಚಿಸಿದರು ॥
ಬಲ್ಲಹನು ದೀಕ್ಷಿತರ ವಲ್ಲಭನು ಮಡಿವಳನ
ಬುಲ್ಲವಿಸಿಯೊಳಕೋಣೆಯೊಳಗುಯ್ದು ನಲುವಿನಿಂ
ಮೆಲ್ಲನೆಯನವನೊಡನದೇನೇನೊ ಮಾತಾಡಿ ಮಗುಳ್ಳೈದಿ ಕುಳಿತರವರು ॥೨೭॥

ಓಹೋ ಶಂಕರರರೂಪಿನವರು ದೀಕ್ಷಿತರವರು–
ಮಾಹರನ ಸುತ ವೀರಭದ್ರನವತಾರಿಯಿವರು
ಈ ಹದನವೇಮಗೀಗ ತಿಳಿದತ್ತದೇತಕೆನಲೀ ಪ್ರೇಮವಿರ್ಪಕತದಿ ॥
ಆ ಹರನ ಸದ್ಭಕ್ತಿಯುತರು ಬ್ರಾಹ್ಮಣರ ಸಂ
ದೋಹವಿಂತಿರಿದಿರಲ್ ವೇದಾಂತಮುಂ ತಾನು–
ದಾಹರಣದೊಡನೆ ಬೋಧಿಸಿ ದೀಕ್ಷಿತರು ಸಭೆಯನೆಲ್ಲವ ವಿಸರ್ಜಿಸಿದರು ॥೨೮॥

ಆ ಬಳಿಕ ಬಾಡಬರ ಪಂಡಿತರು ಸಹಜಮಾ
ದಾ ಬಹುಲಮಹಿಮಾಂಬುನಿಧಿಯೆನಿಸಿ ಜಗದೊಳಗೆ
ಶೋಭಿತರ ಮಡಿವಾಳರೊಡನೆ ಗೀರ್ವಾಣೋಕ್ತಿಯನೊರೆಯಲಾ ಗುರುಗಳು॥
ಆ ಬಾಡಬರಗೂಡ ಗೀರ್ವಾಣ ಭಾಷೆಯುಂ
ಸ್ವಾಭಾವಿಕತೆಯಿಂದೆ ಪ್ರೌಢಮೆನೆ ನುಡಿಯಲ್ಕೆ
ಸ್ವಾಭಿಮಾನವಬಿಟ್ಟು ತತ್ಪಂಡಿತತ್ವಕ್ಕೆ ಬೆರಗಾಗಿ ಮಣಿದಿಪ್ಪರು ॥೨೯॥

ಸಂತತಂ ಕ್ರಮವಿರ್ಪ ಮಾಳ್ಕೆಯಿಂ ತಾನೆ ವೇ
ದಾಂತವಾಕ್ಯಶ್ರವಣವನ್ನೆಲ್ಲ ಜನರಿಗೋ
ರಂತೆ ಗೈಯಲ್ಕೆ ಶ್ರೋತೃಗಳೆಲ್ಲರವರಾಗ ತಲೆದೂಗಿದರು ಬೋಧಕೆ ॥
ಅಂತಲ್ಲಿ ದೀಕ್ಷಿತರ ಬಳಿಯಲ್ಲಿ ಶಿವಯೋಗಿ
ಸಂತಸದಿ ಕೆಲವು ದಿನವಿರಲಿತ್ತಲುತ್ತರದ
ಪ್ರಾಂತದಿಂ ದೀಕ್ಷಿತರ ಬಳಿಗೋರ್ವ ತಾರ್ಕಿಕನು ವಾದಕೆಂದೈತಂದನು ॥೩೦॥

ಬಂದು ದೀಕ್ಷಿತರಿಗಭಿವಂದಿಸುತ್ತವನುವಿ೦ೀ-
ತೆಂದನೆಂತೆನಲಾರುವೋನೊರೆವರದ ನಾನು-
ಮಿಂದು ಪ್ರಸಿಗ್ಯೆಯ್ವನಾರಿರ್ದೊಡೀಗೊರೆಯುಲೆಂದೊರೆದನಾ ತರ್ಕಶಾಸ್ತ್ರೀ ।।
ಎಂದ-ದಂ ಕೇಳಿ ದೀ-ಕ್ಷಿತರು ಮಡಿವಳಯೋಗಿ
ಗೆಂದರೀತನಿಗೊಂದು ಪ್ರಶ್ನೆಯನು ಮಾಳ್ಪವೆನ
ಲಂದು ಮ-ಡಿವಳಯೋಗಿ ಬಂದ ತಾರ್ಕಿಕನಿಗಿಂತೆಂದನವನದನೊರೆವೆನು ॥೩೧॥

ನೀನಾಲಿಸ್ಕೆ ಪತಿವ್ರತೆಯರ ಶಿರೋಮಣಿಯು
ತಾನಾದ ಜನನಿ ತನ್ನಿನೆಯನಿಂದಲೆ ನಿನ್ನ
ತಾನಾಕೆ ಪೆತ್ತಳೆಂಬುದನೊರೆವೆನೀಗಳಿದಕೇನುತ್ತರಂಗುಡುವುದ್ಯೆ ।।
ತಾನದಂ ಕೇಳಿ ತಾರ್ಕಿಕನು ತಲೆವಾಗಿ ತ
ನ್ನಾನದಿನೇನೊಂದನೊರೆಯದಲೆ ಮಡಿವಳರ-
ನೂನಯುಕ್ತಿಗೆ ಮೆಚ್ಚಿ ಶರಣೆಂದವರ ಪಾದಕೆಡೆವಿದಾ ಸಭೆಯೊಳು ॥೩೨॥

ದಿಕ್ಷೀತರು ಮಡಿವಾಳ ಶಿವಯೋಗಿಗಳ ನುಡಿಗೆ
ಲಕ್ಷವಿತ್ತುರೆ ಬೆರಗುವಟ್ಟು ತಾರ್ಕಿಕನ ಕರೆ
ದಾಕ್ಷಣವೆ ಉಚಿತವನ್ನಿತ್ತು ಕಳುಹಿದರಿತ್ತಮೊಂದಿನಂದದೊಳಿರ್ದರು ॥
ದಕ್ಷರು ಚಿದಂಬರ ಸುದೀಕ್ಷಿತರು ಮಡಿವಳರ
ಪಕ್ಷದೊಡವೆರೆದು ಗೋಣಾಗಾರಕೈತರು
ತ್ರ್ಯಕ್ಷಯದ ಮಹಿಮೆಯುಳ್ಳವರು ತಾವೊಂದು ಹೂಡಿದರು ಯಜ್ಞವನ್ನು ॥೩೩॥

ಯಜ್ಞದ ಸಮಾರಂಭಕೆಲ್ಲ ಸಂಸ್ಥಾನಿಕರ
ಭಿಜ್ಞರಹದೇಶಮುಖ ಧನಿಕಾಗ್ರಸರರು ಸ
ರ್ವಜ್ಞದೀಕ್ಷಿತರ ಯಜ್ಞಕ್ಕೆ ನೆರವಾಗುತಿರಲೀವೇಳ್ವೆ ಸಡಗರವನು ॥
ಪ್ರಾಜ್ಞರುಂ ಸತ್ಕವೀಶ್ವರರು ಮೇಣ್ ಸರ್ವವೇ
ದಜ್ಞರುದ್ಗಾತೃಹೋತ್ರಧ್ವರ್ಯುಗಳು ಕೀರ್ತ
ನಜ್ಞರುಂ ಮೇಣಿತರ ಭೂಸುರರ ಸಮುದಾಯುವೈತಂದುದಾ ಯಜ್ಞಕೆ ॥೩೪॥

ಈ ಮಹಾಕಾರ್ಯದೊಳು ಕೊಟ್ಟಣದ ಮಂದಿರ
ಕ್ಕಾ ಮಹಾಮಹಿಮ ಮಡಿವಾಳಶಿವಯೋಗಿಯುಂ
ಸೇವಿಸಲುವೇಳ್ಕೆಂದು ದೀಕ್ಷಿತರು ಮನವಂದು ಸೇವಿಸಿದರಂದವರ್ಗದಂ ॥
ಕಾಮಹರನವತಾರಿಯಪ್ಪ ದೀಕ್ಷಿತರು ಸ
ತ್ಪ್ರೇಮದಿಂ ಹೋಮವನು ಮಾಡುತಿರಲೀಗಳೀ
ಭೂಮಿ ಬೆಸಲಾದಂತೆಪೋಲೆತ್ತಲುಂ ಜನರು ಮುತ್ತಿದರು ಸುತ್ತಲೆಲ್ಲಾ ॥೩೫॥

ಲೆಕ್ಕವಿಲ್ಲದ ಜನರು ನಿತ್ಯ ನಿತ್ಯಂ ಬಂದು
ಮುಕ್ಕಣ್ಣನವತಾರಿ ದೀಕ್ಷಿತರ ದರ್ಶನವ
ನಕ್ಕರದಿ ಕೊಂಡುಂಡು ಪೋಗುತಿರ್ಪರು ಬಿಡದೆ ಹರಸುತಲಿ ಮಕ್ಕಳೊಡನೆ ॥
ತಕ್ಕಪಾರ್ವರುಮೆಲ್ಲ ಮಕ್ಕಳೊಡಗೂಡಿ ಬಂ
ದಿಕ್ಕಿದಮೃತಾನ್ನಮಂ ಮೆಲ್ದು ದಕ್ಷಿಣೆಗೊಂಡು
ಸಿಕ್ಕದಾರಿಯುಪಿಡಿದು ಪೋಗುತಿಹರೆನಲದೇಂ ನಾವೇಳ್ವೆ ಸಂಭ್ರಮವನು ॥೩೬॥

ಇಂತು ಲಕ್ಷಾವಧಿಯು ಮಿತಿಗೊಂಡ ಜನಗಣವ
ನಂತ ದಿಗ್ದೇಶದಿಂದೈತರುತ್ತಿರಲೋರ್ವ
ಪಂತಿಯೊಳು ತುಪ್ಪವದು ಕಡಿಮೆಬೀಳಲು ಚಿದಂಬರ ದೀಕ್ಷಿತರು ಕೇಳುತೆ ॥
ಅಂತವಿಲ್ಲದ ಮಹಿಮೆಯಾಂತ ಮಡಿವಳರ ತ
ನ್ನಂತಿಕದಿ ಬರಮಾಡಿ ಕೇಳಲಿಂತದಕೇಕೆ
ಚಿಂತಿಪುದು ಗುರುವರ್ಯ ಸಂತವಿರಿಯೆಂದುಸುರಿ ಭೋಂಕನೇ ಮಡಿವಾಳರು ॥೩೭॥

ಹರಿವ ಗಂಗೆಯು ನೀರ ನೂರಾರು ಕೊಡಗಳಂ
ತರಿಸಿ ನೀಡಲು ನೀರು ಕಂಪು ತುಪ್ಪವದಾಗೆ
ಸುರಿಸುರಿದು ಜನರೆಲ್ಲರುಂಡು ಕೊಂಡಾಡಿದರು ಮಡಿವಾಳಶಿವಯೋಗಿಯು ॥
ಅರರೆ ನೀರನು ತುಪ್ಪವಂ ಮಾಡಿ ನೀಡಿದೀ
ಪರಮ ಮಹಿಮಾಢ್ಯನಿಂತಪ್ಪನಂ ನಾವೆಲ್ಲಿ
ಧರೆಯೊಳಗೆ ಕಂಡರಿದುದಿಲ್ಲವೆಂದೆಲ್ಲರುಂ ಮನವೊಸೆದು ಬಣ್ಣಿಸಿದರು ॥೩೮॥

ಇದನರಿದು ಗುರುಚಿದಂಬರರು ವರಮಡಿವಾಳ
ರದುಭುತದ ಮಹಿಮೆಯಂ ಜನರೆಲ್ಲರಿಗೆ ತೋರಿ
ಪದುಳದಿಂ ಕೂಡಾಡಿ ಯಾಗವನು ಪೂರೈಸಿರುವಭೃತಸ್ನಾನಗೈದು ॥
ಮೊದಲಿನಂತವರು ನಿಜನಿಯಮದೊಳು ತೊಡಗಿ ಪುರ
ಭಿದನರ್ಚೆಯೊಳಗಿರಲು ಮಡಿವಾಳಗುರುವರು
ಮುದದಿ ಸಿದ್ಧನ ಗವಿಗೆ ಬಂದು ಲಿಂಗಾನಂದದೊಳಗನಿಶಮಿರುತಿರ್ದರು ॥೩೯॥

ಹೆತ್ತವ್ವೆಯಾದವಳಪತ್ಯರಂ ಬಿಟ್ಟು ತಾ
ನೆತ್ತ ಪೋಪಳು ಪೇಳು ಕೇಳು ಗಿರಿಜಾದೇವಿ
ಹೆತ್ತವ್ವೆ ನೀನಾದ ಬಳಿಕೆನ್ನನುಳಿದು ಪೋಪರೆ ತಾಯೆ ಅದುಕಾರಣ ॥
ಚಿತ್ತದೊಳಗಿದನರಿದು ಜಗದಂಬೆ ನೀನೆನ್ನ
ಹತ್ತಿರಕೆ ಸಾರ್ದು ಪಿಡಿದೆತ್ತಿ ಮುದವೆತ್ತು ನಿ
ನ್ನುತ್ತಮದ ದಯೆದೋರಿ ಪಾಲಿಸೌ ಬಿಡದೆನ್ನ ಘೋಂಕನೆ ಮಹಾಮಹಿಮಳೆ ॥೪೦॥

ಶ್ರೀಶಿವಾದ್ವೈತ ಪರವಿದ್ಯಾನವದ್ಯಾಕೃತಿ
ವೈಶದ್ಯ ವಿದ್ಯೋತಮಾನನ ಮಹಾಲಿಂಗ
ದೇಶಿಕಶಿಖಾಮಣಿಯ ಪಾಣಿಕಂಜಾತ ಸಂಜಾತನು ಕವೀಶದಖತಂ ॥
ಆ ಸದಾಶಿವಕವಿಯು ಭೂಸದಾಶಿವನ ಯೋ
ಗೀಶನ ವಿಪಾಶನ ನಿರಾಶನುರುಮಡಿವಾಳ
ದೇಶಿಕನ ಸುರುಚಿರ ಪುರಾಣದೊಳು ಹತ್ತನೆಯ ತಾರ್ಕಿಕನ ಗೆಲಿದ ಸಂಧಿ ॥೪೧॥

ಅಂತು ಸಂಧಿ ಹತ್ತಕ್ಕಂ ಪದಂಗಳು ೫೫೭ ಮಂಗಳಂ
ಶ್ರೀ ಶ್ರೀ

# ೧೧ನೆಯ ಸಂಧಿ

ಸೂಚನೆ:– ಸಾರ ಬಾಗಲಕೋಟಿ ವೇಶ್ಯಾಂಗನೆಗೆ ಮಹಿಮೆ
ದೋರಿ ಮುರುಗೋಡದೊಳು ಜಂಗಮರ ಲಿಂಗಗಳ
ನಾ ರುಚಿರ ಮಾಡಿ ವಳರು ಕೊಟ್ಟನೇಕ ಗ್ರಾಮದೊಳು
ಮಹಿಮೆದೋರ್ದರವರು॥

ಶೂಲಿಯುಂ ನವ್ಯವನಮಾಲಿಯುಂ ಶವಶಿರೋ
ಮಾಲಿಯುಂ ಕೃತ ವೃಷಭಪಾಲಿಯುಂ ನಿಟಿಲತಟ
ಕೀಲಿಯುಂ ವಾಮಗತಕಾಲಿಯುಂ ಕರುಣಾಪ್ರಣಾಲಿಯುಂ ದಿನದಿನದೊಳು ॥
ಕೇಲಿಯಿಂ ವೃತಭಸ್ಮಧೂಳಿಯುಂ ನಿಗಮಾಂತ
ಶಾಲಿಯುಂ ಭವಹರಣ ಶೀಲಿಯುಂ ವಿಧುರುಚಿರ
ಮೌಲಿಯುಂ ನುತಿಪೆನು ಕಪಾಲಿಯುಂ ವಿನಮದಮರಾಲಿಯುಂ ಭಕ್ತಿಯಿಂದೆ ॥೧॥

ಸಿದ್ಧನಾ ಗವಿಯಲ್ಲಿ ಸಿದ್ಧಮಡಿವಳರು ಪ್ರ
ಸಿದ್ಧ ಗುರುಗಳಿರಲ್ಕೆ ಮುರುಗೋಡದೊಳಗಿದ್ದ
ಶುದ್ಧ ಶೆಟ್ಟರ ಮಗಳ ಮದುವೆ ಬಾಗಲಕೋಟೆಯೊಳಗೆ ಸಪನಿಯಮವಾಗೆ ॥
ಸಿದ್ಧಪಹ ಲಗ್ನವನ್ನುದ್ಧರಿಪ ಮಡಿವಾಳ
ಬುದ್ಧರಿಗೆ ಶೆಟ್ಟರುಂ ಬಿನ್ನವಿಸಲಾ ಲಗ್ನ
ದುದ್ಧವಕ್ಕೊಪ್ಪಲವರೊಡಗೂಡಿ ಬಂದರವರಂದು ಬಾಗಲಕೋಟೆಗೆ ॥೨॥

ಬಿಡದೆ ಕದುಸಡಗರದೊಳೊಡಗೂಡಿ ಮದುವೆಯದು
ನಡೆಯಲಾ ಬೀಗರಿಗುಮೂರೊಳಿಹ ಮುಖ್ಯರಿಗು
ಮುಡುಗದಾಶೆಟ್ಟರೌತಣ ಗುಡಲ್ಕವರೆಲ್ಲರುಣಬಂದು ಕೂಡಿರ್ಪರು ॥
ಒಡನೆಲ್ಲರುಂಡಬಳಿಕೋರ್ವ ಗಣಿಕಾಂಗನೆಯು
ಕಡುಜವ್ವನೆಯು ತನ್ನ ಮೇಳದೊಡಗೂಡಿ ಸೊಂ
ಪಿಡಿದ ಗಾನವ ಪಾಡತೊಡಗಲೆಲ್ಲರು ಬಿಡದೆ ಕಿವಿಗೊಟ್ಟು ಕೇಳುತಿರಲು ॥೩॥

ಅಪ್ಪಮಡಿವಳದಿಗಂಬರಮೂರ್ತಿ ತಲೆಗೊಂದು
ಟೊಪ್ಪಿಗೆಯನಿಟ್ಟು ಕೋರಿಯನೊಂದು ಪೊರ್ದು ಮೆರೆ
ದಿಪ್ಪ ಮಂಚದಮೇಲೆ ಕುಳ್ಳಿರಲು ಸೌಂದರ್ಯದಿಂದೆಸೆದನವನೆಂತೆನೆ ॥
ತಪ್ಪದೇ ಸಹಜ ಸುಂದರರಿಗಾ ವಿಕೃತಿ ತಾ
ನೊಪ್ಪವಂ ಕುಡುತಿರ್ಪುದೆಂದೊಡೀ ಕೋರಿ ಮೇಣ್
ಟೊಪ್ಪಿಗೆಯು ಸುಂದರರಿಗೀ ಯೋಗಿಮಡಿವಾಳರಿಗೆ ಕುಡದೆ ಸುಂದರತೆಯಂ ॥೪॥

ಇಂತಸಂತ ಬ್ರಹ್ಮತೇಜದೊಡವೆರೆದು ಘನ
ಶಾಂತಮೂರ್ತಿಯು ಮಹಾಮಡಿವಾಳಶಿವಯೋಗಿ
ಯಂತವಿಲ್ಲದ ಮಹಾಲಿಂಗದಾನಂದದಿಂ ಕುಳ್ಳಿರಲ್ಕಾವೇಶ್ಯೆಯು ॥
ಸ್ವಾಂತದೊಳು ಕಂತುವಿನ ವಿಕೃತಿ ಮೊಳೆದೋರಲೋ
ರಂತೆ ಪಾಡುತ್ತೆ ವೈಯ್ಯಾರದಿಂ ಬಳಿಸಾರ
ಲಂತದಂ ಕಂಡು ಗುರುವಿತ್ತೇಕೆಲೆ ಹುಡಿಗೆ ಬರ್ಪೆ ನೀನೆನಲಾಕೆಯು ॥೫॥

ನಿಮ್ಮೊತ್ತಿಗೆ ಮೆನೆನಲವರೆಂದರೆಲೆ ಹುಡಿಗೆ
ನೀ ಮತ್ತೆ ಬಾ ನಾಳೆ ಕುಂಬಳದ ಬುರಡಿಯ
ನೈಮ್ಮತ್ತ ಬರ್ಪ ಕಾಲದಿ ತರ್ಪುದೆನಲಾಕೆಯೊಡಬಟ್ಟು ಪೋಂವಳಾಗ ॥
ಗಮ್ಮನೇ ಮರುದಿವಸ ಊರ ಹೊರಗಡೆಯಲ್ಲಿ
ದಿವ್ಯಮದರು ಮಡಿವಳರು ಗೂಡಾರವಂ ಪೊಯ್ಸಿ
ಸಮ್ಮುದದಿ ತಾವಲ್ಲಿ ಕುಳಿತು ಬೇರೊಂದೆಡೆಯೊಳೆಲ್ಲರಂ ಕುಳ್ಳಿರಿಸಲು ॥೬॥

ಆಗಳಾ ಗಣಿಕೆ ಪೀತಾಂಬರವನುಟ್ಟು ಮೈ
ಮೇಗೆ ಪೊಂದೊಡಿಗೆ ಮೇಣ್ ರನ್ನದೊಡಿಗೆಗಳಿಟ್ಟು
ರಾಗದಿಂ ಬಂದು ಬಹುವಿಧದ ರಾಗವ ಪಾಡಲಾಬಳಿಕ ಗುರುರಾಯರು ॥
ಆ ಗಣಿಕೆಯನು ಮುಂದೆ ಕರೆದು ಕುಂಬಳ ಬುರುಡಿ
ಈಗಳೆಲ್ಲಿದೆ ನೀನು ತಾರೆನಲು ಬಳಿಕಾಕೆ
ಬಾಗಿ ತೆಂಗಿನ ಪರಟಿಯನ್ನವರ ಕೈಗೀಯಲಾಬಳಿಕ ಗುರುರಾಯರು ॥೭॥

ತೆಗೆ ತೆಗೆ ಇದೇತಕೆಂದಾ ಮಹಿಮಶಾಲಿಯೊಗು
ಮಿಗೆಯಿಂದ ತಲೆಯೊಲುವ ತರಿಸಿ ಗಣಿಕಾಂಗನೆಯ
ಸೊಗಯಿಸುವ ಕೈಯೊಳಿತ್ತೆಲೆ ಹುಡಿಗೆ ಬಲುಜೋಕೆ ಘಟ್ಟಿಹಿಡಿಯೆಂದೆನ್ನುತೆ ॥
ಅಗಜೆಯರಸನ ಪೆಸರನುಸುರಿ ಬಲದೊಡೆಯನ್ನು
ಮಿಗೆ ಪೊಯ್ಯೆ ಮೈಯೆಲ್ಲ ಜೇನ್ಹುಟ್ಟಿನಂತೆ ರಂ
ಧ್ರಗಳಾಗಲೊಳಗಿಂದ ಭುಗಿಲೆಂದು ಬೆಂಕಿ ಕಾಣಿಗೆ ಕಾಣೆ ಮತ್ತೋರ್ವ ತಾ ॥೮॥

ಶಿವಶಿವ ಉಮಾಧವನೆಯೆಂದು ಬಲದೊಡೆಯನ್ನು
ತವೆ ಪೊಯ್ಯೆ ಜನನೇಂದ್ರಿಯಿಂದ ರೇತವು ತಲೆಯೆ
ಲುವಿನಲ್ಲಿ ಸುರಿಯಲುರಿಯೋಳಲದ ಕಾಣುತಾ ಬೆಲೆವೆಣ್ಣು ಬೆದರಿ ನಿಂದು ॥
ಶಿವಯೋಗಿ ಸುವಿರಾಗಿ ಕೃಪೆಯಾಗು ಮದಪರಾ
ಧವ ನೀನು ಕ್ಷಮಿಸಯ್ಯ ಗಣಿಸದಿರು ದುರ್ಗುಣವ
ಶಿವನೆ ನೀನೆಂದು ಪ್ರಾರ್ಥಿಸಲು ತದ್ಗುಹ್ಯದಿಂದ್ರಿಯವ ಸೆಳೆದುಕೊಂಡು ॥೯॥

ನೆಲದೊಳಗೆ ಗುಡುಗುಡನೆ ಪೊರಳಾಡಿ ಪೇಳಿದ್ದು
ಕೆಲಬಲವ ನೋಡದಲೆ ಶಿವಯೋಗಿಮಡಿವಳರು
ನಲುವಿನಿಂ ಮುರುಗೋಡಕಾರಿಗೊರೆಯದೆ ತಾವು ಪೋಪುದು ಜನರು ಕಂಡು ॥
ಭಲರೆ ಲೀಲಾಮೂರ್ತಿ ನಿನಗಾರು ಸರಿಯೊಳರು
ಬೆಲೆವೆಣ್ಣೆಗುಂಟಾದ ಬಿಂಕಮಂ ಮುರಿದೆ ನೀಂ
ಬಲವಂತ ನೀನೀಗ ಪೋಪುದಂ ಬಿಡಿಪರಾರ್ ಸ್ವೇಚ್ಛಾವಿಹಾರಿ ನೀನು ॥೧೦॥

ಜವದಿ ಮಾಯೆಯ ಗರ್ವವನು ಮುರಿದು ಮೋಹವೆಂ
ಬುವ ತಮವ ಪರಿಹರಿಸಿ ದುಷ್ಕರ್ಮಶೃಂಖಲೆಯ
ತವೆ ಹರಿದು ಸಂದೇಹ ಹಾಸ್ತಿಪಕನಂ ತರಿದು ದುರ್ಭವಾಂಗಣದತೃಣಂ ॥
ತವೆ ತಾನು ಪೋರಬೀಳುತಾನೆ ಬಲ್ಬಾಳೆ ದೋ
ಟವ ಕೀಳುತ್ತ ಪೋಗುತ್ತೆ ಮೂರ್ಖಕುಕ್ಕುರ ಭಷಣ
ರವವನಾರೈಯದಲೆ ಪೋಪ ಶಿವಯೋಗಿ ಮದಗಜವನಾರ್ಪಿಡಿವರಾರು ॥೧೧॥

ಎಂದಧಿಕ ಭಕ್ತಿಯಿಂ ನುತಿಸಲಿತ್ತವರೆಲ್ಲ
ರಂದತ್ತ ಮಡಿವಳರು ಮುರುಗೋಡಕೈದಿರುಳು
ಚಂದದಿಹ ತನ್ನ ಸಿದ್ಧನಗವಿಗೆ ಬರಲು ಬಾವಾನು ರಾಯಪನೀರ್ವರು ॥
ಬಂದೆರಗೆ ಬಾವಾನುವೆಂತು ಹುಡಿಗೆಯ ಹೊಡತ
ವೆಂದುಸುರಲೀ ಹುಡುಗನಾ ಹೊಡತವೆಂತಾದು
ದೆಂದಿವರು ನುಡಿಯಲೀರ್ವರು ನಕ್ಕು ಕುಳ್ಳಿರಲು ಬಾವಾನು ನಟ್ಟಿರುಳೊಳು ॥೧೨॥

ಊರೊಳಗೆ ಪೋಗಿ ಕೊಪ್ಪರಿಗೆಯೊಂದನು ತಂದು
ನೀರ ಕಳಕಳ ಕಾಸಿ ಬೆಣ್ಣೆಯಂ ಮೈಗೆಲ್ಲ
ಭಾರದಿಂ ತಿಕ್ಕಿ ಬಳಿಕೀರ್ವರುಂ ಕವಲುಗಟ್ಟಿಗೆಗೊಂದು ಮಗಿಯ ಕಟ್ಟಿ ॥
ತೋರಮಗಿಯಿಂ ನೀರನೆರೆದೊಡಂ ಹಾ ಎನದೆ
ಧೀರಮಡಿವಳರೆರೆದುಕೊಂಡು ಶೇವಿಗೆಯನುಂ
ಡಾ ರಾತ್ರಿ ಪವಡಿಸುತಮುಪ್ಪವಡಿಸಿದರವರು ಬೆಳಗುಜಾವವದಾಗಲು ॥೧೩॥

ದಿನದ ಪದ್ಧತಿಯಂತೆ ತಾನು ಶೆಟ್ಟರ ಮನೆಗೆ
ಚಿನುಮಯನು ಮಡಿವಾಳಶಿವಯೋಗಿ ಬಂದುಂಡು
ಬಿನದದಿಂದಲಿ ಗವಿಗೆ ಪೋಗುತಿರ್ಪಿನಮಿತ್ತ ಬರಲು ಶ್ರಾವಣಮಾಸವು ॥
ಧನಿಕರಪ್ಪಾ ಶೆಟ್ಟರವರು ಪದ್ಧತಿಯಂತೆ
ಮನೆಯೊಳಗೆ ಶಿವಗಣಾರಾಧನವನೆಸಗಲ್ಕೆ
ಮನದಂದು ತಮ್ಮೂರ ಸುತ್ತಣೂರಿನ ಗಣಂಗಳಿಗೆಲ್ಲ ಬಿನ್ನಹವನು ॥೧೪॥

ಎಸಗುತಿರಲಾ ಪಟ್ಟಚರಮೂರ್ತಿಗಳ ಗೃಹಿಗ
ಳ ಸಮೂಹವೆಲ್ಲ ಸಾವಿರವು ಕೂಡಲು ಶೆಟ್ಟ
ರಸವಸದೊಳಾಲೋಚಿಸಿದರವರದೆಂತೆನಲು ಮಡಿವಾಳಶಿವಯೋಗಿಯು ॥
ಒಸೆದೆಲ್ಲ ಜನರ ಮನೆಯೊಳಗುಣುವರಿವರನ್ನು
ಲಸದಸಮಕುಲ ಶೀಲರಪ್ಪ ಚರಮೂರ್ತಿಗಣ
ವಿಸರ ಪಂಕ್ತಿಯೊಳೆಂತು ಕುಳ್ಳಿರಿಪುದೆಂದು ತದ್ಗಣರೊಡನೆ ಯೋಚಿಸಿದರು ॥೧೫॥

ಪ್ರಣಿಧಾನದೃಷ್ಟಿಯಿಂ ಮಹಿಮರದನರಿವುತಾ-
ಕ್ಷಣ ಚಳ್ಳಹಳ್ಳಕ್ಕೆ ಪೋಗಿ ಮಿಂದ್ಯೈತಂದು
ಗುಣವಂತೆ ಬಾಯವ್ವಳೆಂಬ ಶೆಟ್ಟರಸತಿಗೆ ಸಿಟ್ಟನಿಂದಿಂತೆಂದರು ॥
ಘಣಘಣೆಂದುರ ಬಾರಿಪುದು ಘಂಟೆಯೊಡಲೊಳೀ
ಕ್ಷಣವೆ ನೀಡೌ ತಾಯೆ ನೀನೆನಲದಂ ಕಂಡು
ಮಣಿದಾಕೆಯಿರ್ದುದಂ ನೀಡಲದನುಂಡವರು ಚಳ್ಳಹಳ್ಳಕೆ ಪೋದರು ॥೧೬॥

ಇತ್ತ ಜಂಗಮರು ಮಡಿವಳರುಂಡು ಪೋದುದಂ
ಚಿತ್ತದೊಳಗರಿದು ಪಂಕ್ತಿಯ ವಿಘ್ನ ಪೋಯ್ತೆಂದು
ಮತ್ತತನದಲಿ ಮನದಿ ಸಂತೋಷಮಂ ತಾಳ್ದು ಭೋಜನಕೆ ಕುಳಿತಿರಾಗ ॥
ಒತ್ತರದಿ ಶೆಟ್ಟರುಂ ಶಿವಲಿಂಗಪೂಜೆಗಂ
ದಿತ್ತ ಸುಮಪತ್ರಂಗಳಂ ನೋಡಿ ಜಂಗಮರ
ಮೊತ್ತವದು ತಂ ತಮ್ಮ ಲಿಂಗಗಳ ನೋಡುತಿರೆ ಲಿಂಗಗಳೆ ಇಲ್ಲದಾಯ್ತು ॥೧೭॥

ಓರ್ವರೋರ್ವರ ಮುಖವ ನೊಡುತ್ತೆ ಸುತ್ತಲುಂ
ಸರ್ವರನ್ನೀಕ್ಷಿಸುತ್ತಿರ್ಪನ್ನೆಗಂ ಗಣರ
ಪರ್ವಗೈಯ್ಯುವ ಶೆಟ್ಟರವರನೀಕ್ಷಿಸುತ್ತೈದಿ ಲಿಂಗವಿಲ್ಲುದ ಕಾಣುತೆ ॥
ಶರ್ವನವತಾರಿ ಮಡಿವಾಳಶಿವಯೋಗಿಪನು
ಖರ್ವಜಂಗಮು ಪಂಕ್ತಿಬಾಹ್ಯನೆಂದುದಕಿಂದು
ಸರ್ವೋರ್ವಿ ರುದ್ರರ್ಗೆ ಫಲವಾದುದಿಂತೆಂದು ಮನದೊಳಗೆ ಚಿಂತಿಸಿದರು ॥೧೮॥

ಅನಿತರೊಳಗೋರ್ವನನುಚರನವನು ಲಿಂಗಮು
ಜ್ಞನಗೆ ಸವೇಳ್ಕುವೆಂದೋರ್ವನಯ್ಯನ ಬಳಿಗೆ
ಮನಪ್ರೊಳಿದು ಬಂದು ಲಿಂಗವ ನೀನು ತಗೆಯೆನಲು ಲಿಂಗವಿಲ್ಲಾಯ್ತು ನೋಡೆ ॥
ಕನಲಿ ಚರನೇಕೆ ಲಿಂಗವನುಳಿದು ಬಂದೆ ನೀ
ನೆನುತೇಳು ಪಂಕ್ತಿಯಿಂದಿಂತೆಂಬಿನಂ ಮತ್ತೆ
ಘನಲಿಂಗ ಪಟ್ಟಚರಮೂರ್ತಿಗಳು ಸೇವಕಸಿಗಿಂತೆಂದರಾ ಕಾಲದಿ ॥೧೯॥

ಎಮಗಿಲ್ಲವವರಿಗಿಲ್ಲವರಿಗಿಲ್ಲೆಲ್ಲರಿಗೆ
ಸಮವಾಗಿ ಲಿಂಗವಿಲ್ಲದು ಕಾರಣಂ ನೀನು
ಕ್ರಮದಿಂದವೆಲ್ಲರಂ ಪೊರಗಿಕ್ಕು ಭ್ರಷ್ಟರಂ ಶ್ರೇಷ್ಠರೆಂದುಸುರುವವರಂ ॥
ಭ್ರಮಗೊಂಡದೇಕೆ ನೀನೋರ್ವ ಜಂಗಮನನೇ
ಅಮಮ ಪೊರಗಿಕ್ಕುವುದು ಬಿಡು ಬೇಗ ನೀನೆಂದು
ಶಮಗಾಣದವರೆಲ್ಲ ಲಜ್ಜೆಗೆಟ್ಟಾಗಳಾ ಶೆಟ್ಟರಂ ಕರೆದೆಂದರು ॥೨೦॥

ಜ್ಞಾನವಿಲ್ಲದ ನಾವನೂನ ಕುಲಜಾತಿಯಭಿ
ಮಾನದೊಡಗೂಡಿ ಜೀವನ್ಮುಕ್ತನಂ ಪಂಕ್ತಿ
ಹೀನನೆಂದತಿಗಳೆದುದಕೆ ಫಲವದಿಂತಾದುದೆಂದು ಮತ್ತಿಂತೆಂದರು ॥
ಸ್ವಾನುಭವಿ ಜ್ಞಾನಿಮಣಿಯಗಣಿತದ ವಿರತಿಖಣಿ
ತಾನಾದ ಮಡಿವಳರ ಪಾದವನು ಮರೆಹೊಕ್ಕ
ನೂನಾಪರಾಧ ಕ್ಷಮಾಪಣೆಯ ಬೇಳ್ಪದೆಂದುಸುರಿದರು ಸರ್ವರವರು ॥೨೧॥

ಲಿಂಗವಂ ಕಳೆದುಕೊಂಡಾಗಳಾ ಜಂಗಮರು
ಮಂಗರಂತಾಗಿ ತವಮ್ಮಾಸನವ ಬಿಡದೆ ಕುಳಿ
ತಂಗವಿಸಿ ಕೆಲಬಲವ ಸುತ್ತಲುಂ ಪುಡುಕುತ್ತ ಭಂಗಬಡುವುದ ಕಾಣುತೆ ॥
ತುಂಗ ಮಹಿಮಾತ್ಮರಿಹ ಚಳ್ಳಹಳ್ಳಕೆ ಶೆಟ್ಟಿ
ಸಂಗಡೂರ್ಜನರ ಜಂಗುಳಿ ಬರಲು ಕೈಯೊಳಗೆ
ತೆಂಗು ಕಪ್ಪುರವಿಡಿದು ಬಂದೆಲ್ಲರೊಡನೆ ತಾನಡಗೆಡವುತಿಂತೆಂದನು ॥೨೨॥

ತಪ್ಪಾಯ್ತು ಕೇಳೆನ್ನ ಮುತ್ತಪ್ಪ ಜಂಗಮರ
ತಪ್ಪದುಂಟಾಗಿಹುದು ಮೇಣವರುಮುಣದೆ ಕುಳಿ
ತಿಪ್ಪರವರವರ ಲಿಂಗವನಿತ್ತು ಸಲಹೆನಲು ಮಡಿವಾಳಶಿವಯೋಗಿಯು ॥
ಅಪ್ಪ ಶೆಟ್ಟಿಯೆ ಕೇಳು ನೀವೆಲ್ಲಿ ನಾನೆಲ್ಲಿ
ಯೊಪ್ಪುವಾ ಲಿಂಗಗಳುಮವರನುಳಿದಿತ್ತಲ್ಯೆ
ತಪ್ಪುವೆಂತವು ಪೇಳು ನೋಡಿರವರವರ ಕೊರಳಲ್ಲಿಯೇ ಇರುತಿಪ್ಪುವು ॥೨೩॥

ಪೋಗಿರೆನಲೆಲ್ಲರವರಾಗಳಾ ಗುರುಗಳಿಗೆ
ಬಾಗಿ ಮನೆಗೈತಂದು ಜಂಗಮರ ಪದಕೆ ಸಿರ
ಬಾಗಿ ಲಿಂಗಗಳೆಲ್ಲ ನಿಮ್ಮ ಕೊರಳೊಳಗಿಹವು ನೋಡಿರೆನೆ ನೋಡುತಿರಲು ॥
ಸಾಗಿಬಂದವರ ಲಿಂಗಗಳು ಸಜ್ಜಿಕೆಯೊಳುಂ
ಟಾಗಿರಲು ನೋಡಿ ಜಂಗಮರು ಕೌತುಕವಾಂತು
ಯೋಗಿಮಡಿವಾಳರಂ ನೆನೆನೆನೆದು ಬಣ್ಣಸುತೆ ಹರಿಸಗೊಂಡರು ಸರ್ವರು ॥೨೪॥

ಆಗಳಾ ಜಂಗಮರುಮೂರಜನರುಂ ಶೆಟ್ಟಿ
ಪೋಗಿ ಗುರುಗಳ ಬದಿಗೆ ವಾದ್ಯಂಗಳುಂ ಮೊಳಗೆ
ಯೋಗಿಮಣಿ ಮಡಿವಾಳರನ್ನಿದಿರ್ಗೊಂಡು ಕರೆತಂದು ಪಾದಪೂಜೆಯನೆಸಗುತೆ ॥
ಶ್ರೀಗಳಂಘ್ರಿಗೆ ಮಣಿದು ಪರಮಪ್ರಸಾದವನು
ರಾಗದಿಂ ಕೈಕೊಂಡು ಜಂಗಮರು ತಣಿಗೊಂಡು
ಯೋಗಿಯುಂ ನುತಿಸಿ ಪೋಗಲು ಶೆಟ್ಟರವರನುಗ್ರಹದಿ ಮಕ್ಕಳ ಪಡೆದರು ॥೨೫॥

ಲೋಕದೊಳು ಯೋಗ್ಯನ ನಿರಾಕರಿಸಿ ಶಾಪವದು
ಬೇಕೆಂದು ಕೇಳ್ವ ಕಾರಣವಿಲ್ಲವೈಸೆ ಸು
ಶ್ಲೋಕನವನಂ ಯಾಚಿಸಿ ವರಗುಡುವುದೆಂದು ಬೇಡುವ ಕಾರಣವದಿಲ್ಲವು ॥
ಆ ಕಾರುಣಿಕನಪ್ಪ ಮಡಿವಳರ ಬೀಳುಗಳೆ
ದಾ ಕಷ್ಟವಂ ಪಡೆದು ಬಳಿಕವನ ಮರೆಹೊಕ್ಕೊ
ಡಾ ಕಂಟಕವು ಪೋಗಿ ಸುಖವಾದುದೆಂದಬಳಿಕಾ ಸಾಧು ಪೂಜ್ಯನಹನು ॥೨೬॥

ಇಂತಿರ ಮಡಿವಳರ ಘನಮಹಿಮೆಯುಡಬಿಲ ದಿ
ಗಂತ ವಿಶ್ರಾಂತಿಯಾಂತಿರುತಿರಲದಂ ಕೇಳಿ
ಕಾಂತವಹ ದೊಡವಾಡದೊಳಗೆ ಸವಣೂರಿನಂಬಪ್ಪನಾಯಕನೆಂಬನು ॥
ಶಾಂತಗುರುವರದರ್ಶನಾಂತದೊಳಗುಂಟಾದ
ನಂತ ಪಾಪಧ್ವಂಸದಿಂದ ಪಾವನವಾದ
ಸ್ವಾಂತವುಳ್ಳವನಾಗಿ ಶುದ್ಧನಾಗುವೆನೆಂದು ಮುರುಗೋಡಕೈತಂದನು ॥೨೭॥

ಬಂದು ಗುರುಪಾದಾರವಿಂದಕಡಗೆಡೆದು ತಾ
ನಂದು ಸದ್ಗುರುವೆ ನಾಂ ದೊಡವಾಡವೆಂಬುವೂ
ರಿಂದ ಬಂದಿಹೆನೀಗಳೆನ್ನ ಪೆಸರಂಬಪ್ಪನಾಯಕನು ಪದದೊತ್ತಿಗೆ ॥
ಬಂದಿರ್ಪೆನದರಿಂದ ಕೃಪೆಯಾಗು ಸದ್ಗುರುವೆ
ಸಂದ ಭಕ್ತಿಯೊಳಿಂತು ಕರೆಯುಲೈತಂದಿಹೆನು
ಮಂದಭಾಗ್ಯನ ಭಕ್ತಿಗೊಲಿದು ಬಿಜಯಂಗೈದು ಧನ್ಯನಂ ಮಾಡು ಗುರುವೆ ॥೨೮॥

ಗುರುವೆ ನಿನ್ನಯ ಪಾದದರ್ಶನವೆ ದರುಶನವು
ಗುರುವೆ ನಿನ್ನಯ ಪಾದಪೂಜೆಯೇ ಪೂಜೆಯದು
ಗುರುವೆ ನಿನ್ನಯ ನಾಮದುಚ್ಚಾರವದು ಜಪವು ಧ್ಯಾನವದು ಕಾಮಧೇನು ॥
ಗುರುವೆ ನಿನ್ನಡಿಯಿರವು ಸುರತರುವು ಜಗದೊಳಗೆ
ಗುರುವೆ ನಿನ್ನಡಿಯು ಪರುಶವೆ ಪರುಷವೆಂದರಿದು
ಭರದಿಂದೆ ಬಂದಿರ್ಪೆ ಬಿಜಯಗೈದೆನ್ನನುದ್ಧರಿಸೆಂದು ಬಿನ್ನವಿಸಲು ॥೨೯॥

ಆ ಬಿನ್ನಪವನಪ್ಪುಗೈದು ಗುರುವರನು ತಾ
ನಾ ಬಂದನಾಯಕನ ಭಕ್ತಿಗೊಸೆದಸವಸದೊ
ಳಾ ಬರ್ಪವಸರದೊಳು ದಾರಿಕಾರರು ಕಂಡು ಸಂತಾತ್ಮರಾದರವರು ॥
ಏ ಬಂದನೇ ಬಂದನೆಮ್ಮೂರ್ಗೆ ಗುರುವು ಕರು
ಣಾಬಂಧುರನು ತಂದೆ ಶಿವಯೋಗಿಯಾತನ ದ
ಯಾಬಲವದೆಮ್ಮ ಮೇಲುಂಟೆನುತಪ್ತರ್ಜನರು ಸಡಗರದಿ ಕರೆದೊಯ್ದರು ॥೩೦॥

ದೊಡವಾಡದಂಬಪ್ಪ ನಾಯಕನ ಭಕ್ತಿಗುರೆ
ಬಿಡದೆ ಸೇವಿಸುವೂರಜನರ ಭಕ್ತಿಗುಮುವನು
ಕಡುದಯದಿ ಮೆಚ್ಚಿ ತಾನಂಬಪ್ಪನಾಯಕನ ಪಾಸಿರ್ಪಿನಂ ಬಳಿಕ್ಕೆ ॥
ಸಡಗರದ ಮುರುಗೋಡದೊತ್ತಿನ ಹೊಸೂರೂರ
ಮೃಡಭಕ್ತನಪ್ಪ ಕುಲಕರಣಿ ನಾರಾಯಣನು
ದೊಡವಾಡ ರಂಗಪ್ಪನಿವರೀರ್ವರಾಗಳಾ ದೊಡವಾಡಕೈತಂದರು ॥೩೧॥

ಪಿಂಗದೀರ್ವರು ಮಹಾಯೋಗಿಗೆರಗುತೆ ಪೊಸೂ
ರಿಂಗೆ ಬಿಜಯಂಗೈದು ನಮ್ಮನುದ್ಧರಿಸೆನು
ತ್ತಂಗವಿಸಿ ಬಿನ್ನೈಸಲದನಪ್ಪುಗೈದು ಗುರುಮಡಿವಾಳ ಶಿವಯೋಗಿಯು ॥
ಪಿಂಗದವರೀರ್ವರೊಡಗೊಂಡು ನಲುವಿಂ ಹೊಸೂ
ರಿಂಗೆ ಬರಲಾ ಯೋಗಿವರನನತಿಭಕ್ತಿಯಿಂ
ಮಂಗಲ ಪದಾರ್ಥಗಳನ್ನಿತ್ತೀರ್ವರುಪಚರಿಸಿ ನಿತ್ಯವಿಂತುಪಚರಿಪರು ॥೩೨॥

ನಿತ್ಯಮಾ ಮಡಿವಾಳಯೋಗಿಯು ಪೊಸೂರಲ್ಲಿ
ಸ್ತುತ್ಯಶಿವಯೋಗದಾನಂದದೊಳು ಮುಳುಗುತಂ
ಭೃತ್ಯರೆಲ್ಲರ್ಗೆ ಸದ್ಬೋಧವನು ಗೈದನೆಂತೆನಲದಂ ಪೇಳ್ವೆ ನಾನು ॥
ಭೃತ್ಯರೇ ಕೇಳಿರಿಮಾ ಮರ್ತ್ಯಭಾವವು ದೊರೆದು
ದತ್ಯಧಿಕಜನ್ಮಾಂತರದ ಫಲವಿದೆಂದರಿದು
ಸತ್ಯವುಪಕೃತಿ ಶಮವು ದಮವು ಸೈರಣೆ ಶಾಂತಿ ಮೊದಲಾದ ಸದ್ಗುಣಗಳು ॥೩೩॥

ನೆಲಸುವಂತಲಸದಲೆ ಯತ್ನವನು ಗೈವುದಿದು
ನೆಲದೊಳಗೆ ಮನುಜನಿಗೆ ಮುಖ್ಯಧರ್ಮವದಾಗ
ಲೊಲಿದಾವನರನಿದಂ ಗೈಯ್ಯದೊಡೆ ಜಗದೊಳಗೆ ವ್ಯರ್ಥವಹುದವನುದಯವು ॥
ಎಲೆ ಶಿಷ್ಯರೇ ನೀವುಮುಪಕಾರಣಂ ಭರದಿ
ಸಲುವ ಸುಗುಣಗಳಗಣದುಪಾರ್ಜನೆಗೆ ಯತ್ನವ
ನ್ನಲಸಿಕೆಯನಿಗಳೆದು ಗೈದಲಘುಸೌಖ್ಯವನು ಪಡೆಯಿರೈ ನೀವು ಜಗದಿ ॥೩೪॥

ಕತ್ತುರಿಯು ಮೃಗದ ಪೊಕ್ಕುಳದ ಮಲವಾದೊಡಂ
ಮತ್ತೆ ಮಧು ಜೇನ್ನೊಣಗಳೆಂಜಲವದಾದೊಡಂ
ಮುತ್ತಿದಿನಿಗಂಪಿನೊಳ್ಗುಣದಿಂದಲೊಳ್ಳಿತೆನಿಸಿದಿಪ್ಪ ಗುಣದಿಂದ ಕ್ರಮದೆ ॥
ಎತ್ತಲುಂ ಮಾನ್ಯವಾಗಿಪ್ಪವೆರಡುಂ ಮೇಣು
ಸುತ್ತಲುಂ ಪೋಳ್ದೊಡಂ ರತ್ನಂಗಳುಂ ತವೊ
ಳುತ್ತಮದ ಗುಣವನೊಳಕೊಂಡ ಕತದಿಂದಲಾ ಸುಂದರಿಯುರೆದೆಯೊಳಿಹವು ॥೩೫॥

ಮತ್ತಮುಸುರ್ವೆನು ಕೇಳಿಮುತ್ತಮರೆ ಜಗದೊಳಗೆ
ವಿತ್ತಮೆನಿತಿರ್ದೊಡೇಂ ಮಾನವನು ಸುಗುಣಗಳ
ಮೊತ್ತದೊಳಗೊಂದಾದೊಡಂ ಸುಗುಣವಿರದಿರ್ದೊಡವನೆಂತು ಮಾನ್ಯನಹನು ॥
ಚಿತ್ತದೊಳು ಸೂಕ್ಷ್ಮದಿಂದರಿದೊಡೀ ಜಗದೊಳಗೆ
ವಿತ್ತದಿಂ ಮರ್ಯಾದೆಯೊಂದೂರೊಳಲ್ಲದೇ
ನೆತ್ತಲುಂ ಗುಣದಿಂದಲುಂಟಾದ ಪಾಂಗಿನಂತೇನಪ್ಪುದೇ ನರನಿಗೆ ॥೩೬॥

ಅದರಿಂದ ಹಣಕಿಂತ ಗುಣವೆ ಜಗದೊಳು ಮಿಗಿಲಿ-
ಹುದು ತಿಳಿವಡೀ ಹಣವು ಕ್ಷಣದನಿತು ವರ್ತಿಪುದು
ಸಮಗುಣವಮಂಗಭಂಗವದಾದೊಡಕ್ಷಯವೆ ಅದರಿಂದ ಗುಣವಧಿಕವು ॥
ಸಮಗುಣಗಳಿಂದ ನರನಾರಿಯರು ಸಜ್ಜನರು
ಹದಿಬದೆಯರೆಂದುಪವಿಡಿದೆಸೆದರದರಿಂದ
ಚದುರರೇ ನೀವು ಸದ್ಗುಣಗಣವ ಸಂಗ್ರಹಿಸಿ ಪಡೆಯಿರೈ ಸದ್ಗತಿಯನು ॥೩೭॥

ಗುಣಗಳೆನಿಪ್ಪೊಡೆ ಮುಕ್ತಿ ವಧುವಿಂಗೆ ರತ್ನಭೂ
ಷಣರಾಗುವಡೆ ಮೇಣು ಭಕ್ತಿರಮಣಿಯು ಶಿರೋ
ಮಣಿಗಳೆನಿಪ್ಪೊಡೆ ಪರರ ನಿಂದೆಯುಂ ಸ್ವೀಯಪೌರುಷವನುಂ ಗೈಯ್ಯದಿಹುವು ॥
ಗುಣವದಿಲ್ಲದೊಡಧೋಗತಿಯಹುದು ಪರಮ ಸ
ದ್ಗುಣಮುಳ್ಳೊಡಾ ಸ್ವರ್ಗವಪವರ್ಗವೆರಡಹವು
ಗುಣವಂತರಾದೊಡೀ ಜಗವದನುಗುಣವಹುದು ಗುಣದಿಂದ ಜಸವಡೆಯಿರೈ ॥೩೮॥

ಸತ್ಯಗುಣಕಾ ಹರಿಶ್ಚಂದ್ರ ಭೂಪತಿಯು ತನ್ನ-
ಪತ್ಯನಂ ಸತಿಯಳಂ ತನ್ನನುಂ ಮಾರನೇ
ಸ್ತುತ್ಯ ಜೀಮೂತವಾಹನನೆಂಬ ಗಂಧರ್ವನುಪಕಾರಗುಣಕಂಗವ ॥
ಅತ್ಯಧಿಕ ಹರ್ಷದಿಂದೀಯನೆ ಮಹೀತಳದಿ
ಯತ್ಯಧಿಪನಹ ಶಮೀಕನು ಶಾಂತಿಗುಣಕಾಗಿ
ಭೃತ್ಯನಹ ತನ್ನ ಸುತನನ್ನು ಮೂದಲಿಸನೇ ಪಿಂದಣವರನ್ನರಿಯರೇ ॥೩೯॥

ಎಂದುಮಿಂತೆಲ್ಲರಿಗೆ ಮಡಿವಾಳಶಿವಯೋಗಿ
ಸಂದಮಂಗಾನಂದದಿಂ ಬೋಧಗೈಯುತ್ತಿರೆ
ಮಂದಿಯೆಲ್ಲರು ನಾವೆ ಧನ್ಯರು ಮಹಾಮಾನ್ಯರೆಂದವರನುಗ್ರಹವನು ॥
ಚಂದದಿಂ ಬಣ್ಣಿಸಲು ನಾರಾಯಣನು ತಾನು
ಬಂದಿರುವ ಗುರುವಿಂಗೆ ಮಠವೊಂದನಂ ಭಕ್ತಿ
ಯಿಂದ ನಿರ್ಮಿಸಿಕೊಟ್ಟು ತೇರೊಂದನಣಿಮಾಡಿ ಪ್ರತಿವರ್ಷವದನೆಳೆವನು ॥೪೦॥

ಒಕ್ಕುಂದದೊಳಗಿಪ್ಪ ಶಿವಲಿಂಗನಾಯಕನು
ಮುಕ್ಕಣ್ಣನವತಾರಿ ಮಡಿವಳರ ವಾರ್ತೆಯಂ
ಗಕ್ಕನೇ ಕೇಳುತ್ತಮವರನಿಲ್ಲಿಗೆ ಬಿಜಯಗೈಸಲುಜ್ಜುಗಿಸಿ ತಾನು ॥
ತಕ್ಕ ಪಲ್ಲಕ್ಕಿಯುಪ್ಪರಂಗಳಂ ಪಿಡಿದು ಮೇ
ಲಕ್ಕರದೊಳಾ ಹೊಸೂರಿಗೆ ಬಂದು ಗುರುಪದಯು
ಗಕ್ಕೆರಗಿ ಕಾಣ್ಕೆಗೊಟ್ಟವನಂದು ಕೈಮುಗಿದು ಬಿನ್ನೈಸಿದನು ಮೋದದಿ ॥೪೧॥

ತಂದೆ ಮನದಂದು ನಾನಿಂದು ಗಡ ನಿಮ್ಮನೊ
ಕ್ಕುಂದಕ್ಕೆ ಬಿಜಯಗೈದಿಸಲು ಬಂದಿಹೆನು ಗುರುವೆ
ಬಂದೆನ್ನನುದ್ಧರಿಪ್ಪದೆಂದವನು ಬಿನ್ನೈಸಲದಕೊಪ್ಪಿ ಗುರುರಾಯನು ॥
ಬಂದ ಶಿವಲಿಂಗಪ್ಪನೊಂದಿಗಾ ಗ್ರಾಮಕ್ಕೆ
ತಂದವನ ಭಕ್ತಿಯೊಳು ಸಂದು ಲಿಂಗಾನಂದ
ತುಂದಿಲಸ್ವಾಂತನಾಗಿರೆ ತದುಪಚಾರಕ್ಕೆ ಶಿವಲಿಂಗ ಸದ್ಭಕ್ತನು ॥೪೨॥

ತರಗಾರ ಶಿವಲಿಂಗ ಹೂಗಾರ ಗಂಗಪನು
ಚರರೀರ್ವರಲ್ಲದಾ ಹಳ್ಳಿಮುದಕಪನು ಮೂ
ವರಸನುಚರರನ್ನು ನೇಮಿಸಲ್ಕವರು ಮೂವರು ಸೇವೆಗೈಯುತ್ತಿರಲು ॥
ಇರದೊಂದು ದಿನವಿವರು ಯೋಚಿಸಿದರೆಂತೆನಲು
ಗುರುವರರು ಮಡಿವಳರು ಸಳಮಳೆಂಬುವ ನೀರ
ನೆರೆದುಕೊಳ್ಳುವರಂತೆ ಬಡಿವಾರ ಮಾತನಿದನರಿವುನೆಂದಾ ನೀಚರು ॥೪೩॥

ಕೊಪ್ಪರಿಗೆಯನ್ನಿಟ್ಟು ನೀರ್ದುಂಬಿಯುರಿಹಚ್ಚಿ
ಯೊಪ್ಪದಿಂ ಸಳಮಳೆಂಬಂತೆ ನೀರ್ಗಾಸಿ ತಾ
ವಿಪ್ಪಿನಂ ಸರ್ವಜ್ಞ ಗುರುಗಳಲ್ಲಿಗೆ ಬಂದು ನೀರನೀಕ್ಷಿಸುತೆಂದರು ॥
ಅಪ್ಪಗಳಿರಾ ನೀರು ತಣ್ಣಗಿವೆ ನೀವಿನ್ನು ಮಿಂಗೆ
ತಪ್ಪದುರಿಹಚ್ಚಿರೆನಲಪ್ಪಪ್ಪ ಗುರುಗಳಿವ
ರಪ್ಪುವಂ ಕೈಯಿಕ್ಕಿ ನೋಡದೆಮಗಿನ್ನುಮುರಿಹಚ್ಚಿರೆಂದುಸುರ್ವರಿವರು ।೪೪॥

ಇವರಿಗಿಂದೆಮ್ಮೊಂದು ಕೈಯ ತೋರಿಸವೇಳ್ಕು
ಮಿಷರ ದೊಡ್ಡಿತನವ ತಿಳಿಯಲೆಂದಾ ಮೂವ
ರವರುರಿಯಹಚ್ಚಿ ಕಾಸಲು ನೀರು ತಕಪಕನೆ ಕುದಿಯಲಿತ್ತಾ ಗುರುಗಳು ॥
ಜವದಿ ಭದ್ರಾಕರಣವನು ಗೈಯ್ಸಿ ಮೂವರಿಂ
ತವೆ ತೈಲವನು ಮೈಗೆ ಪೂಸಿಸಿ ಮಹಾಮಹಿಮ
ರವರು ಬಚ್ಚಲ ಮನೆಗೆ ಬಂದು ಕುಳ್ಳಿರಲು ಬಳಿಕಾ ಸೇವಕರು ಮೂವರು ॥೪೫॥

ಮಹಿಮರೊಡನತಿ ಸರಸವಾಡುತಿರಲದು ಕಡೆಗೆ
ವಿಹಿತವಾಗದೆ ವಿರಸವಾದಪ್ಪುದೆಂದರಿಯು
ದಹಿತವೆಳಸಿರ್ಪವರು ಕವಲೊಡೆದ ಬಿದರಿಂಗೆ ಮಗಿಗಟ್ಟಿ ಸುರಿಯಲೆಂದು ॥
ಅಹಿ ಭೂಷನವತಾರಿಯಿನ್ನುಮುರಿಹಚ್ಚಿರೆನ
ಲಹಹ ಮತ್ತುರಿ ಹಚ್ಚಿ ಮಗಿಗಳೆರಡಂ ಸುರಿಯೆ
ಮಹಿಮರ ಮಹತ್ವವನು ನೀಚರಿವರರಿವರೇನಿಂತು ಮೂರ್ಖಗಿ ಸುರಿದರು ॥೪೬॥

ಮಗಿಗೆಂದರಂತೆ ಮೂರ್ಖಗಿಗಳಿಗೆ ಮೂವರ ಮ
ನೆಗಳಿಗುರಿಪತ್ತುತಿರಲದ ಕೇಳಿ ಮೂವರಿವ
ರಗಿದೋಡುವನಿತಕ್ಕೆ ಛೀ ಬನ್ನಿ ತಣ್ಣೀರ ಕೊಪರಿಗೆಯೊಳು ಸುರಿಯಿರಿ ॥
ಬಗೆದಂತೆ ತಂಣೀರ ಸುರಿಯೆ ಮನೆಗಳ ಬೆಂಕಿ
ಯುಗಲಿದುದು ಜನರಾಗ ಕಂಣಾರೆ ಕಂಡು ಬೆರ
ಗಾಗೆ ಮಹಿಮರನಂದು ಭಕ್ತಿಯಿಂ ಬಣ್ಣಿಸುತ್ತವರಂಘ್ರಿಗೆರಗಿದರಲಾ ॥೪೭॥

ಖೂಳರಾದಿವರು ಮೂವರು ಮೊದಲು ಯೋಗಿಮಡಿ
ವಾಳರೂಳಿಗಕೆ ಬರ್ಪವಸರದೊಳತಿ ವಿನಯ
ಶಾಲಿಗಳು ತಾವೆನಿಸಿ ಯೋಗಿಯುನ್ನತಿಗಳೆವರಾ ಮುಳ್ಳಿನಂತೆಂತೆನೆ ॥
ಬಾಳಮಾತೇಂ ಮೊದಲು ಮುಳ್ಳುದುರಿ ಮಾರ್ದವಂ
ದಾಳಿಯಾಬಳಿಕವುದು ಬೆಟ್ಟಿತಪ್ಪುದು ಲೋಕ
ಜಾಲವೆಲ್ಲಕ್ಕೆ ಮನಗಂಡ ಮಾತಿದು ಮೂವರಾದರಾ ಮುಳ್ಳಿನಂತೆ ॥೪೮॥

ಮೂವರಿಗೆ ಮನದೊಳಗೆ ನೋವಾಗಿ ಮಡಿವಾಳ
ದೇವರಿಗೆ ವಂದಿಸುತೆ ತಪ್ಪಿಂಗೆ ಕ್ಷಮೆಯುನ್ನು
ಸಾವಧಾನದಿ ಬೇಡಿ ಗುರುವಿಂಗೆ ಮಜ್ಜನವ ಗೈಸಿದರು ಭಕ್ತಿಯಿಂದ ॥
ಪಾವನಾತ್ಮಕಯೋಗಿವರನ ಮಹಿಮೆಯನೂರ
ಭಾವಿಕರು ಮನಗಂಡು ತಾವಂದು ಮೊದಲುಗೊಂ
ಡಾ ವಿಶ್ವತಾರಕನ ಭವಭಯನಿವಾರಕನ ಭಕ್ತಿಯೊಳು ಸಂದರವರು ॥೪೯॥

ಕಂಗೊಳಿಪ ಶಿವಪೇಟೆಯೆಂಬ ಗ್ರಾಮದ ಮಹಾ
ಲಿಂಗಮೂರ್ತಿಯು ಭರದೊಳೊಕ್ಕುಂದ ಗ್ರಾಮಕ್ಕೆ
ಮಂಗಳಾತ್ಮಕಯೋಗಿ ಪುಂಗವನ ಕಾಣಲೆಂದೈತಂದು ಭಕ್ತಿಯಿಂದ ।।
ಜಂಗಮಾಗ್ರಸರ ಮಡಿವಾಳರ ಪದಯುಗಕೆ ಸಾ
ಷ್ಟಾಂಗಪ್ರಣಾಮವನುಗೈದು ಕೈಮುಗಿದು ನಿಲೆ
ತುಂಗಮಹಿಮಾತ್ಮನೇವಂದಿರೆನಲಾ ಮೂರ್ತಿ ಬೇಡಿದನು ತಾನೆಂತೆನೆ ೫೦॥

ಮನದಿಷ್ಟಗಾಡುವಿರೆಂದನುವರದಿ ಬಂದಿಹೆನು
ಘನಮಹಿಮರೇ ಕೇಳಿ ಲಕ್ಷರೂಪಾಯಿ ಬೇ
ಕೆನಲು ವಿರತರು ನಾವು ಹೊನ್ನು ಹೆಣ್ಣು ಮಣ್ಣುಗಳ ಕನಸಿನೊಳಗೆಳೆಸೆವು ಗಡಾ ॥
ಜನವರಿಯಲಿಲ್ಲಿಂದ ಚಿತ್ರದುರ್ಗಕೆ ಪೋಗು
ಮನದಿಷ್ಟವಹುದೆನಲು ಮಾಲಿಂಗಮೂರ್ತಿಯುಂ
ಘನಮಹಿಮರುಕ್ತಿಯಂತಾ ಚಿತ್ರದುರ್ಗಕೈತಪ್ಪುವನ್ನೆಗಮಲ್ಲಿಯು ॥೫೧॥

ವರಜಗದ್ಗುರುವಪ್ಪ ಮುರುಘೇಂದ್ರಸ್ವಾಮಿಗಳ
ವರಶರೀರದೊಳಾಗ ಸ್ವಸ್ಥತೆಯದಿಲ್ಲದಿರು
ತಿರಲುತ್ತರಾಧಿಕಾರಕೆ ಶಿಷ್ಯನೋರ್ವನಂ ಪುಡುಕಲಿವರಂ ಕಾಣುತೆ ॥
ಮುರುಘರವರಂತರಜ್ಞಾನದಿಂದಿವರನ್ನೆ
ನಿರಣಿಸಲು ಬಳಿಕ ಪಟ್ಟಪಗಟ್ಟಿ ಮಾಲಿಂಗ-
ಚರವರರು ಘನಮಹಿಮ ಮಡಿವಾಳಯೋಗಿವಚನವನಂದು ನೆನೆ ನೆನೆವುತೆ ॥೫೨॥

ಮೂಡಣುದಯಿಪ ತರಣಿ ಪಡುವಣುದಯಿಸಿದೊಡಂ
ನಾಡೆ ಸರಸಿಜವರೆಯೊಳರಳಿದೊಡಮಗ್ನಿಯುಂ
ನೋಡೆ ಶೈತ್ಯಂಗೂಡಿದೊಡಮಾ ಮಹಾಮಹಿಮರುಕ್ತಿಯದು ಪುಸಿಯಾಗದು ॥
ಜೋಡಿರದ ಚಿತ್ರದುರ್ಗದ ಪೀಠವೆನಗೆ ಕೈ
ಗೂಡಿದುದು ಸಕಲ ಸೌಭಾಗ್ಯವೊಡಗೂಡಿದುದು
ಜೋಡಿರದ ಮಡಿವಾಳಶಿವಯೋಗಿವಚನದಿಂದಿಂತಾದುದೆಂದರವರು ॥೫೩॥

ಒಂದು ದಿನ ಶಿವಲಿಂಗನಾಯಕನ ನಟ್ಟಿರುಳು
ಬಂದೆಬ್ಬಿಸೆಲೆ ಮಗನೆ ಪೊಲದೊಳಗೆ ಕಳ್ಳರೈ
ತಂದು ಹೂಳಿದ ಧನವನಂಜನದ ಬಲದಿಂದ ತೆಗೆವರೈ ಪೋಗೀಗಳೇ ॥
ಎಂದು ಮಡಿವಳಯೋಗಿ ಸೂಚಿಸಲು ನಾಯಕನು
ಮಂದಿಯೊಡಗೂಡಿ ಪೊಲಕೈತರಲು ಕಳ್ಳರವ
ರಂದು ತಗೆದಿಟ್ಟ ಹಣಗೊಡವನುಳಿನೋಡಲಿವರು ಕೊಡವ ಕೊಂಡು ಬರಲು ೫೪॥

ನೋಡಿ ದ್ರವ್ಯದ ಕೊಡವ ಶಿವಲಿಂಗನಾಯಕನಿ
ಗಾಡಿದರು ಮಡಿವಳರು ಬೇಡ ಹಣವಿದು ನಿನಗೆ
ನಾಡಜನರೆಲ್ಲರಿಗೆ ಕೊಟ್ಟು ಪುಣ್ಯವ ಗಳಿಸಿ ಪಡೆ ನೀನು ಸದ್ಗತಿಯನು ॥
ನಾಡೆಯಿಂತುಸುರಲವನಂತೆಲ್ಲ ಧನವನೀ
ಡಾಡಿದನು ಬಡವರಿಗನಾಥರಿಗೆ ತಾನೆನ
ಲ್ಕಾಡಲೇನಾನೀಗ ಮಡಿವಾಳಶಿವಯೋಗಿಸಂಗದಿಂದಾದ ಫಲವ ॥೫೫॥

ಜಗದೊಳಗೆ ಶೂರರುಂ ಸಾವಿರಾರುಂಟು ಮೇ
ಣಗಣಿತದ ಪುಣ್ಯಾತ್ಮರುಂ ಜಗವ ತುಂಬಿಹರು
ಸುಗುಣವಲ್ಲದ ವಿಷಯ ವಿರತಿಯುಳ್ಳ ಶಾಂತರಂತರಂಗಾಣದಲ್ಲಿಪ್ಪರು ॥
ಬಗೆಯೆ ತನ್ನಸುವಿಗಿಂತಲು ಕರಂ ಮಿಗಿಲಾದ
ರ್ಘುಗರ್ಘುಗಿಪ ಧನವನ್ನು ಬಗೆಯಿಂದ ಕೈಯಿಂದ
ಮಿಗೆ ಮುಟ್ಟದಿಹನಾವನವನೆ ದುರ್ಲಭನು ಮೇಣವನೆ ಭುವನಾಭರಣನು ॥೫೬॥

ಸಿಕ್ಕಿರುವ ಹಣವ ತಾ ಲೆಕ್ಕಿಸದೆ ಮನದೊಳಗೆ
ಮುಕ್ಕಣ್ಣನವತಾರಿಯಪ್ಪ ಮಡಿವಾಳಯತಿಯ
ವಾಕ್ಯ ಕೇಳುತೆ ಹಣವನಕ್ಕರಿಂ ಬಡವರಿಗೆ ಕೊಟ್ಟ ಶಿವಲಿಂಗಪ್ಪನು ॥
ಮಿಕ್ಕಮಾತೇನಿವನು ಜಾವಳನೆ ಜಗದೊಳಗೆ
ಲೆಕ್ಕಿಸಲು ಗುರುಭಕ್ತನಿವನಲ್ಲದಾರೊಳರು
ಮಿಕ್ಕದರ ಗುಂಪಿನೊಳಗಿವನೆ ತಕ್ಕವನಲ್ಲ ಧನ್ಯರ್ರಾದನ್ಯಹರು ॥೫೭॥

ಚಂದದೊಕ್ಕಂದದೊಳಗಿಪ್ಪ ಮಡಿವಾಳಗುರು
ಪೊಂದುದಿನ ನಡುವಿರುಳು ಸುಮಹಾಬಲೇಶ್ವರನೆ
ಎಂದು ನಾಮಸ್ಮರಣಗೈವುತ್ತೆ ಪೊರಬೀಳ್ದು ಪೋಗುತಿರ್ಪನಮೂರೊಳು ॥
ಒಂದು ಮನೆಯೊಳಗಿಂದ ಬಂದ ಶಿವರುದ್ರಪ್ಪ
ನೆಂದೆನಿಪ ಹಡಪಿಗನು ಗುರುವರರ ಮುಖಶಬ್ದ
ದಂದದಾ ರವವನ್ನು ಕೇಳಿ ಬೆಂಬತ್ತೆ ಗುರು ನದಿಯೊಳಗೆ ಧುಮುಕಿ ಪೋಗೆ ॥೫೮

ಆಗಳಾ ಹಡಪಿಗನು ಮರಳಿಬಂದೂರೊಳಗೆ
ಹೋಗಿ ತಾನೆಲ್ಲರಿಗೆ ಗುರುವಾರ್ತೆಯಂ ತಿಳುಹೆ
ಸಾಗಿ ಜನರೆಲ್ಲರುಂ ಗುರುಗಳಿದ್ದೆಡೆಗೈದಿ ಬಿಜಯಗೈಯ್ಯಲು ಬೇಳ್ದರು ॥
ನಾಗ ಚರ್ಮವತಾಳ್ದನವತಾರವಾಂತ ಶಿವ
ಯೋಗಿಯಿಲ್ಲಿರ್ಪನಲ್ಲೊಲ್ಲೆನಲ್ಕೆಲ್ಲರವ
ರಾಗ ನಿರುಪಾಯರಾಗುತ್ತಮೈತಂದು ಕಡುದುಗುಡನೊಪಗೊಂಡಿರ್ದರು ॥೫೯॥

ಬೈಲೊಳಗೆ ಕುಳಿತಿರ್ದ ಗುರುದೇವಮಡಿವಳರ
ಮೇಲೆ ಹಡಪಿಗನಾಗ ಗೂಡಾರವಂ ಪೊಡೆದು
ಲೀಲೆಯಿಂ ಗುರುಭಕ್ತನಾಗಿ ಸೇವೆಯ ಗೈವುತಿರಲಾಗ ಶಿವಯೋಗಿಯು ॥
ಆಲಿಸೆಲೆ ಶಿವರುದ್ರ ನಿನ್ನೋರ್ವನನೆ ಬಿಟ್ಟು
ಕಾಲಿಗಾಣತಿಯಿತ್ತು ಪೋದರುಳಿದವರಿಂದು
ಪೇಳಲೇನವರ ಗುರುಭಕ್ತಿ ಪ್ರಭಾವವದು ಡಾಂಭಿಕವದಲ್ಲವೇನೋ ॥೬೦॥

ಡಾಂಭಿಕದ ಭಕ್ತಿಯಿಂ ಶಂಭುವೇನೊಲಿವನೇ
ಕುಂಭಿನಿಯೊಳಿಂತಪ್ಪ ಡಾಂಭಿಕದ ಭಕ್ತಿಯಂ
ಶಂಭುಶರಣರು ತಾವು ಮೆಚ್ಚುವರೆ ಲವದಿನಿತು ಸಾಕು ಸಹಜದ ಭಕ್ತಿಯೇ ॥
ಶುಂಭಮರುಭಕ್ತಿಯೆಂತೆಂದೊಡಾನುಸುರ್ವೆ ಕೇಳ್
ಬಂಭರ ಶ್ಯಾಮಕಂಧರನ ಪುರಹರನ ಚರ
ಣಾಂಭೋಜದೊಳು ಮನೋವೃತ್ತಿಯುಚ್ಚ್ರಿತ್ತಿದಂತಿರಲದುವೆ ಭಕ್ತಿಯೈಸೆ ॥೬೧॥

ಪಂಚಮಃ ಪುರುಷಾರ್ಥ ಇತ್ಯುಕ್ತಿಯಿದುವೆನಿ
ರ್ವಂಚನದ ಭಕ್ತಿಪ್ರಶಸ್ತಿಯಂ ಪೇಳ್ಗುಮದ
ನಂ ಜಿತಾತ್ಮರು ಮಹಾಶಿವಶರಣರುಂ ಮೋಕ್ಷಕಿಂತಧಿಕವೆಂದೊರೆವರು ॥
ಸಂಚಿತಾಗಾಮಿ ಕರ್ಮವನೆರಡಸತಿಗಳೆದು
ಮಿಂಚುಮೀ ಪ್ರಾರಬ್ಧವನು ಲಿಂಗಮುಖದಿಂದ
ವಂಚಿಸದಲುಣುವರು ಶರೀರಂಬರಂಬಿಡದೆ ಸಮರಸದ ಭಕ್ತಿಯಿಂದ
(ಲಿಂಗಾಂಗವೆರಡೆನಿಸದೆ) ॥೬೨॥

ಕೊಡುವ ಕೊಂಬುವರೀರ್ವರುಂ ಬೇರಿಲ್ಲ
ಬಿಡದಲುಣಿಸುಣುವವನು ಗಡ ಶಿವನೆ ಮೇಣ್
ಪಿಡಿವ ಪಿಡಿಸುವ ಪಿಡಿದ ವಸ್ತುವದುಮಹನೆ ಬೇರಿಲ್ಲೆಂಬುದಿದುವೆ ಸಮರಸಭಕ್ತಿಯು॥
ಹಡಪಿಗನೆ ಶಿವರುದ್ರ ಇಂತಪ್ಪ ಭಕ್ತಿಯಿಂ
ಪಿಡಿದು ವರ್ತಿಪ ನರನೆ ಜಗದೊಳಗೆ ಭವವನವ
ಗಡಿಪ ಪುರಹರನು ಪರತರನು ಹರಿಶರನು ಗಡ ಬೇರಾವನಿಹನು ಹರನು ॥೬೩॥

ಎಲೆ ಕೇಳು ಶಿವರುದ್ರ, ನೀನಿಂತು ಸಮರಸ ವಿ
ಮಲಭಕ್ತಿಯಂ ಪಿಡಿದು ನೀನಿದೊರ್ಡೆಲೆ ನಿನಗೆ ಭವ
ಮಲಹರನು ತಾನೊಲಿವನೆಂದುಸುರೆ ಶಿವರುದ್ರನೊರೆದಂತಿರ್ದನು ॥
ಪಲದಿನದ ಮೇಲೊಂದು ಮಳೆ ಸುರಿಯೆ ತನ್ನೂತ್ತಿ
ನಲಿ ಹರಿವ ಹಳ್ಳಬಂದೊಳಪುಗಲು ಗುರುವರ್ಯ
ರೆಲೆಲೆ ಶಿವರುದ್ರನೆ ಮುಶಪ್ಪನಾ ಗುಡಿಗೆ ನಡೆಯೆನುತಲ್ಲಿಗೈತಂದರು ॥೬೪॥

ಅಲ್ಲಿ ಗುಡಿಯಲ್ಲಿಯೇ ಬಲ್ಲಹರು ಮಡಿವಳರು
ನಿಲ್ಲದೇಗಳುಮೆಸಪ ಭಜನೆ ಗೈವುತ್ತಿರಲು
ಸಲ್ಲುವಾ ಶಿಷ್ಯಶಿವರುದ್ರನೊಳಿಗಗೈಯುಲಿತ್ತೈದು ದಿನದವರೆಗೆ ॥
ಎಲ್ಲಿ ನೋಡಿದಡಲ್ಲಿ ಬಲ್ಲಿತದ ಮಳೆಯು ತಾ
ಕಲ್ಲಿನಂದದಿ ಸುರಿಯುತಿರೆ ಹಳ್ಳ ಕೊಳ್ಳಂಗ
ಳಿಲ್ಲಪ್ಪೊಂದಾಗೆ ನದಿ ಮೇಲ್ವರಿವುತೂರೊಳಗೆ ಪುಗೆ ಜನರು ಭಯಗೊಂಡರು ॥೬೫॥

ಎನ್ನ ಮನೆ ತನ್ನ ಮನೆ ಪೊಕ್ಕಿದುದು ನೀರ್‌ನದಿಯು
ದಿನ್ನೆಲ್ಲಿಗೈವುದೈ ಬನ್ನಿರೆಲ್ಲರು ಬೇಗ
ಬನ್ನಬಡುತಿಪ್ಪವೀ ಕಡೆ ನೋಡಿ ಮಕ್ಕಳುಂ ಮುಳುಗುವವು ದನಕರಗಳು ॥
ಬನ್ನಿರೈ ವಿರತಿಸಂಪನ್ನ ಮಡಿವಳಗುರುವಿ
ನನ್ನು ಮರೆಹೊಕ್ಕೀಗ ಬದುಕವೇಳ್ಕೆಂದೆಲ್ಲ
ರೆನ್ನುತ್ತಮೊಕ್ಕುಂದ ಜನರೆಲ್ಲರಾ ಯೋಗಿಯೆಡೆಗೈದಿ ವಂದಿಸುತ್ತ ॥೬೬॥

ಯೋಗಿವರ ನದಿಯು ಮೇಲ್ವರಿದು ಬಂದೂರೊಳಗೆ
ಹೋಗಿರ್ಪುದಕಟಕಟ ಬದುಕೆವೈ ನೀನು ಶರ
ಣಾಗೆಂದು ನುಡಿವನಿತರೊಳು ಮುಶಪ್ಪಗುಡಿಯು ಪೊಕ್ಕುದುದು ಪೊಳೆಯ ನೀರು ॥
ರಾಗದಿಂದವರ ನುಡಿಗೇಳಿ ತಾಂ ಮಡಿವಾಳ
ಯೋಗಿ ಬೇಗನೆ ತಾಯೆ ಗಂಗಮ್ಮ ಕೇಳು ನಿನ
ಗೀಗಳನಿತುಂ ದಯವದಿಲ್ಲೇಕೆ ನಡೆಯೆಂದು ಕಾಯೊಡೆದು ನೀರೊಳಿಡಲು ॥ ೬೭॥

ಪಿಂದೋರ್ವ ಮುನಿ ಮುನಿದು ಮುನ್ನೀರ ಕುಡಿದನವ
ನಂದೋರ್ವನಾ ಜಿನ್ನು ಜಾನ್ಹವಿಯನೀಂಟಿದನು
ತಂದೆಯಿಾಮಡಿವಾಳನಿಂದೆನ್ನನೇಗೈವನೆಂದು ಭಯದಿಂದ ನದಿಯು ॥
ಅಂದಿಳಿದು ತನ್ನೊಡಲಗೊಂಡು ಹರಿದುದು ಜನರ
ವೃಂದವದು ಸೊಗಗಡಲೊಳಿಳಿದು ಯೋಗಿಯ ಭಕ್ತಿ
ಯಿಂದ ಕೊಂಡಾಡಿ ನಲಿದಾಡಿ ಗಣತೃಪ್ತಿಯಂ ಮಾಡಿದುದು ಸಡಗರದೊಳು ॥೬೮॥

ದೇವಿ ನಿನ್ನಿಂ ಪುಟ್ಟಿ ದುರುಳತನದಿಂ ಚರಿಸಿ
ದೇವರೆನ್ನದೆ ಗುರುವುಹಿರಿಯರೆನ್ನದೆ ಮೇಣು
ಭಾವದೊಳು ದುರಿತಕರ್ಮವನೆಳಸಿ ದುರ್ಗುಣಿಯು ನಾನಾಗಲೀ ಲೋಕವು ॥
ಪಾವನೆಯು ಪಾರ್ವತಿದೇವಿಯೆಂತಹ ಮಗನ
ನಾ ವಿಮಲೆ ಹೆತ್ತಳೆಂದಾಡಿಕೊಳುವುದು ನಿನಗೆ
ಹೇವವಿಲ್ಲವೆ ತಾಯೆ! ಎನಗೆ ಸದ್ಗುಣಗೊಟ್ಟು ಕಳೆದುಕೊಳ್ಳಪಕೀರ್ತಿಯು ॥೬೯॥

ಶ್ರೀಶಿವಾದ್ವೈತಪರವಿದ್ಯಾನವದ್ಯಾತಿ
ವೈಶದ್ಯ ವಿದ್ಯೋತಮಾನನ ಮಹಾಲಿಂಗ
ದೇಶಿಕಶಿಖಾಮಣಿಯು ಫಾಣಿಕಂಜಾತಸಂಜಾತನು ಕವೀಶದೂತು॥
ಆ ಸದಾಶಿವಕವಿಯು ಭೂಸದಾಶಿವನಯೋ
ಗೀಶನ ವಿಪಾಶನ ನಿರಾಶನನುರು ಮಡಿವಾಳ
ದೇಶಿಕನ ಚರಿತದೊಳಗೊಕ್ಕುಂದಕ್ಕೈದಿದಾ ಹನ್ನೊಂದನೆಯ ಸಂಧಿಯು ॥೭೮॥

ಅಂತು ಸಂಧಿ ಹನ್ನೊಂದಕ್ಕಂ ಪದಂಗಳು ೬೨೭ ಮಂಗಳಂ
ಶ್ರೀ ಶ್ರೀ

## ೧೨ನೆಯ ಸಂಧಿ

ಸೂಚನೆ:— ತಡಕೋಡ ಮೊದಲಾದ ಗ್ರಾಮಗಳ ಸಂಚರಿಸು-
ತೊಡನೆ ತಾನವರವರಭೀಪ್ಸಿತವನಿತ್ತೆಲ್ಲ
ಒಡವರಂ ಬಲ್ಲಿದರನುದ್ಧರಿಸಿ ಮೆರೆದನಾ ಮಡಿವಾಳಶಿವಯೋಗಿಯು ॥

ದೇವಶಿವ ಕಾಲನೆದೆಗೊದೆವುದಾ ಪರ್ವತ
ಗ್ರಾಮದೊಳಗೇಗಳುಂ ಚರಿಪುದುಂ ಕೇಳ್ ಮಹಾ
ದೇವ ದುರಪಸ್ಮಾರ ರೋಗ ಸಮ್ಮರ್ದನವುಮಿವು ಮೊದಲುಗೊಂಡೆಲ್ಲವು ॥
ಭಾವಿಪೊಡೆ ಮೃದುಲತಾವಕ ಚರಣಕಮಲಯುಗ
ಕಾ ವಿಶ್ವಕಾರ್ಯಮುಂಟದರಿಂದಲೆನ್ನ ಸ
ದ್ಭಾವಮಣಿಪಾದುಕೆಯು ಮೆಟ್ಟಿ ನೀಂ ಚರಿಸಿದೊಡೆ ಪಾದಕುಪಹತಿಯಾಗದು ॥೧॥

ಹೂಡಿದಾ ಗಣತೃಪ್ತಿಯಾದ ಮರುದಿನವೆ ತಡ
ಕೋಡ ಗ್ರಾಮಕ್ಕೆ ಬರಲಾ ಯೋಗಿಮಡಿವಳರ
ನೋಡಿ ನರಸಿಂಹಭಟ್ಟನು ರಾಮಭಟ್ಟನಾ ಕೃಷ ಭಟ್ಟನುಮೆಲ್ಲರೂ ॥
ಬಾಡಬರು ಸಡಗರದೊಳಿದಿರ್ಗೊಂಡು ಯೋಗಿಯಂ
ಪಾಡುತ್ತೆ ತಂ ತಮ್ಮ ಭಕ್ತಿದೋರಿಸಿ ಭಜನೆ
ಮಾಡುತ್ತೆ ಕರೆದೊಯ್ದು ತಮ್ಮ ಮನೆಯೊಳಗಿರಿಸುತುಪಚರಿಸಿದರು ಸರ್ವರು ॥೨॥

ತತ್ವಸ್ವರೂಪರುರುತತ್ವವೇತ್ತರು ಸಕಲ
ಸತ್ವದಯಿತರು ಮಹಾಸತ್ವಭರಿತರು ಘನವಿ
ಸ್ಫತ್ವರು ಯಶಃ ಕಾಂತ ದಿಶಾಂತಚಯರು ಘನವೈರಾಗ್ಯ ಭಾಗ್ಯಯುತರು ॥
ಜಿತ್ವರರುಮಿಂದ್ರಿಯಂಗಳನೆಂಬ ವಿಖ್ಯಾತಿ
ಮತ್ತ್ವ ಮಂಡಿತರು ಘನ ಪಂಡಿತರು ಪೀವರ ಮ
ಹತ್ವಾತಿಶಯರು ಕರುಣಾಶಯರು ಮಡಿವಾಳಗುರುವರ್ಯರಿರ್ದರಲ್ಲಿ ॥೩॥

ರಾಮಭಟ್ಟಾದಿಯಾದಾ ಗ್ರಾಮ ಭಟ್ಟರ್ಗೆ
ಪ್ರೇಮದಿಂ ಗುರುವರರು ಮಡಿವಳರು ಪರಮಶಿವ
ನಾಮ ಸಂಕೀರ್ತನಂ ಗೈದವರಿಗುಪದೇಶಗೈದರೆಂತೆನೆ ಪೇಳ್ವೆನು ॥
ಭೂಮಿಯೊಳು ಮಾನವರ ಭವವಿಮೋಚನೆಯದುವೆ
ಶ್ಯಾಮಕಂಠನ ಶಿವನ ಜ್ಞಾನದಿಂಪ್ಪದೆಂ
ದಾ ಮಹಾಜ್ಞಾನೇನ ಕೈವಲ್ಯವೆಂದುಮುಪನಿಷದ್ದುಂದುಭಿಯದು ॥೪॥

ಜ್ಞಾನವೊಂದಕೆ ಶಿವಜ್ಞಾನವಾತ್ಮಜ್ಞಾನ
ಪೂನವಾಗದು ಮಹಾಜ್ಞಾನ ತತ್ವಜ್ಞಾನ
ವೇನೊರೆವೆನಾಂ ಬ್ರಹ್ಮ ಸುಜ್ಞಾನವೆಂದಿಂತು ಪರ್ಯಾಯ ನಾಮಂಗಳು ॥
ನೂನವಿಹಪರಿ ಶಿವಜ್ಞಾನಮಂ ದೊರಕಿಸದ
ಮಾನವನು ಬ್ರಾಹ್ಮಣನುಮೆನಿಸಿರ್ದೊಡಂ ತಾನು
ಹೀನವಂಶದ ಶ್ವಪಚನವನೆ ಅಧಮಾಧಮನು ನೀವೆಲ್ಲರಿಂತರಿಯಿರೈ ॥೫॥

ಬ್ರಹ್ಮ ಯೋ ವೇದ ಸ ಬ್ರಾಹ್ಮಣ ಇತಿ ಶ್ರುತಿ
ಬ್ರಾಹ್ಮಣನ ಲಕ್ಷಣವನೊರೆಗುಮುದರಿಂದವನೆ
ಬ್ರಹ್ಮವಿದನವನೆ ಸತ್ಕುಲಜನವನೇ ಧರಾಸುರನವನೆ ಬಗೆಗೊಂಡಡೆ ॥
ಕಮ್ಮರನು ಕಬ್ಬಿಲನು ಮಾದಿಗನು ಶ್ವಪಚನುಂ
ಬ್ರಹ್ಮಸದ್‌ಜ್ಞಾನದಿಂದಖಿಲ ತಾಪಸವರರು
ಬ್ರಾಹ್ಮಣರು ತಾವಾದರೆನೆ ನಿಮಗೆ ತದ್ಗೋತ್ರಜನರಿಗೆ ಬೇಡವೇ ಜ್ಞಾನವು ॥೬॥

ಸ್ವಾನುಭೂತಿ ಜ್ಞಾನವುಪಪತ್ತಿ ನಾಮಕ
ಜ್ಞಾನವೆಂದಿಂತೆರಡು ತೆರವಾಗಿ ಶೋಭಿಸಲ್
ಜ್ಞಾನವದು ಬಳಿಕಹಂ ಬ್ರಹ್ಮಾಸ್ಮಿಯೆಂಬುದೇ ಸ್ವಾನುಭೂತಿಜ್ಞಾನವು ।
ನೂನವುಪಪತ್ತ್ಯಭಿಜ್ಞಾನವದು ತಾ ತಿಳಿಯೆ
ತಾನು ಸರ್ವಂ ಖಲ್ವಿದಂ ಬ್ರಹ್ಮವೆಂಬುದೇ
ಜ್ಞಾನಿಸುತವಿಂದನಿಂತು ಬಗೆಯೊಳಗೆ ನಿಜವಾದ ಬ್ರಾಹ್ಮಣರು ನೀವಾಗಿರೈ ॥೭॥

ನಿರಪೇಕ್ಷೆಯಿಂದಹುದು ಲೋಕಶುದ್ಧಿಯು ನಿಮಗೆ
ದೊರಕುವದು ಕಾಯಶುದ್ಧಿಯು ಸದಾಚಾರದಿಂ
ವರದಯಾಧರ್ಮದಿಂ ಜ್ಞಾನಶುದ್ಧಿಯು ನಿಗರ್ವದೊಳು ವಿದ್ಯಾಶುದ್ಧಿಯು ।
ನಿರಪೇಕ್ಷೆಯಿಂ ಸದಾಚಾರದಿಂ ಘನದಯಾ
ಪರತೆಯಿಂ ನಿರಭಿಮಾನತೆಯಿಂದ ವರ್ತಿಪೊಡೆ
ವರಭೋಗ ಮೋಕ್ಷಂಗಳೊದಗುವವು ನೀವೆಲ್ಲರಿದನರಿದು ಬಾಳಿರಯ್ಯ ॥೮॥

ಇಂತು ಮಹಿಮಾಶ್ರಾಂತ ಮಡಿವಳರು ಗುರುವರರು
ಸಂತತಂ ರಾಮಭಟ್ಟನು ಮೊದಲು ಬ್ರಾಹ್ಮಣರ
ಸಂತತಿಗೆ ಶಿವತತ್ವಸಾರವನು ನಿರವಿಸುತೆ ಸಂತಸದಿ ತಾವಿರ್ಪನಂ ॥
ಭ್ರಾಂತಿಯಂ ನೀಗಿ ವೇದಾಂತತತ್ವವ ತಿಳಿದು
ಶಾಂತಿಯಾಂತಿಹ ನಿಜಸ್ವಾಂತದೊಳು ಶಿವಯೋಗಿ
ಶಾಂತರಡಿಯಂ ನೆನೆದು ರಾಮಭಟ್ಟನು ಸದಾ ಸೇವೆಯೊಳಗಿರ್ಪನ್ನೆಗಮ್ ॥೯॥

ಬಂದೊದಗಿದುದು ಪಿತೃಶ್ರಾದ್ಧದಿನವೊಂದು ಬಳಿ
ಕಂದು ತಾಂ ರಾಮಭಟ್ಟನು ಸುತ್ತಣೂರಿಗೈ
ತಂದು ಬ್ರಾಹ್ಮಣರಿಗಾಮಂತ್ರಣವನೀಯಲವರೈತಂದರಾ ಪೊಳ್ತಿಗೆ ॥
ಇಂದುಧರನವತಾರಿ ಯೋಗಿಯಂ ಕಂಡವರು
ಸಂದೆಗಂ ಗೊಂದಿವನ ಪಂತಿಯೊಳು ನಾವೆಂತು
ಬಂದುಂಬುವುದು ಪೇಳಿರೆಂದಾಗ ತಮ್ಮೊಳಗೆ ಗುಜುಗುಟ್ಟಿದರು ಸರ್ವರು ॥೧೦॥

ಪಂತಿಯಂ ಪಾವನಂ ಗೈವ ಶಿವಯೋಗಿಯುಂ
ಪಂಕ್ತಿಬಾಹಿರನೆಂದು ಹಾರುವರು ನುಡಿವುತಂ
ಸಂತಸದಿ ಮಜ್ಜನಂ ಗೈದೂಟಕಣಿಯಾಗಿ ಕುಳಿತರೆಲ್ಲರು ಬೇಗನೆ ॥
ಶಾಂತ ಸರ್ವಜ್ಞ ಗುರುವಿಂತವರ ಹಾರುವರ
ಭ್ರಾಂತರೆಲ್ಲರ ಹೃದಯದಂತರದ ಸ್ಥಿತಿಯನವ
ನೇಂ ತಿಳಿಯದಿಪ್ಪನೇ ಬಿಡು ಬೇಗ ನಾನೀಗ ಮುಂದಾದುದಂ ಪೇಳ್ವೆನು ॥೧೧॥

ಅಂದು ತಾಂ ರಾಮಭಟ್ಟನು ಬೇಗ ಸವೊರ್ಮೆದ
ವೊಂದಿ ಕುಳಿತಿಹ ದ್ವಿಜರ ಪಂತಿಯಂ ನೋಡುತಾ
ನಂದದಿಂದೇಗೈದನೆಂತೆನಲದಂ ಪೇಳ್ವೆನಚ್ಚರಿಯು ತೋರುವಂತೆ ॥
ಮಂದಿರದೊಳುಂಟಾದ ಪಾಕವೆಲ್ಲಿಗೆ ಬಂದು
ದೆಂದು ನೋಳ್ಪನ್ನವರವಾ ಪುಪೂಪಿಕೆಯ ನಡುವೆ
ಕೆಂದಾದ ಕುರಿದಲೆಯು ತೋರೆ ಹೌವ್ವನೆ ಹಾರಿ ರಾಮ ರಾಮಾ ಎಂದನು ॥೧೨॥

ಅಕಟಕಟಿದೇನಾಯ್ತು ವಿಹಸಲನ್ನದಮೇಲೆ
ಪ್ರಕಟವಾಗಿಪ್ಪುದೀ ಕುರಿದಲೆಯ ನೋಡಿರೆಂ–
ದಕುಟಿಲಾತ್ಮನು ಯೋಗಿಮಡಿವಾಳಭಕ್ತನಾ ರಾಮಭಟ್ಟನು ತೋರಿಸೆ ॥
ಸಕಲರುಂ ನೋಡುತ್ತೆ ವಿಕಲಾತ್ಮರಾಗುತಂ
ಮುಕುತಿಯೊಡೆಯನಿಗೆ ಸದ್ಗುರುವಿಂಗೆ ಸರಿಬಾರದ–
ಣಕದ ಮಾತುಗಳಾಡಿದುದರ ಪರಿಣತಿಯಾದುದೆಂದು ವಸ್ತ್ರವ ಮುಚ್ಚುತೆ ॥೧೩॥

ಬಂದು ಗುರುಪಾದಾರವಿಂದಕ್ಕೆ ವಂದಿಸುತೆ
ತಂದ ವಾರ್ತೆಯನಾಗ ರಾಮಭಟ್ಟನು ಪೇಳೆ
ಮಂದಸ್ಮಿತಂ ಪೊಣ್ಮೆ ಗುರು ರಾಮಭಟ್ಟನೇ ಪೊಂಬಾಳೆಪಣ್ಗೊನೆಯದು ॥
ಅಂದವಾಗಿಹುದು ನೀಂ ನೋಡಪೋಗೆನಲವಂ
ಬಂದು ವಸ್ತ್ರವ ತೆಗೆದು ನಿರುಕಿಸಲು ಬಾಳೆಯಾ
ಚಂದವಹ ಪಣ್ಗೊನೆಯದಾಗಿರಲು ನೋಡುತಂ ಬೆರಗುವಟ್ಟರು ಸರ್ವರು ॥೧೪॥

ಬಾಡಬರು ಸರ್ವರುಂ ವೊಗಬಾಡೆ ಭಕ್ತಿಯಿಂ
ಜೋಡಿರದ ಶಿವಯೋಗಿಯುಂ ಶರಣ್ಹೊಕ್ಕುತಾವ್
ನಾಡೆ ಶ್ರೀ ಶಿವಯೋಗಿಪಾದಪೂಜೆಯನೆಸಗಿ ಬೇಡಿಕೊಂಡರು ಕ್ಷಮೆಯನು ॥
ಆಡದೇನೊಂದನಾ ಶಾಂತಗುರುದೇವನುಂ
ನಾಡರಿಯೆ ಲಿಂಗಾರ್ಪಿತವ ಮಾಡಲಾಬಳಿಕ
ಬಾಡಬರು ತಾವೆಲ್ಲರುಂಡು ದಕ್ಷಿಣೆಗೊಂಡು ಪೋದರವರವರೂರಿಗೆ ॥೧೫॥

ಇಂತನಂತಾನಂತ ಲೀಲೆಗೈವುತ್ತೆ ಮಹಾ
ಶಾಂತಗುರುಮಡಿವಳರು ತಡಕೋಡಗ್ರಾಮದೊಳು
ಕಂತುಹರಶಿವಲಿಂಗದರ್ಶನಾನಂದದೊಳು ಮುಳುಗೇಳುತನವರತವೂ ॥
ಮುಂತಿನಂತೇವಾಸಿ ರಾಮಭಟ್ಟಾದಿಗಳ
ತಿಂತಿಣಿಯ ಸೇವೆಯುಂ ಕೊಂಡು ಸಂತತಮಲ್ಲಿ
ಸಂತಸದೊಳಿರುತೊಂದುದಿವಸಮಲ್ಲಿಂ ಪೊರಟರವರಂದು ಬೇರೆ ಕಡೆಗೆ ॥೧೬॥

ಹಳ್ಳಿಯೊಳಗೋರ್ವ ಗೌಡನು ತಾನು ತನ್ನಬಳಿ
ಯುಳ್ಳ ಪಿರಿಸಿರಿಯಿಂದ ಸಕಲ ಸೌಭಾಗ್ಯದಿಂ
ದೆಳ್ಳನಿತು ಕೊರತೆದೋರದೆ ಮಕ್ಕಳಿಂ ಕೊರತೆಯಾಂತಿರಲ್ಕಾ ಹಳ್ಳಿಗೆ ॥
ಒಳ್ಳಿತರು ಮಡಿವಳರು ಪೋಗಿ ಗೌಡನ ಮನೆಗೆ
ನಿಲ್ಲದೈತರುತಿರಲು ಗೌಡನುಚ್ಚಾಸನದಿ
ಕುಳ್ಳಿರಿಸಿ ಗಂಡಹೆಂಡಿರುಮಿರ್ವರೆರಗುತುಪಚರಿಸಲಾ ರಾತ್ರಿಯಲ್ಲಿ ॥೧೭॥

ಏಕಾಂತದೊಳಗೊರಗಿದನ ಕಂತುವಿಧ್ವಂಸಿ
ಯಾಕಾರದಾಳ್ದ ಗುರುವರನ ಬಳಿಗಾ ಗೌಡ
ನಾ ಕಾಂತೆ ರತಿಯಿಚ್ಛೆಯಿಂ ಬರಲು ನಿಷ್ಕಾಮಿಗುರುವರ್ಯನರಿದಾಕೆಗೆ ॥
ಏಕೆ ಚಿಂತಿಪೆ ನೀನು ಭಾಜನವನೊಂದನಂ
ಜೋಕೆಯಿಂ ತಳುವುದಲೆ ತರಪೋಗು ನೀನೆನ
ಲ್ಕಾಕೆ ಪಾತ್ರೆಯನೊಂದನೀಯೆ ಗುರುವದರೊಳಗೆ ನಿಜಬೀಜವನು ಬಿಸುಡುತೆ ॥೧೮॥

ಅದರೊಳಗೆ ಹರಿದ ಬಟ್ಟೆಯು ಚೂರನಿಡಲುರಿಯೆ
ಸುದತಿ ನೋಡಾ ನಿನ್ನ ಪೊಟ್ಟೆಯೇನುಳಿವುದೇ ಪೋಗೆನ
ಲ್ಕಿದನೀಕ್ಷಿಸುತೆ ಕಾಂತೆ ನಾಣ್ಚಿ ಸುಮ್ಮನೆ ನಿಲ್ಲಲಾಗಳಾ ಗುರುವರ್ಯರು ॥
ಚದುರೆ ನೀಂ ಹದಿಬದೆಯು ಧರ್ಮವನು ಬಿಡದಿರಾ ॥
ಸದಮಲಾತ್ಮನು ಶಿವನು ಪುತ್ರನಂ ಕೊಡುವನವ
ನಿದು ದಿಟವು ನೀತಿಯುಂ ಬಿಡಬೇಡ ನೀನೆಂದು ಪರಿಸಿ ಕಳುಹಿದನಾಕೆಯು ॥೧೯॥

ದಂಪತಿಗಳೀರ್ವರಂ ಪರಿಸಿ ಗುರು ಬೀಳ್ಕೊಂಡು
ಸೊಂಪಿಡಿದ ಬೇರೊಂದು ಗ್ರಾಮಕೈತರುತಿರಲು
ದಂಪತಿಗಳಿತ್ತಮಿರ್ವರು ದಾನಧರ್ಮಗಳ ಕೆಲದಿನಂ ಮಾಡುತಿರಲು ॥
ಸಂಪತ್ತಿಗನುಗುಣನ ಪುತ್ರನಂ ಗುರುವಿನನು
ಕಂಪದಿಂ ಪಡೆದವರು ಭೋಗಭಾಗ್ಯದೊಳಿರ್ದ
ರೇಂ ಪೇಳ್ವೆನೀಗಳುಂ ಗುರುವರನ ಗದ್ದುಗೆಗೆ ಬರ್ಪರೈತದ್ವಂಶ್ಯರು ॥೨೦॥

ಗುರುವರರು ಲೀಲೆಯಿಂ ಬೇರೊಂದು ಗ್ರಾಮಕ್ಕೈ
ತರುವನ್ನೆಗಂ ದಾರಿಯಲ್ಲಿ ನೇಗಿನಹಾಳ
ಪುರದುಳುವಿಪಡಿಯುಪ್ಪನಜ್ಜಪ್ಪ ಕೋಟಿಗೆಯು ಕರೆಯುಬಂದಿಹ ಪ್ರಮುಖರು ॥
ಬರುತಿಪ್ಪವಸರದೊಳಗೆದುರು ಬಹ ಗುರುವರನ ॥
ನಿರುಕಿಸುತ್ತಡಿಗೆರಗಿ ಗುರುವೆ ಬಡವನಿಗೆ ನಿಧಿ
ದೊರಕಿದಂದದಿ ಕರೆಯುಬಂದೆವಗೆ ದಾರಿಯೊಳೆ ದೊರಕಿದಿರಿ ದಯಮಾಡಿರಿ ॥೨೧॥

ಎಂದೆರಗಲನುಮತಿಸಿ ಗುರುವು ನೇಗಿನಹಾಳ
ಕಂದು ಬರೆ ಮೊದಲೆ ಕಟ್ಟಿದ ಮಠದೊಳೂರವರು
ತಂದಿಳಿಸಲಲ್ಲಿ ಗುರುಶಿವಯೋಗಿ ನಿತ್ಯನಿಯಮಂಗಳಂ ಮಾಡುತಿರಲು ॥
ಬಂದು ಗುರುವಿನ ಸೇವೆಗೈವುತ್ತಮನಿಶಮಾ-
ನಂದದಿಂ ಲಿಂಗಾರ್ಪಿತಕೆ ಸುಪ್ರಸಾದಮಂ
ತಂದುಕೊಡುತಿರ್ಪರವರೋರೋರ್ವರಸವರತಮತಿಭಕ್ತಿಯಿಂ ಬಿಡದಲೆ ॥೨೨॥

ತಿಳಿಪಿನೊಳಕೊಂಡೆಸೆವ ಯೋಗಿ ಸೇಗಿನಹಾಳ
ದೊಳಗೆ ಭಕ್ತರ ಭಕ್ತಿಯೊಳು ಮುಳುಗಿರುವರಿತ್ತ-
ಮಳ ಸುಪ್ರಸಾದಮಂ ಕೈಕೊಳುತೆ ಕೆಲದಿವಸವಿರುತಿರಲೊಂದು ದಿನವು ॥
ಅಳವಿರದ ದುಃಖವಿರೆ ಕುಪ್ಪಸದ ನಾಗಪನು
ತಳುವಗೈಯ್ಯದೆ ಮಹಾಗುರುವಿನೆಡೆಗೈದಿ ಕೈ
ಯೊಳಗಿಪ್ಪ ಕಾಯ ಕಪ್ಪುರವನ್ನು ಮುಂದಿಟ್ಟು ನಮಿಸಿ ಪೇಳಿದನೆಂತೆನೆ ॥೨೩॥

ಮೃಡಮೂರ್ತಿಯೆನ್ನ ಸತಿಗೇನು ಗತಿ ಕೂಸು ತಾ
ನಡಸಿಕ್ಕಿ ಹೆರೆಯಳಿಂದಿಗೆ ದಿನತ್ರಯವಾಯ್ತು
ಮಿಡುಕುತಿಹಳಿನ್ನು ಪೇಳಲಸುವುಳಿಯದಯ್ಯ ದಯೆಮಾಡಯ್ಯ ಕೈಯ್ಯಮುಗಿವೆ ॥
ಬಿಡದಡಿಗೆ ಬಿದ್ದಿಂತು ನಾಗಪನು ಬೇಡುತಿರೆ
ಬಿಡು ಚಿಂತೆಯನು ಗಡಾ ಶಿವನೌಷಧವ
ಹಿಡಿಯೆಂದು ತನ್ನಡಿಯ ಜಲದೊಡನೆ ಬೂದಿಯನ್ನಿತ್ತು ಕಳುಹಿದನಾರ್ಯನು ॥೨೪॥

ಕುಪ್ಪಸದ ನಾಗಪನು ತಪ್ಪದಾ ಗುರುವಿನಡಿ
ಯುಪ್ಪುವಂ ಸತಿಯಳಿಗೆ ಕುಡಿಸಿ ಬೂದಿಯ ಪೂಸ-
ಲೊಪ್ಪುವರ್ಭಕನನ್ನು ತತ್ಕ್ಷಣವೆ ಹೆತ್ತಳವಳಮವು ಗುರುವರಕರುಣದಿ ॥
ಅಪ್ಪ ಮಡಿವಾಳಪ್ಪನುರುಮಹಿಮೆಯನ್ನಾರೊ
ಳಿಪ್ಪ ನರನಾರಿಯರು ಭಲರೆ ಭಾಪುರೆ ಜೀಯ
ಮುಪ್ಪುರವ ಸುಟ್ಟಸವತಾರಿ ಸರಿಯಪ್ಪದೊರೆಯಿಪ್ಪನಾರ್ನಿನಗೆಂದರು ॥೨೫॥

ಯತ್ಯಧಿಪ ಮಡಿವಳರನುಗ್ರಹದೊಳೊಗೆದ ಪುಮ
ಪತ್ಯನಿಗೆ ಮಡಿವಾಳನೆಂದು ಪೆಸರಿಟ್ಟು ಸತಿ
ಯತ್ಯಧಿಕ ಸಂಭ್ರಮದೊಳನವರತವಿರ್ವರುಂ ದಂಪತಿಗಳಿರುತಿರ್ದರು ॥
ಸತ್ಯ ಶಮೆ ದಮೆ ಸನುತೆ ಜಯೆ [illegible]ನಾಥರಭರಣ
ವತ್ಸರುವಿರತಿಯಾದಿಯಾದ ಸದ್ಗುಣಗಣವು
ಸ್ತುತ್ಯಮಡಿವಳಯೋಗಿಯಲ್ಲಿರಲು ಮೆರೆದನವನಂದು ಸೇಗಿನಹಾಳದಿ ॥೨೬॥

ನಿಚ್ಚಣಕಿಯೂರ ಗುರುಬಸವಪ್ಪ ಪಾಟೀಲ
ನುಚ್ಚ ಶಿವಲಿಂಗಪ್ಪ ಮೆಳ್ಳಿಕಟ್ಟಿಯ ಮೋಣು
ಸ್ವಚ್ಛ ಶಿವಮೂರ್ತಿ ಶಿವಲಿಂಗಯ್ಯ ಪಟ್ಟದಾ ಬೈಲಪ್ಪದಳವಾಯಿಯು ॥
ಕೆಚ್ಚೆದೆಯ ರಿವರು ನೇಗಿನಹಾಳಗ್ರಾಮದೊಳ
ಗೊಚ್ಚತಂಗೊಂಡಿರ್ದ ವಿವಿಧಮಹಿಮೋಚ್ಚಯದ
ಹೆಚ್ಚಳಿಕೆಯಿಂದೆ ಕಂಗೊಳಿಪ ಯೋಗಿಯು ಬಳಿಗೆ ಬಂದರತಿಭಕ್ತಿವೆರಸಿ ॥೨೭॥

ತಂದಿರುವ ತೆಂಗುಪಣ್ಕಪ್ಪುರಂಗಳನವರು
ಮುಂದಿಟ್ಟು ಸಾಷ್ಟಾಂಗ ನಮನವಂ ಗೈದು ನಯ
ದಿಂದ ಕೈಮುಗಿದಿಂತು ಮಡಿವಾಳಶಿವಯೋಗಿವರ್ಯನಂ ಪ್ರಾರ್ಥಿಸಿದರು ॥
ತಂದೆ ಕೇಳ್ ಸದ್ಗುರುವೆ ನಿಚ್ಚಣಿಕಿಯೂರಿಗೈ
ತಂದು ಬೇಗನೆ ನಮ್ಮನೆಲ್ಲರನ್ನುದ್ಧರಿಸು
ಬಂದೆವೈ ನಿಮ್ಮೆಡೆಗೆ ಭಕ್ತಿಯೊಡವೆರೆದು ನಾವ್ ಸದಯ ಬಿಜಯಂಗೈವುದು ॥೨೮॥

ಎನೆ ಕೇಳ್ದು ಯೋಗಿವರ್ಯನುಮವರಿಗಿಂತೆಂದ
ನನುಮಾನವದು ಬೇಡ ಮಠವನೊಂದನ್ನು ನೀ
ವನುಗೊಳಿಸಿದೊಡೆ ಬರ್ಪೆನೆಂದೊರೆಯಲದಗೇಳಿ ಭಕ್ತರಾನಂದದಿಂದ ॥
ಚಿನುಮಯನ ಪದಕೆರಗಿ ಮರಳಿ ಬಂದೂರಿಂಗೆ
ವಿನುಪ ಮಠವನ್ನೊಂದನೆಸಗಿ ಮಗುಳೈತಂದು
ಘನಮಹಿಮಯೋಗಿಯಂ ನಿಚ್ಚಣಿಕಿಯೂರಿಂಗೆ ಬಿಜಯಗೈಸಿದರೆಲ್ಲರು ॥೨೯॥

ಮಂಗಲದ ವಾದ್ಯಂಗಳಲ್ಲಿಗಲ್ಲಿಗೆ ಮೊಳಗ
ಲಂಗನೆಯರೆಲ್ಲರಾರತಿ ವಿಡಿದು ನಿಂದಿರಲು
ತುಂಗತರ ನಂದಿಧ್ವಜಂಗಳಾಗಸದೊಳುರೆ ನಿಮಿರೆ ಜಯಘೋಷಪೊಗೆಯೆ ॥
ಸಿಂಗರಿಸಿದಾ ಮಕರ ತೋರಣಗಳಿಂದ ಮೇಣ್
ಸಂಗಳಿಸಿ ಶೋಭಿಸುವ ತಳಿರತೋರಣಗಳಿಂ
ಕಂಗೊಳಿಸುವೂರೊಳಗೆ ಜಂಗಮಾಗ್ರಣಿಯನತಿಸಂಭ್ರಮದಿ ಕರೆದೊಯ್ದರು ॥೩೦॥

ಪೊಸತಾಗಿ ನಿರ್ಮಿಸಿದ ಮಠದಲ್ಲಿ ಗುರುವರನ
ನಸಮಾಕ್ಷರೂಪನಂ ಮಂಜುಳಾಲಾಪನಂ
ಕಸವರವು ಕಸವೆಂದು ತಿಳಿದ ನಿರ್ಲೇಪನಂ ಯತಿಭೂಪನನಪಾಪನಂ ॥
ಒಸೆದು ಬಿಜಯಂಗೈಸಿ ನಿರುತಮವರೂಳಿಗಮೆ
ಮುಸುಕಿದೀ ಭವರೋಗಕಗದವೆಂದರಿದು ಮನ
ಪೊಸೆದವರ ಸೇವೆಯೊಳು ತೊಡಗಿದರು ಸತತಮವರಿವರೆನ್ನದೂರ್ಜನರು ॥೩೧॥

ಅಣ್ಣಬೆಣ್ಣಯು ತಂದು ಮುಡಿತೊಡಗಿ ಯುಡಿವರೆಗೆ
ಯೆಣ್ಣೆಯಂದದಿ ಪೂಸಿ ಮೈಗೆ ನುಣ್ಣಗೆ ತಿಕ್ಕಿ
ಚಿಣ್ಣನಂತೀತನಂ ಬಚ್ಚಲಿಕ್ಕೊಯ್ಯು ಕಡು ಕಾದ ನೀನರ್ಕೊರ್ಡಗಳಿಂ ॥
ಬಣ್ಣ ಬರುವಂತೆರೆದು ಲಿಂಗಾರ್ಚನೆಯಗೈಸಿ
ಸಣ್ಣಕ್ಕಿಯನ್ನದಿಂ ಪಾಯಸದಿ ತಣಿಗೊಳಿಸಿ
ತಣ್ಣಗಾಗದ ತೆರದಿ ಗೈದ ಪಾಸಿಗೆಯೊಳಗೆ ಮಲಗಿಸುವರನವರತವು ॥೩೨॥

ಸುರುಚಿರದ ಮಠಗೊಳಗೆ ಪಾದಪೂಜೆಯು ನಿತ್ಯ
ಮುರುನೀತಿ ಪರಬೋಧೆ ನಡೆಯೆ ಗುರುಮಡಿವಳರ
ವರಮಹಿಮೆ ಸುತ್ತಲುಂ ಪರಿಕಲಿಸೆ ದರುಶನಕೆ ಸುತ್ತಣಿಂದೈತರುತಿಹ ॥
ಪರಮ ಜಂಗಮರಿಗುಂ ಭಕ್ತರಿಗುಮಾದರದೊ
ಳಿರದೆ ದಾಸೋಹವನ್ನಿರಿಸಿ ಕರಮುಪಚರಿಸಿ
ನಿರುತಮಿಂತೂರವರು ಕಳುಹುತಿರಲವರ ಪೊಸಜಸವೆಸೆದುದೆಣ್ದೆಸೆಯೊಳು ॥೩೩॥

ದೇಗಲೊಳ್ಳಿಯ ಗ್ರಾಮದಖಿಲ ಸದ್ಭಕ್ತರನು-
ರಾಗದಿಂ ಗುರುವರನಿಗೊಂದು ಮಠವನು ರಚಿಸಿ
ಯೋಗಿವರನಂ ಕರೆಯಲೋಸುಗಂ ನಿಚ್ಚಣಿಕೆಯೂರಿಗೈತಂದು ನಿಂದು ॥
ಯೋಗಿಭೂಷನ ರೂಪದಾಳ ಶಿವಯೋಗಿಯೋ
ದೇಗಲೊಳ್ಳಿಯೊಳು ನಿಮಗಾಗಿ ಮಠವನ್ನೊಂದ
ನಾಗಿಸಿವೆ ದಯಮಾಡಬೇಕೆಂದು ಕಾಣ್ಕೆಗೊಟ್ಟೆರಗಿದರು ದೈವದವರು ॥೩೪॥

ಎರಗಿರುವ ಭಕ್ತರನ್ನುಪಚರಿಸಿ ಮೇಣವರ
ಪರಮ ಭಕ್ತಿಗೆ ಮೆಚ್ಚಿ ಗುರುವರ್ಯನೊರೆದನಿಂ-
ತರರೆ ನಿಮ್ಮಯ ಭಕ್ತಿ ಘನವಾದುದೆಮಗಿಂದು ನಡೆಯಿರೈ ಬರ್ಪೆನೊಡನೆ ॥
ಗುರುವಿನಾದರದುಕ್ತಿಗೇಳಿ ಭಕ್ತರು ತಾವು
ಹರಿಸಗಡಲೊಳು ಮುಳುಗಿ ಶಿವಯೋಗಿವರ್ಯನಂ
ಕರೆದೊಯ್ದು ಪೊಸತಾಗಿ ನಿರ್ಮಿಸಿದ ಮಠದೊಳಗೆ ಸಡಗರದೊಳಿಳಿಸಿದರಲಾ ॥೩೫॥

ನಿತ್ಯಮವರಡಿಯೆಡೆಯು ಭೃತ್ಯಕೃತ್ಯವ ವಹಿಸಿ
ಸ್ತುತ್ಯ ಪಾದಾರ್ಚನೆಯನತ್ಯಧಿಕ ಭಕ್ತಿಯಿಂ
ವ್ಯತ್ಯಯವು ಬಾರದಂತೆಸಗಿ ಲಿಂಗಾರ್ಚನಾರ್ಪಿತಕಾನುಕೂಲ್ಯಗೊಳಿಸಿ ॥
ಯತ್ಯಧಿಪ ಗುರುವರ್ಯನಂ ಸರ್ವಸದ್ಭಕ್ತ
ರತ್ಯವಶ್ಯಕ ಜೀವಕಿಂದಧಿಕವೆಂದರಿದು
ಪ್ರತ್ಯಹಂ ಯೋಗಿಯೊಳು ಪ್ರತ್ಯಯವನಿಟ್ಟು ಸಂಸೇವಿಸುತ್ತಿರ್ದರವರು ॥೩೬॥

ಮರಿಸಿದ್ಧಲಿಂಗಪ್ಪನೆಲೆಗಾರ ಭೀಮಪ್ಪ
ನುರು ವೀರಬಸವಪ್ಪ ಹಣಗಿ ದುಂಡಪ್ಪನೆಂ
ಬರು ಗರಗದಾ ದೈವದವರೆಲ್ಲರುಂ ಕಾಯಕಪ್ಪುರವ ಮುಂದಿಳುಹುತೆ ॥
ಕರಸಂಪುಟಂ ಗೈದು ನಿಂದಿರಲು ನೋಡಿ ಗುರು
ವರರು ನೀವಾರದಾವೂರಿಲ್ಲಿಗೇವಂದಿ
ರೊರೆಯಿರೆನಲವರೆರಗಿ ಗರಗದವರಾವು ನಿಮ್ಮನು ಕರೆಯಬಂದೆವೆನಲು ॥೩೭॥

ನಾವಲ್ಲಿಗೈದುವಡೆ ನಿಮ್ಮೂರ ಬಸವೇಶ
ದೇವನಿಲಯದ ಬಳಿಯ ಪಳ್ಳದಡಿಯಲಿ ಮಠವ
ನೀವೆಲ್ಲರೊಡಗೂಡಿ ಸಮೆದೈದಿ ಪೇಳಿದೊಡೆ ಬರುವೆನೆಂದೊರೆಯೆ ಯೋಗಿ ॥
ತೀವಿದಾಮೋದದಿಂ ಕೇಳಿ ಗುರುವಿಗೆ ಮಣಿದು
ಭಾವದೊಳು ಗುರುವಿನಂ ಜಾನಿಸುತಮಖಿಲರಾ
ಭಾವಿಕರು ತಳುವಮಾಡದೆ ತಾವು ತಿರುಗಿದರು ಮನಕರಗಿ ಗರಗಿಗಾಗ ॥೩೮॥

ಶಿವಯೋಗಿಯಾಣತಿಯನೂರಜನರಿಗೆ ತಿಳುಹ
ಲವರೆಲ್ಲರಾಕ್ಷಣಕೆ ಹುರಿಗೊಂಡು ಸಿದ್ಧರಿರೆ
ತವಕದಿಂ ಪ್ರಮುಖರಾ ಗುರುವೊರೆದ ತಾಣದೊಳು ಸಮೆದರಂದದ ಮಠವನು ||
ಶಿವಪೂಜೆಗೂಟಕ್ಕೆ ನಿಲ್ಲುದಕೆ ಮಲಗಲ್ಕೆ
ಶಿವಕೀರ್ತನಕೆ ಮೇಣು ಬರಹೋಹರಿಳಿವುದಕೆ
ತವೆ ಸುಕರವಪ್ಪಂತೆ ನಿರ್ಮಿಸಿದರಾ ಮಠವನೇನೆಂಬೆನದರಂದವ ||೩೯||

ಪಿಂದೊರೆದ ಪ್ರಮುಖರೊಡವೆರೆದಿಂದು ಕೆಲಬರಾ-
ನಂದದಿಂ ನಿಜ್ಜಣಿಕೆಗೈದಿ ಶಿವಯೋಗಿಯಂ
ತಂದು ಸಮೆದೀ ಮಠದಿ ಬಿಜಯಗೈಸಲ್ವೇಳ್ಕುಮೆನುತಲ್ಲಿಗೈತಂದರು ||
ಬಂದು ಗುರುವಿಂಗೆ ಪದಪಿಂದ ಕಾಯ್ಕಪ್ಪುರವ
ಮುಂದಿಟ್ಟು ಪೊಡಮಟ್ಟು ಗುರುವೆ ನೀವೊರೆದಂತ
ದಿಂದು ಮಠವದು ಸಿದ್ಧವಿಹುದು ದಯಮಾಡಿರೆಂದವರಿಂತು ಬಿನ್ನವಿಸಲು ||೪೦||

ಇದೊ ಬಂದೆವೈ ನಾವು ನಡೆಯಿರೆಂದವರೊಡನೆ
ಸದಮಲಾತ್ಮನು ಪೊರಡಲನುವಾಗುತಿರಲವರು
ಮುದದಿಂದ ಬಂಡಿಯೊಳು ಸಾಮಗ್ರಿಯಂ ತುಂಬಿ ಸಿಂಗರಿಸಿದಂದಣದೊಳು ||
ವಿದುರಮಣಿಯೋಗಿಯಂ ಸಡಗರದಿ ಕುಳ್ಳಿರಿಸಿ
ಪದುಮಬಾಂಧವನಸ್ತಮಿಸದ ಮುನ್ನಮೆ ಊರ
ಬದಿಗೆ ಬರೆ ಮಂಗಲದವಾದ್ಯಗಳು ಮೊಳಗುತಿರಲಂದಣವು ಬರುತಿರ್ದುದು ||೪೧||

ಊರೆಲ್ಲ ವಾದ್ಯಗಳು ಭೋರೆಂದು ನುಡಿವುತಿವೆ
ನೀರೆಯರು ತಳಿಗೆರ್ಯೊಳಾರತಿಯ ಪಿಡಿದಿಹರು
ಚೀರುತಿವೆ ಕಾಳೆಗಳು ಭೇರಿಗಳು ಮೊರೆವುತಿವೆ ಬರುತಿರ್ದುದಂದಣವದು ||
ಕೇರಿ ಕೇರಿಯೊಳೆಲ್ಲ ತಿರುಗಿಸುತ್ತಂದಣವ
ಸಾರಮಠಕೈದುವಾ ದಾರಿಯಂ ಹಿಡಿದು ನರ
ನಾರಿಯರು ಜನರೆಲ್ಲ ಧೀರಮಣಿಯೋಗಿಯಂ ಕರೆತಂದರಾತ್ಮಮಠಕೆ ||೪೨||

ಯೋಗಿಯುಂ ವಿಶ್ವಕುಪಯೋಗಿಯುಂ ಸಂಸೃತಿ ವಿ
ಯೋಗಿಯುಂ ಭುವನದುದ್ಯೋಗಿಯುಂ ವಿಷಯದಿ ವಿ
ರಾಗಿಯುಂ ವಿನಮದನುರಾಗಿಯುಂ ಲಿಂಗಸುಖಭೋಗಿಯುಂ ಸದ್ಗುರುವಿನಂ ॥
ರಾಗದಿಂ ಸಿಂಹಪೀಠದೊಳಿರಿಸಿ ನಮಿಸಿ ಜನ
ಪೂಗಪದು ತತ್ಕಾಲಕುಚಿತವಸ್ತುವನಿರಿಸಿ
ಯೋಗಿಯಾಣತಿಗೊಂಡು ಮುದಗೊಂಡು ಪೊದುದದು ತಮ್ಮತಮ್ಮಾಯು
ತಾಣಕೆ ॥೪೩॥

ಅಮಳೈಕ್ಯದೊಳಗಿರಿಸಿದಿಷ್ಟಲಿಂಗವ ತೆಗೆದು
ಕ್ರಮವಾಗಿ ತಾನಷ್ಟವಿಧಪೂಜೆಗೈದದಂ
ಸ್ವಮನದೊಳು ಪ್ರಾಣಲಿಂಗಾನುಸಂಧಾನಮಂ ಗೈದ ಬಳಿಕಂ ಭಾವದಿ ॥
ಕಮನೀಯ ಭಾವಲಿಂಗವನು ಭಾವಿಸಿ ಬಳಿ
ಕ್ಕಮಮ ತಾಂ ನಿರ್ಭಾವನಾಗಿ ನಿಬ್ಬೆರಗುವಡೆ
ದಮಿತ ನಿತ್ಯಾನಂದದೊಳು ಮುಳುಗಿ ಶಿವಯೋಗಿಯಿರುತಿರ್ದನನವರತವು ॥೪೪॥

ಲಿಂಗಾನುಸಂಧಾನಿಗಾ ಪ್ರಮುಖರೂರವರು
ಲಿಂಗಾರ್ಪಿತಕೆ ಸುಪ್ರಸಾದವನು ದಿನದಿನದೊ
ಳಂಗವಿಸಿ ತಂದುಕೊಡುತಿರ್ಪರತಿಭಕ್ತಿಯಿಂ ಘನವಿರತಮೂರ್ಧ್ವಮಣಿಗೆ ॥
ಲಿಂಗಭೋಗೋಪಭೋಗಿಯು ಲಿಂಗಪೂಜೆಯನು
ಲಿಂಗಾರ್ಪಣವನು ಘನಲಿಂಗಾನುಭಾವವನು
ಸಾಂಗಮೆನೆ ಮೂರನುಂ ನಡೆಯಿಸುವನನವರತ ಶಿವಯೋಗಿ ಸುವಿರಾಗಿಯು ॥೪೫॥

ಜರಸಿದ್ಧಲಿಂಗಮರಿದೇವ ರಾಮನಗೌಡ
ನಿರತ ವೀರಯ್ಯ ಕೃಷ್ಣಯ್ಯಗೋಕಾವಿಯಿವ
ರರೇ ಗುರುಪರ್ಯನುಪಚಾರದೊಳು ಮಗ್ನರಾಗಿರ್ಪರನುದಿನವೆಲ್ಲರು ॥
ಕರಿಗೌಡರುಂ ಮುದೇನೂರ ಗಗನಾಚಾರ್ಯ
ನುರು ರಾಣಿಬೆನ್ನೂರ ಬ್ಯಾಡಿಗೆಯು ಚನ್ನಬಸ
ವರು ಮೊದಲು ದೊಡ್ಡಿತರು ಬರಿಸಕೊಂದಾವೃತ್ತಿ ಬಂದು ಸೇವೆಯುಗೈವರು ॥೪೬॥

ಗರಗದೂರವರೆಲ್ಲರೊಂದನಾಲೋಚಿಸಿದ
ರಿರದೆ ಗುರುದರ್ಶನಕೆ ಬಹಹೋಹ ಜನಚಯದ
ಸರಸವಹ ಸ್ನಾನಪಾನಾದಿಗಳಿಗತಿಸುಕರವಾಗುವಂತೀ ಹಳ್ಳಕೆ ॥
ಮೆರೆವ ಸೋಪಾನಗಳ ಸಮುದಾಯವನ್ನಿಲ್ಲಿ
ವಿರಚಿಸಿದೊಡೆಲ್ಲರ್ಗೆ ಹಿತವೆಂದು ಬಗೆದು ಚೆ
ಚ್ಚರನೆ ಸೋಪಾನವನು ಕಟ್ಟಿಸಿದರೆನಲು ಗುರುಭಕ್ತಿತಾನೇಗೈಯ್ಯದು ॥೪೭॥

ಅನ್ನಸತ್ರವನೊಂದನೊಡರಿಸುತೆ ಮುನ್ನಮೇ
ಸನ್ನುತಾತ್ಮರ ಯೋಗಿವುಡಿವಳರ ಸೇವೆಯೊಳು
ಭಿನ್ನವಾಗದ ತೆರದಿ ಮನವನೇಕೀಕರಿಸಿದಾ ಶಿಷ್ಯಸಮುದಾಯುವ ॥
ಮನ್ನಿಸುತ್ತೆಲ್ಲರಿಗೆ ಧರ್ಮನೀತಿಯುಭೋಧೆ
ಯುನ್ನು ಭೋಧಿಸಿ ಭವದ ಬೇರಗಿದು ಕಿತ್ತೊಗೆವ
ಚೆನ್ನವಹ ಜ್ಞಾನಸಾಧನವನ್ನು ಶಿವಯೊಗಿ ನಿರವಿಸಿದನದನೊರೆವೆನು ॥೪೮॥

ಧರಣಿಯೊಳು ಪುರುಷರ್ಗೆ ಪುರುಷಾರ್ಥವೆಲ್ಲವಾ
ಭರಣವೆಂದಿರದೊರೆಗುವಾ ಶಾಸ್ತ್ರವದರಿಂದ
ಪುರುಷರೆಲ್ಲರುಮಾದ್ಯವಹ ಧರ್ಮಕರ್ಮವನೆ ಮಾಡಿ ಪುಣ್ಯವ ಪಡೆವುದು ॥
ವರಪುಣ್ಯವನ್ನುಳಿದು ಜಗದಿ ನರನಿಗದಾವ
ಕರಣವದು ಬೇರಿಲ್ಲ ಪುಣ್ಯವೇ ಸಾಧನವು
ನರನದನೆ ಸಂಗ್ರಹಿಸಿ ನರಜನ್ಮವನು ಸಫಲಗೊಳಿಸಿ ಸದ್ಗತಿಬಡೆವುದು ॥೪೯॥

ಎಲ್ಲ ವುಂದಿಯು ಕಣ್ಗೆ ಕ್ಷುಲ್ಲಕವದೆನಿಸಿದೊಡು
ಕಲ್ಲಿಂದ ಸತ್ಕ್ರಿಯೆಯು ಬಲದಿ ಬಲ್ಲವರೆಲ್ಲ
ರುಲ್ಲಸತ್ಕಾಂಚನವ ರತ್ನವನು ತೆಗೆವಂತೆ ಮೆರೆದನುಂ ಲೋಕದೊಳಗೆ ॥
ಪೊಲ್ಲಮೆನಿಸಿರ್ಪ ತನ್ನೊಡಲಿನಿಂದ ನಾಡೆ ಕೇ
ಡಿಲ್ಲದಿಹ ಸಲ್ಲಲಿತ ಪುಣ್ಯವನೆ ನಿಲ್ಲದತಿ
ಬಲ್ಲತನದಿಂದುಪಾರ್ಜಿಪನೆ ಕಡುಜಾಣನವನೆಂದರಿಯಿರೈ ಮನದೊಳು ॥೫೦॥

ತುಂಬಿರ್ದ ಕೆರೆಯು ನೀರ್ಗಿಂಬುಗೊಡದಿರ್ದೊಡದ
ರಂಬು ವುಳಿಯುವದೇನು ಪುಣ್ಯಫಲವದು ಧರ್ಮ
ಮಂ ಬಿಟ್ಟು ಬಾಳುವದೆ ಬಿಡಿರಿ ಸದ್ಧರ್ಮದಿಂ ಪುಣ್ಯಫಲವನು ಪಡೆಯಿರಿ ॥
ಶಂಬಕರನ್ಯೈಸಿರಿಗೆ ಸರಿಯುಂಟೆ ಭಾವಿಸಲು
ಶಂಬರಾರಿಧ್ವಂಸಿ ಶಿವಧರ್ಮವನ್ನುಳಿಯೆ
ಜಂಭರಿಪು ಕೊಳಗುಳದಿ ಸೋಲ್ತನಸುರರ ಪಡೆಗೆ ಧರ್ಮವೇ ಪುಣ್ಯಕರವು ॥೫೧॥

ಹಸ್ತಿಯದು ಮುಂದಿರ್ದ ಪುಲ್ಗುಂಪವನು ಕರದಿ
ಮಸ್ತಕದ ಸುತ್ತಲೆಡಬಲಚಲ್ಲಿಯುಳಿದುದಂ
ಸ್ವಸ್ಥವಾಗುತೆ ತಿಂದು ಮುದದಿಂದ ಮಲಗಿ ತಾ ಬಾಳ್ವುದಾ ಹಸ್ತಿಯಂತೆ ॥
ಶಸ್ತಮಾದೈಸಿರಿಯು ತನಗಿರಲು ಸದ್ಧರ್ಮ
ನಾಸ್ತಿಯೆನ್ನದೆ ಮುದದಿ ದೀನಜನಕಿತ್ತು ತಾಂ
ಸ್ವಸ್ಥದಿಂ ಪುತ್ರಪುತ್ರಿಯರೊಡನೆ ಭೋಗಿಪುದು ತದ್ಧರ್ಮಲಕ್ಷಣವದು ॥೫೨॥

ಪರವೋಪಕಾರದಿಂದನ್ಯ ಧರ್ಮವದಿಲ್ಲ
ಪರಪೀಡೆಯಿಂದ ಬೇರೊಂದು ಪಾಪವದಿಲ್ಲ
ನರರೆಲ್ಲರಿವನೆರಡನರಿದು ವರ್ತಿಪೊಡದುವೆ ಸದ್ಧರ್ಮ ಮೂಲವಹುದು ॥
ವರಧರ್ಮದಿಂ ಪುಣ್ಯವದರಿಂದ ಮಾನಸಕೆ
ವರಶುದ್ಧಿಯದರಿಂದ ಶಿವಕೃಪೆಯದದರಿಂದ
ಗುರುಪರೇಣ್ಯನ ಭಕ್ತಿಯಹುದು ತಪ್ಪದು ಕೇಳಿರಿದು ಶಾಸ್ತ್ರಸಿದ್ಧವಹುದು ॥೫೩॥

ಗುರುವಿನಿಂ ಶ್ರವಣವಾ ಶ್ರವಣದಿಂ ಮನನವಾ
ವರಮನನದಿಂ ನಿದಿಧ್ಯಾಸವಹುದದರಿಂದ
ಪರತರಜ್ಞಾನವಹುದದರಿಂದ ಭವನಿವೃತ್ತಿಯದಪ್ಪುದರಿಯಿರಯ್ಯಾ ॥
ನಿರುತವೆಲ್ಲರು ನೀವು ವರಧರ್ಮಪರರಾಗಿ
ಗುರುಕೃಪೆಯ ಪಡೆದು ಸಮ್ಯಗ್ಜ್ಞಾನಬಲದಿಂದ
ವರಮೋಕ್ಷಮಂ ಪಡೆಯಲಣಿಯಾಗಿ ನಿಲ್ವುದೆಂದುಪದೇಶಿಸಿದನಾರ್ಯನು ॥೫೪॥

ಮತ್ತುಸುರ್ವೆ ಚಿತ್ತೈಸಿರೆಲ್ಲರುಂ ಸೀವೀಗ
ಳೆತ್ತಲಾನುಂ ಹೆರರ ವಿತ್ತವಸ್ತುಗಳ ಕ
ಣ್ಣೆತ್ತಿ ನೋಡದಿರೆಲವೊ ಮತ್ತವರ ಮತ್ತಕಾಶಿನಿಯರಂ ನಿರುಕಿಸದಿರಿ ॥
ಉತ್ತಮರ ಸಂಗದೊಳಗನವರತವಿರಿ ಕಾಮ
ಗೊತ್ತೆಗೊಡದಿರಿ ಮನವನೇಗಳುಂ ಚಿತ್ತದೊಳು
ಸತ್ಯಚಿತ್ಸಾನಂದ ಶಿವನ ನಾಮಂಗಳಂ ನೆನೆಯಿರೈ ಭಕ್ತಿಯಿಂದ ॥೫೫॥

ಮಾತುಮಾತಿಗೆ ಮುನಿಸಕೆಡೆಯಾಗದಿರಿ ನೀವು
ಸೋತುಹೋಹುದು ಸದಾ ಶಾಂತಿಯಿಂದನ್ಯರೊಳು
ಪ್ರೀತಿಯಿಂ ವರ್ತಿಸಿರಿ ಸರಿಮಿಗಿಲು ಕಿರಿಯರೊಳಗಿರದೆ ವಿನಯವ ಪೊಂದಿರಿ ॥
ಪೂತಮಾತಾಪಿತರರತಿಥಿಗಳ ದೇವರಂ
ದೋತು ಪೂಜಿಸಿರಿ ನೀವಾವ ಜನಕಾದೊಡುರೆ
ಘಾತಿಯಂ ಗೈಯದಿರಿ ಭೂತಿಯುಂ ನೆಚ್ಚಿ ಮನಬಂದಪರಿ ವರ್ತಿಸದಿರಿ ॥೫೬॥

ಅನ್ಯಮತಗಾಣುತಂ ಭಿನ್ನವೆಂದೆಣಿಸದುರೆ
ಮನ್ನಿಪುದು ಗಡ ಸಹಿಷ್ಣುತೆಯು ಬಲದಿಂದ ಕೇ
ಳ್ಮನ್ನಿದುವೆ ಸಮತೆ ನಿಮಗಿರಬೇಕು ಮತ್ತಮಾರೇನೆಂದೊಡಂ ಕೇಳದೇ ॥
ತನ್ನ ಮನದೊಳು ವಿಕೃತಿದೋರದಿಹುದಿದು ಸಮತೆ
ಸನ್ನುತಿಯುನಾರುಮೆಸಗಿದೊಡು ಗಡ ತನ್ನನ್ನು
ಹೊನ್ನಶೂಲಕ್ಕೇರಿಸಿದರೆಂಬುದೇ ಸಮತೆಯೀ ಸಮತೆ ಬೇಕಲ್ಲವೇ ॥೫೭॥

ಈ ನೀತಿಯಿೂ ಧರ್ಮವೀ ಪುಣ್ಯವೀ ಶುದ್ಧ
ಮಾನಸವದೀ ಭಕ್ತಿಯಿೂ ಜ್ಞಾನವೀ ಸಮತೆ
ನೂನವೆಲ್ಲವು ನಿಮ್ಮೊಳುಂಟಾದೊಡೀ ಜನ್ಮ ಸಫಲವಹುದೈ ದಿಟವಿದು ॥
ಮಾನವನ ಸರ್ವಸಾಧಾರಣ ಗುಣಂಗಳನು
ನಾನಿಂದು ನಿಮಗರುಹಿದೆನು ಭಕ್ತಮಣಿಗಳಿರ
ಸಾನುರಾಗದಿ ಕೇಳಿದಂದದಿಂ ನಡೆದೊಡಾ ಶಿವನಭವನೊಲುಮೆಯಹುದು ॥೫೮॥

ಗುರುಗಳುಪದೇಶವನು ಭಕ್ತರೆಲ್ಲರು ಕೇಳಿ
ಚರಣಾರವಿಂದಕ್ಕೆ ನಮಿಸಿ ಸದ್ಗುರುದೇವ
ಕರುಣವಿಟ್ಟುಪದೇಶಿಸಿದುವ ಕೇಳುತವಾವು ಧನ್ಯರಾದೆವು ಸತ್ಯವು ॥
ಗುರುವೆ ನಗುರೆರೋರಧಿಕವೆಂದೊರೆವ ಶಾಸ್ತ್ರವ
ನ್ನರಿದು ಮರೆಹೊಕ್ಕರಂ ಪೊರೆದೆ ವಿರತಾಚಾರ್ಯ
ಗುರುವರ್ಯ ಜಗದಾರ್ಯ ಚಿತ್ಸೂರ್ಯ ಶುಭಕಾರ್ಯವೆಂದವರು ಬಣ್ಣಿಸಿದರು॥೫೯॥

ಇಂತೆಲ್ಲ ಪೊಗಳ್ತೆಗೆಲ್ಲರ ಸೇವೆಗಂ ಮೇಣ-
ನಂತ ಭಕ್ತಿಗೆ ಮೆಚ್ಚಿ ಸಕಲರುಪಚಾರಕಂ
ಸಂತಸಂಬಟ್ಟು ಗುರುಮಡಿವಾಳಶಿವಯೋಗಿ ನೈಜಮಠದೊಳು ವಾಸಿಸಿ ॥
ಸಂತತಂ ಶಿವಪೂಜೆಯೊಳು ಯೋನಿದ್ರೆಯೊಳ
ಗಂತರಂಗವು ಮುಳುಗಿ ಶಾಂತಿದಾಳ್ದಿರಲು ವೇ
ದಾಂತಮರ್ಮವ ಧರ್ಮಕರ್ಮವನು ನೀತಿ ಪದ್ಧತಿಯನುಂ ಬೋಧಿಸುವರು ॥೬೦॥

ಇಂತಿರಲ್ಕೊಂದುದಿನ ವಜ್ಜಪ್ಪ ಕೋಟಿಗೆಯು
ಶಾಂತನೆಲೆಗಾರರ ಶಿವಪ್ಪನುಂ ಸದ್ಭಕ್ತಿ
ವಂತರಿರ್ವರು ಕೂಡಿ ತಮ್ಮ ನೇಗಿನಹಾಳ ದೇಸಾಯಿ ರುಕ್ಮಪ್ಪನ ॥
ಸಂತರೊಡೆಯನ ದರ್ಶನಾರ್ಥವಿಾ ಗರಗಕ್ಕೆ
ಸಂತಸದಿ ಕರೆದೆ ತಂದು ಕುಂಬಿಟ್ಟು ಮುಂದೆ ನಿಂ
ದಿಂತು ಭಯಭಕ್ತಿಯೊಡವೆರೆದವರು ಬಿನ್ನಹಂ ಗೈದರೆಂತೆನೆ ಪೇಳ್ವೆನು ॥೬೧॥

ಗುರುದೇವ ನಮ್ಮೂರ ದೇಶಮುಖನಿವನು ಬಲ್
ಸಿರಿವಂತನಿರ್ದು ತಾಂ ಪ್ರಕೃತಿಯಿಂದಂ ಕ್ಲೀಬ
ನಿರುತಿಹನಿವಂಗಿಲ್ಲ ಸಂತಾನವದಕಾಗಿ ನಿಮ್ಮಡಿಯ ಮರೆಹೊಕ್ಕಿಹ ॥
ನೆರೆ ತವಿಸುತವನ ಕ್ಲೀಬತ್ವಮಂ ವರಸುತನ
ಕರುಣಿಸುವದೆಂದು ಬೇಡಲ್ಕಾಗ ಗುರುವರನು
ವರ ಸುಪ್ರಸಾದಮಂ ಕೊಟ್ಟು ಸೇವಿಸವೇಳ್ದವನಭೀಷ್ಟವ ಸಲ್ಲಿಸಿದನು ॥೬೨॥

ಇಂದುಧರನವತಾರಿಯೊರೆದಂತೆ ಮರುದಿನವೆ
ಬಂದವ್ವ ರುಕ್ಮಪ್ಪರೆಂಬ ದಂಪತಿಗಳು
ತಂದ ನೂರಾದ ರೂಪಾಯಿಗಳ ಮುಂದಿಟ್ಟು ವಂದಿಸಲು ಮಹಿಮಾಬ್ಧಿಯು ॥
ನಿಂದಿರುವ ದಂಪತಿಗಳೀರ್ವರಾ ಫಣೆಯೆಡೆಗೆ
ಚೆಂದವಹ ಭೂತಿಯುಂ ಬೊರೆದು ರಾಮನಗೌಡ
ಇಂದು ಸಂಜೆಯೊಳಿವರನುಣಿಸಿ ಕುದುರೆಯ ಕೋಣೆಯೊಳಗಿವರ್ಗೆ
ಮಲಗು ಹೇಳು ॥ ೬೩ ॥

ಆ ದಿನದ ಸಂಜೆಯೊಳು ನಲ್ಲುಣಿಸನುಂಡಿವರು
ಮೋದದಿಂ ಗುರುಪೇಳ್ದ ತಾಣದೊಳು ಪವಡಿಸ
ಲ್ಕಾ ದಿವ್ಯಯೋಗಿಕರಭಸ್ಮಧೃತಿಪರುಷವದು ಮುಟ್ಟೆ ಕ್ಲೀಬತ್ವಲೋಹ ॥
ಸೇದಿ ಪುರುಷತ್ವ ಕಾಂಚನವಾಗೆ ದೇಸಾಯಿ
ಸಾಧು ಯೋಗಿಯ ಮಹಿಮೆಯನ್ನು ಬಣ್ಣಿಸುತೆ ತ
ನ್ನಾದಯಿತೆಯೊಡವೆರೆದು ರತಿಸುಖದೊಳಿರುಳೆಲ್ಲಮಿರ್ದು ಬೆಳಗಾದಪೋಲೆ ॥ ೬೪ ॥

ಮಿಂದು ಹುಡಿಯನ್ನುಟ್ಟು ಬಂದೀರ್ವ ದಂಪತಿಗ
ಳಂದು ಗುರುಪಾದಾರವಿಂದಕ್ಕೆ ಕುಂಬಿಟ್ಟು
ಬಂದವ್ವಸತಿ ನಾಣ್ಚಿ ಕೆಳಮೊಗಂ ಮಾಡಿ ತಾನೊಂದೆಸೆಯನೊಂದಿ ನಿಲಲು ॥
ಮುಂದಿರ್ದ ದೇಸಾಯಿ ಗುರುವೆ ನಿನ್ನಯ ಮಹಿಮೆ
ಯಿಂದೆನಗೆ ಪುರುಷತ್ವವುಂಟಾದುದೈ ಯೋಗಿ
ವೃಂದಪತಿ ಧನ್ಯನಾನೆಂದೆರಗಿ ಸತಿಯೊಡನೆ ಪೋದನವನಿರದಊರಿಗೆ ॥ ೬೫ ॥

ಕೂರ್ಮನಕ್ಷಿಯರಾಗ ಮರಿಗಳಂ ಸಲಹುವುದು
ಪೇರ್ಮೆಯಿಂ ಪರುಶನದಿ ಕಾವುದಾ ಮೀನ್‌ಮರಿಯ
ಕೂರ್ಮಮೀನಗಳ ಸಾಮರ್ಥ್ಯವಿನಿತಿರ್ದೊಡೀ ಯೋಗಿಯೊಳಗೆನಿತಿರದದು ॥
ಕರ್ಮಸಾಕ್ಷಿಯತೆರದಿ ಭುವನಕುಪಕೃತಿ ಗೈವ
ಧರ್ಮವೀ ಸದ್ಗುರುವಿಗಿರಲೇಕ ಪುರುಷತ್ವ
ಮರ್ಮದಾನಂ ಗೈವುದೇಂ ಚೋದ್ಯಮೆಂದೆಲ್ಲ ಜ್ಞಾನಿಗಳು ಬಣ್ಣಿಸಿದರು ॥ ೬೬ ॥

ಚೆಂದ ನೇಗಿನಹಾಳದಿಂಚಲದ ಬಸವಪ್ಪ
ನಂದಮಾವಾಸ್ಯೆಗೊರ್ಮೆಯು ಯೋಗಿದರ್ಶನ
ಕ್ಕೆಂದವನು ಗರಕ್ಕೆತಂದು ದರುಶನಗೊಂಡು ಮಗುಳ್ದೂರಿಗೈದುತಿಹನು ॥
ಸಂದಲಾ ಹನ್ನೊಂದಮಾವಾಸ್ಯೆಗಳು ಬಳಿಕ
ಮೊಂದಮಾವಾಸ್ಯೆಯುಳಿಯಲು ವರ್ಷಪೂರ್ತಿಗೈ
ತಂದನಾತನು ನೇಮದಂತುಳಿದಮಾವಾಸ್ಯೆಗಾತನಂ ನೋಡಿ ಗುರುವು ॥೬೭॥

ಎಲೆ ಬಸವ ಕೇಳು ನೀಂ ಕಡುಬಡವನಿರ್ದು ಮನ
ದೊಲವಿನಿಂದಿಲ್ಲಿಗೇಂ ಕಾರಣಂ ಬಹೆ ಪೇಳು
ಸಲುವ ಕೂಲಿಯು ನಿನಗೆ ತಪ್ಪುದಿಲ್ಲವೆ ನಿನ್ನ ಮನದಿಷ್ಟವೇನಿರುವುದು ॥
ಹಲವು ಮಾತೇಕಿನ್ನು ಪೇಳೆನಲು ಬಸವಪನು
ನೆಲದೊಳುದ್ದಕೆ ಬಿದ್ದು ತಾನೆದ್ದು ಸದ್ಗುರುವೆ
ಕಲುಷಹರ ಎನ್ನ ಸತಿಗಾದುದಿಪ್ಪತ್ತೈದು ಬರಿಸಮಾರ್ತವಕಾಲವು ॥೬೮॥

ಇನ್ನೆಗಂ ಮಕ್ಕಳಿಲ್ಲದೆ ಬನ್ನಬಡುವೆನಾ
ನಿನ್ನು ನೀಂ ದಯಮಾಡು ವರ್ಷಂಬರಂ ನಾನು
ನಿನ್ನ ಮರೆಹೊಕ್ಕಿರುವೆ ಚೆನ್ನಿಗನ ಪುತ್ರನಂ ಕೊಡು ಬೇಗ ಯತಿರಾಜನೇ ॥
ಎನ್ನುವಾತನ ನೋಡಿ ಶಿವಯೋಗಿವಲ್ಲಭನು
ನಿನ್ನಿನೆಯುಳುದರದೊಳಗಣುಗನುದಯಿಸಿ ವಂಶ
ವನ್ನು ಬೆಳಗುವನು ದಿಟವಿನ್ನಿತ್ತ ಬರಬೇಡವಿನ್ನೊಂದನೊರೆವೆ ಕೇಳು ॥೬೯॥

ಪುಟ್ಟಿರ್ದ ಹಸುಳನಂ ಪೊಟ್ಟಮೊದಲೆಮ್ಮೆಡೆಗೆ
ನೆಟ್ಟನೇ ಕರೆತಂದೊಡಾವೆ ಪೆಸರಿಟ್ಟು ಮುದ
ವಟ್ಟು ಕಳುಹುವೆವು ಮರೆಬೇಡ ನೀನಿನ್ನು ಪೋಗೆಂದಾತನಂ ಕಳುಹಲು ॥
ಕಟ್ಟಳ್ತಿಯಿಂದವನು ತನ್ನೂರೊಳಿರಲು ಗುರು
ಕೊಟ್ಟ ವರದಿಂದವನ ಸತಿಯು ಪೊಟ್ಟೆಯಿಸಣ್ಣಗ
ನಿಟ್ಟಿಸಿ ಬಂದ ಸುಮುಹೂರ್ತದೊಳಗುದಿಸೆ ಸತಿಪತಿಗಳುಂ ನಿಟ್ಟಿಸಿದರು ॥೭೦॥

ಅಕ್ಕರದ ಮಗನ ಮುದ್ದಿಕ್ಕಿ ಕಡು ಕಕ್ಕುಲತೆ
ಮಿಕ್ಕು ಪಕ್ಕದೊಳಿಕ್ಕಿಯುಕ್ಕುವಾನಂದಾಶ್ರು
ಗಕ್ಕನೇ ಉದುರೆ ಮೊಲೆಯೂಡಿ ತಬ್ಬುಬ್ಬಿ ಸತಿ ಪಕ್ಕಾದಳಾನಂದಕೆ ॥
ತಕ್ಕ ಪೊಳ್ತುವ ನೋಡಿ ಕೆಲದಿನವನಂತರಂ
ಚಿಕ್ಕಮಗುವನ್ನೆತ್ತಿ ಸತಿಪತಿಗಳೀರ್ವರುಂ
ಮುಕ್ಕಣ್ಣನವತಾರವಾಂತ ಮಡಿವಾಳಶಿವಯೋಗಿಯೆಡೆಗೈತಂದರು ॥೭೧॥

ತಂದಿರುವ ನಂದನನ ನೋಳ್ಪರಾನಂದನನ
ಸುಂದರನ ಕಂದನ ನಿರೀಕ್ಷಿಸುತೆ ಯೋಗಿಮಣಿ
ಚಂದವಹ ತೊಟ್ಟಿಲೊಳು ಪಟ್ಟಿರಿಸಿ ನೀಲಕಂಠನುಮೆಂದು ಪೆಸರಿಟ್ಟನು ॥
ಬಂದಿರುವ ಸತಿಗೆ ಪೊಸಶೀರೆಯನ್ನುಡಿಸಿ ಮೇಣ್
ಕಂದನಿಗೆ ಕಾಲ್ಗೆಜ್ಜೆಯುಂದುಗೆಯನಿಡಿಸಿ ತಾ
ನೊಂದು ದಿನವಿರಿಸಿ ಮರುದಿನಮವರನೂರಿಂಗೆ ಕಳುಹಿದನು ಶಿವಯೋಗಿಯು ॥೭೨॥

ಮೇಲೆನಿಸಿ ಮೆರೆವನುರುತರ ಶೀಲನಧಿಕ ಮಹಿ
ಮಾಲಯನ ಗುರುವರನನುಗ್ರಹದ ಬಲದಿಂದ
ನೀಲಕಂಠನು ಬಳೆದು ಮುಂದೆ ವಿದ್ಯಾವಂತನೆನಿಸಿ ತಾಂ ಶಾಲೆಯೊಳಗೆ
ಮೂಲನಹ ಪ್ರಾಧ್ಯಾಪಕನುಮೆನಿಸಿ ಮತ್ತಮನು
ಕೂಲ ದೈವದಿನಧಿಕ ಸಂಪತ್ತಿಯಂ ಪಡೆದು
ಶಾಲಿವಾಹನಶಕದ ಪದಿನೆಂಟುನೂರದರವತ್ತೆರಡರೊಳು ಗತಿಸಿದಂ ॥೭೩॥

ಆತನಾತ್ಮಜನು ಚಿನ್ನಪ್ಪನಿಂಚಲದ ವಿ
ಖ್ಯಾತನಾಗಿಹ ವಕೀಲನುಮೆನಿಸಿ ಸರ್ವಪ್ರ
ಭೂತ ಬೆಳಗಾವಿ ಪತ್ತನದೊಳೀಗಿರ್ಪನವನೇಗೈದೊಡೆಂದೊಡುಸುರ್ವೆ ॥
ಈತನಾ ಗರಗದೊಳು ಯೋಗಿಮಠದೆತ್ತಿನೊಳು
ಪೂತವಹ ಕೊಟ್ಟಣದ ಭೋಜನದ ಶಾಲೆಗಳ
ನೋತೈದು ಸಾವಿರದ ರೂಪಾಯಿಗಳ ವೆಚ್ಚಗೈದೀಗ ಕಟ್ಟಿಸಿಹನು ॥೭೪॥

ಯೋಗಿಮಡಿವಾಳಗುರುವರ್ಯನಾಶೀರ್ವಾದ
ಯೋಗದಿಂ ಬಳೆವ ವಂಶದೊಳುದಯಿಸಿದನಿವನು
ಭೋಗವೈಸಿರಿಯು ಭವರೋಗಕಾಸ್ಪದವೆಂದು ತನ್ನ ಮನದೊಳು ಭಾವಿಸಿ ॥
ಯೋಗಿಸೇವೆಯಗಾಗಿ ಸಿರಿಯನ್ನು ಧರ್ಮವಿನಿ
ಯೋಗಕ್ಕೆ ಸಲ್ಲಿಸೀ ಭುವನದೊಳಗಿಹ ಧರ್ಮಿ
ಪೂಗದೊಳು ಪೊಸಜಸವನೊಂದಿ ವನು ಚಿರಕಾಲದೊಳು ಬಾಳಲೆಂದೆಳಸುವೆಂ ॥೭೫॥

ಮರೆಹೊಕ್ಕ ಕಾಳಿದಾಸಂಗೆ ನೀಂ ವರವಿತ್ತೆ
ಪರಮ ವಿದ್ಯಾರಣ್ಯಗೊಲಿದು ಪೊಂಗಳ ಸುರಿದೆ
ಸ್ಮರನ ಕಳೆಕೊಂಡಿರ್ದ ರತಿದೇವಿಯಂ ಪೊರೆದೆ ವರದೆ ಸದ್ಬಾಡಿಮರದೆ ॥
ನಿರುತಮಂ ಶಿಕೆ ನಿನ್ನ ಹೊರತಾರನ್ ಆವೆ ನಾಂ
ಮರೆಹೊಕ್ಕೆನೆನ್ನನ್ನು ಪೊರೆಯದಲೆ ನೀಂ ಸುಮ್ಮ
ನಿರುವುದಿದು ಸಮುಚಿತವೆ ಪೇಳೆನಗೆ ಗಿರಿಜಾತೆ ವಿಖ್ಯಾತೆ ಪೂತೆ ಮಾತೆ ॥೭೬॥

ಶ್ರೀಶಿವಾದ್ವೈತಪರವಿದ್ಯಾನವದ್ಯಾತಿ
ವೈಶದ್ಯವಿದೋತ್ತಮಾನನ ಮಹಾಲಿಂಗ
ದೇಶಿಕಶಿಖಾಮಣಿಯ ಪಾಣಿಕಂಜಾತಸಂಜಾತನು ಕವೀಶದೂತಂ ॥
ಆ ಸದಾಶಿವಕವಿಯು ಭೂಸದಾಶಿವನ ಯೋ
ಗೀಶನ ವಿಪಾಶನ ನಿರಾಶನುರುಮಡಿವಾಳ
ದೇಶಿಕನ ಚರಿತದೊಳೆನಿತ್ತೂರ ಚರಿಸಿದಿದು ಹನ್ನೆರಡನೆಯ ಸಂಧಿಯು ॥೭೭॥

ಅಂತು ಸಂಧಿ ಹನ್ನೆರಡಕ್ಕಂ ಪದಂಗಳು ೭೦೫ ಮಂಗಳಂ
ಶ್ರೀ ಶ್ರೀ

## ೧೩ನೆಯ ಸಂಧಿ

ಸೂಚನೆ:— ಪಾದ್ರಿಸಾಹೇಬನಂ ಗೆಲಿದು ಮಡಿವಳಯೋಗಿ
ಯದ್ರಿಜೇಶನ ಮತವ ವಿಸ್ತರಿಸಿ ಮತ್ತಮು
ಕ್ಷುದ್ರ ಮಹಿಮೆಗಳನುರೆ ತೋರಿ ಭೂಮಂಡಲದಿ
ಮೆರೆದುದ ಳ್ವೆನಿಲ್ಲಿ ॥

ಭಾವಕಿಯು ಪರವಿನಾಚಿಯು ಪಣವಧುವ ಕುಚದೊ
ಳಾವಗಂ ನಂಬಣ್ಣಗೊಲಿದೆ ಗಡ ಗೊಲ್ಲಾಳ
ಭಾವಿಸಿದ ಕುರಿಹಿಕ್ಕಿಯೊಳು ಲಿಂಗರೂಪದಿಂ ಪ್ರತ್ಯಕ್ಷನಾದೆ ಶಿವನೆ ॥
ಭಾವಿಕರು ತಾವಾದರಾರ್ ಶರಣರವರವರ
ಭಾವಿಸಿರ್ಪೊಡವೆಗಳೊಳಾಗಳಾವಿರ್ಭವಿಸಿ
ಯೋವಿ ಮೈದೋರಿದೆ ಶಿವಾಧವನೆ ನೀನೆನ್ನ ಭಾವದೊಳು ಮೈದೋರಿ ಸಲಹು ॥೧॥

ಬೆಲೆವೇಣು ತಾನಾದ ಪರವಿನಾಚೆಯ ಕುಚದೊ
ಳೊಲಿದ್ಯನಂಬೆಣ್ಣಂಗೆ ಗೊಲ್ಲಾಳನಿಗೆ ಹಿಕ್ಕೆ
ಯೊಳು ತೋರ್ದೆ ಬಿಜ್ಜಮಾದೇವಿಗರ್ಭಕನಾದೆ ಭಾವವಿದ್ದಂತೆ ಶಿವನೆ ॥
ಸಲುವ ಭಾವವದುಳ್ಳ ಶರಣರಾರಿಹರವರ
ಸಲೆ ಭಾವಿಸಿದೊರ್ಡವುಗಳೊಳು ನೀನುದ್ಭವಿಸಿ
ಚೆಲುವ ಮೈದೋರಿದೆ ಶಿವಾಧವನೆ ನೀನೆನ್ನ ಭಾವದೊಳು ದಯವೋರಿಸೈ ॥೨॥

ಏಸುಕ್ರಿಸ್ತನ ಮತವ ಪಾದ್ರಿಸಾಹೇಬನುಂ
ಲೇಸಿನಿಂ ಬೋಧಿಸುತೆ ಸಂಚರಿಸಿ ಗರಗದೊಳು
ವಾಸಗೈದಾ ಯೋಗಿಮಡಿವಳರ ಮಹಿಮೆಯುಂ ಕೇಳಿ ಮಠಕೈತರುತಿರೆ ॥
ಭಾಸಮಾನನು ಯೋಗಿ ನೀನಾರೆನಲ್ಕೆ ನಾ
ನೇಸುಕ್ರಿಸ್ತನ ಮತದ ಪಾದ್ರಿಸಾಹೇಬನಿಹೆ
ನೇಸುಕ್ರಿಸ್ತನೆ ಎಲ್ಲ ದೇವರೊಳು ಮಿಗಿಲವನು ತನ್ನವರನೆತ್ತಿ ಪಿಡಿವ ॥೩॥

ಆವನು ಮರೆಹೊಕ್ಕವರ ಭವವ ಕಳೆವನು ಸದಾ
ಶಿವಸುಖವ ನಿತ್ಯ ಸಂಪತ್ತಿಯುಂ ಸಲೆ ಕೊಡುವ
ನವನೋರ್ವನೇ ದೇವರಿನ್ನಾರುಮಿಲ್ಲೆನಲು ಬಳಿಕ ಶಿವಯೋಗಿಯು ॥
ಅವಧರಿಸು ಪೇಳ್ವೆನೊಂದಂ ನಾನು ನಿನ್ನ ಮತ
ದವನು ತಾನಧಿಕನಾದೊಡೆಮೆಮ್ಮ ಗೇವರ ಮ
ಲವನು ಭುಂಜಸುವನೆನಲದು ಕೇಳಿ ಪಾದ್ರಿಯುಂ ನಿಮ್ಮ ದೇವರದಾರೆನೆ ॥೪॥

ಇರುವನಿದೊ ನೋಡೆಂದು ಬೀಸುಕಲ್ಲನು ತೋರೆ
ಮರುಮಾತನಾಡದಾ ಪಾದ್ರಿಸಾಹೇಬನುಂ
ನೆರೆ ನಿರುತ್ತರನಾಗಿ ತದ್ವಾಕ್ಯಚಾತುರಿಗೆ ಮೆಚ್ಚಿ ಪೋದನು ಸುಮ್ಮನೆ ॥
ಗುರುಗಳಾಡಿದ ಮಾತಿನಾಶಯವದೇನೆಂದೊ
ದೊರೆವೆ ಬೀಸುವಕಲ್ಲುದೇವರದು ಬಿಟ್ಟ ಮಲ
ಸರಸ ಪಿಷ್ಟವದಾಗಲದು ನಿನ್ನ ದೇವರಿಗೆನೈವೇದ್ಯವೆಂಬುಕ್ತಿ ॥೫॥

ಆ ದೇವನೀ ದೇವನೆಂಬುದೆಲ್ಲವು ಸಟೆಯು
ಮೂರುದೇವರುಂ ಸುಳ್ಳು ನಾಮರೂಪವು ಮಿಥ್ಯೆ
ವಾದವದು ಪ್ರಸಿಯಸ್ತಿ ಭಾತಿ ಪ್ರಿಯತ್ವ ದೊಡನೆರೆದೋರ್ವನೇ ದೇವನು ॥
ವೇದವದು ನೇಹನಾನಾಸ್ತಿಯಿಂತೆಂದುಸುರ್ಗು
ಮಾದೇವನಾದೇವನೋರ್ವನೇ ನಿಜವು ಮಿ
ಕ್ಕಾದ ದೇವರುಗಳೆಲ್ಲವು ಪ್ರಸಿಯು ನೋಡೆಂದು ಗುರುಗಳುಕ್ತಿಯು ಭಾವವು ॥೬॥

ಜ್ಞಾನಿಮಡಿವಳಯೋಗಿ ಗರಗದೊಳಿರುತಿರ
ಲ್ಕಾ ನಾಡಸುತ್ತಲಾ ಕಾಲದೊಳು ಪಾದ್ರಿಯರ
ದೇನು ಮಾಟವು ಸಾಗದಿರ್ಪುದದರಿಂ ಜನರು ಜಾತ್ಯಂತರವ ಸೇರದೆ
ಊನವಾಗದ ಸುಖದೊಳಿರ್ದು ನಿಜಧರ್ಮಕ್ಕೆ
ಧೀನರಾಗುತ್ತಿರ್ದರವರೆಲ್ಲರೆಂದೊಡಿದು
ಮೌನಿಮಣಿ ಮಡಿವಾಳಗುರುವರನ ಸಂಗತಿಯ ಫಲವೆಂದು ತಿಳಿಯಲಕ್ಕು ॥೭॥

ಸಿರಿಯುಳ್ಳ ಗಂಗಪನು ಕುರ್ಲಿಯೆಂಬುವನಿವನು
ಕರಣಿಕನು ತನ್ನೊಡನೆ ಪಿಂದೆ ಬರೆ ಭಕ್ತಿಯಿಂ
ಕರದಲ್ಲಿ ಕಾಯಿ ಕಪ್ಪುರಗೊಂಡು ಪಾಶಕ್ತಿದಿ ಮುಂದಿಟ್ಟು ಗುರುವಿಗೆರಗಿ ॥
ಪರಮಯೋಗಿಯೆ ನಮ್ಮ ಮನೆಯ ಮಂಡಳಿಗೆಲ್ಲ
ಪಿರಿತಿನಿಯ ಬಾಧೆಯದು ಪಿರಿದಿಹುದದಂ ನೀನು
ಪರಿಹರಿಸಿ ಕಾಪಾಡು ದಯಗೂಡಿ ನೀ ನೋಡು ಸೊಗ ನೀಡು ತಡಮಾಡದೇ ॥೮॥

ಎಂದುದಂ ಕೇಳಿ ದಯಗೂಡಿ ಗುರುದೇವನಾ
ನಂದದಿಂ ಗಂಗಪ್ಪಗಿಂತೆಂದನೆಲವೊ ನೀಂ
ತಂದು ಕೊಡು ನೂರುರೂಪಾಯಿಗಳ ದಾಸೋಹಕಾ ಬಾಧೆ ಪೋಪುದೆನಲು ॥
ಎಂದ ಮಾತಿಗೆ ಲೋಭಿ ಮಂದಮತಿ ಗಂಗಪ್ಪ–
ನಂದಾತ್ಮ ಮನದೊಳಗೆ ಸನ್ಯಾಸಿಯೆಂತಿಂಗೆ
ಚಂದವೇಂ ಧನದಾಸೆಯೆಂದು ನಿಂದಿಸುತಾತನೈದಿದನು ತನ್ನ ಮನೆಗೆ ॥೯॥

ಲೋಭದಿಂ ಬೇರೊಂದು ದುರ್ಗುಣವದಿಲ್ಲೆಂದು
ಶೋಭನದ ನಿಜಗುಣಾರ್ಯನ ನೀತಿ ವಾಕ್ಯವದು
ಶೋಭಿಪುದು ಲೋಭಿಯಾದವನು ಬಹುಮಾನ್ಯನೆಂ ಸನ್ನಿಯಿಂ ಮನ್ನಿಸುವನೆ ॥
ಆ ಭವದ ಪಾಶವನು ಹರಿದು ದುರ್ಮದನನ ಪ
ರಾಭವಿಸಿ ಸದ್ವಿರತಿ ಸುಜ್ಞಾನವುಪರತಿಯು
ಮಾಭರಣವೆನಿಸಿದನ ಮಡಿವಾಳಗುರುವರನ ತಿಳಿವನೇನಿ ಲೋಭಿಯು ॥೧೦॥

ಮನೆಗೆ ಪೋಪನ್ನೆಗಂ ಪುಟ್ಟಿರ್ದ ಜ್ವರದಿಂದ
ತನುಭಾನವಳಿದು ಬಾಯೊಡೆದು ಪೋಗಿ ಕೈಸನ್ನೆ
ಯನುವಾಗಲದಗಂಡು ತಮಗೊವಗಿದಳಲಿಂದ ಮನೆಯ ಜನರೆಲ್ಲರಾಗ ॥
ಮನದೊಳಗೆ ದುಗುಡಗೊಂಡೆಮ್ಮಪ್ಪನಹ ಗಂಗ
ಪನಿಗಿನಿತಿದೇನಾದುದಕಟಕಟ ದೈವವೇ
ಎನುತೆ ತತ್ತನಯರಾ ಸತಿಯು ಮುಂತಾದವರು ಮರುಗುತಿರ್ದರು ದುಃಖದಿ ॥೧೧॥

ಆ ಬಳಿಕಮವನ ಸತಿ ತಾನು ಗಾಬರಿಯಾಗು
ತೀ ಬನ್ನಬಿಡುವ ಪತಿಯನ್ನು ನಿರುಕಿಸಲಮ್ಮ
ದಾ ಬುದ್ಧ ಮಡಿವಾಳರಡಿಗಾಣಿಲಿಟ್ಟೆಯಿಂ ಕಾಯಕಪ್ಪುರಗೊಂಡು ತಾ ॥
ಶ್ರೀ ಬಹಳಮಹಿಮಗುರುಮಠಕ್ಕೈದಿ ನಿಜಪತಿ ತ
ನೂಬಾಧೆಯಂ ತಿಳುಪಲಡಿಗೆರಗಿ ಗುರುಗಳಿಗೆ
ತಾ ಬೆಸಸಿದಳು ಮುಂದೆ ಪೇಳ್ವಂತೆ ಬಹುಚಿಂತೆಯುದು ಮುಂತೆ ಕವೆಗಾಣಲು ॥೧೨॥

ಯತಿಪ ಎನ್ನಯ ಪತಿಯು ಬಾಯ್ ಪೋಗಿ ಮೈಗಾದು
ಸ್ಮೃತಿತಪ್ಪಿ ನೆಲನಪ್ಪಿ ಬೀಳ್ದಿಹನು ಕರುಣಿಸಯ್
ಗತಿಮತಿಯು ನೀವೆ ಗಡ ಬೀಳಗಳೆಬೇಡೆಂದು ದೈನ್ಯದಿಂ ಬೇಡಿಕೊಳಲು ॥
ಮತಿವಂತೆಯೋ ಮರುಳಬಾಧೆ ಪೋಗಲು ನಿನ್ನ
ಪತಿಗೆ ಶತಕೌಪ್ಯಕವನೀಯೆನಲ್ಕೀಯದವ
ನತಿಕೃಪಣನತಿಗಳೆದು ಪೋದನದಂ ನೀನು ಶತರೌಪ್ಯವೀಯಲೊಳಿತು ॥೧೩॥

ಎನೆ ಕೇಳಿ ಮಾನಿನಿಯು ಗುರುವೆ ಎನ್ನಯ ಪತಿಯು
ತನಗೆ ತಿಳಿವಿಲ್ಲದರಿನೆಸಗಿದಪರಾಧವನು
ಮನದೊಳಿರಿಸದೆ ಕ್ಷಮಿಸು ಶತರಾಪ್ಯಗಳನೀಗ ತಹೆನೆಂದು ಮನೆಗೆ ಪೋಗಿ ॥
ಧನವನೆಲ್ಲವ ತಂದು ಕೊಡಲಾಗ ಶಿವಯೋಗಿ
ವಿನುತ ಭಸಿತವನೀಗ ಸರ್ವಾಂಗದೊಳು ಪೂಸೆ
ತನುಬಾಧೆ ಭೂತಬಾಧೆಯು ಪೋಪುದೆಂದುಸುರಿ ಭೂತಿಯನ್ನಿತ್ತು ಕಳುಹೆ ॥೧೪॥

ಆ ಸುದತಿಯುಸವಸದಿ ಮನೆಗೈದಿ ಗುರು ಕೊಟ್ಟ
ಭಾಸುರದ ಭಸಿತವನ್ನಿನೆಯನಂಗಕ್ಕೆಲ್ಲ
ಪೂಸಿ ಬಾಯೊಳಗಿಟ್ಟು ಗೃಹಕೆಲ್ಲ ಪ್ರೋಕ್ಷಿಸಲ್ಯಾಕ್ಷಣದೊಳೀವೇಳ್ವನು ॥
ಆ ಸುಗ್ಗಿಯೊಳು ಕೊನರ್ವ ಮಾಂದಳಿರನುಗಿದ ಪಿಕ
ದೋಸರಿಸದಾಗಳದ ಮುದ್ರೆಯದು ಪೋಪಂತೆ
ಲೇಸಿನಿಂ ಪತಿಮೌನಮುದ್ರೆ ಪೋದುದು ಮೇಣು ಭೂತಬಾಧೆಯದು
ಪೋದುದಮಮಾ ॥೧೫॥

ಗಂಗಪ್ಪನೇಳ್ದು ತನ್ನಂಗರುಜೆಯುಡಗಿದುದ
ನಿಂಗಿದೀ ಬಾಯಿ ಬಂದುದನೆಲ್ಲ ತಾನರಿದು
ಮಂಗಲಾತ್ಮಕಯೋಗಿ ಮಹಿಮೆಗಚ್ಚರಿವಟ್ಟು ಭಯಭಕ್ತಿಯುಳವಟ್ಟಿರೆ ॥
ತುಂಗಮಹಿಮನ ಲಿಂಗನೈವೇದ್ಯಕೆಂದು ತಾ
ನಂಗವಿಸಿ ಪಕ್ವಾನ್ನಮಂ ಗೈಸಿ ತಾ ಮಿಂದು
ಸಿಂಗರದೊಳಾ ಪ್ರಸಾದವ ಕೊಂಡು ಭಕ್ತಿಯಿಂ ಮಠಕೈದಿ ಗುರುವಿಗೆರಗೆ ॥೧೬॥

ಏನಿದೇಂ ಗಂಗಪ್ಪ ತಂದಿರ್ಪುದದು ಪೇಳು
ಜ್ಞಾನಿಯೋ ಲಿಂಗಪ್ರಸಾದವಿದು ಕೈಕೊಂಡು
ದೀನನಾದೆನ್ನನೀನುದ್ಧರಿಸೆನಲ್ಗುರುವು ಶಿಷ್ಯನಿಗೆ ತೆಗೆವೇಳಿ ತಾ ॥
ಸ್ವಾನುಭವಿ ಗಂಗಪ್ಪನಂ ಪರಸಿ ಕಳುಹುತಂ
ತಾನು ಮುನ್ನಿನ ಪರಿಯೊಳೆಲ್ಲ ಭಕ್ತರ ಜಯಕೆ
ಸ್ವಾನುಭವಮಂ ರೀತಿ ಧರ್ಮವನು ಬೋಧಿಸುತೆ ಗರಗದಾ ಮಠದೊಳಿರ್ದಂ ॥೧೭॥

ಭದ್ರವಹ ಗುರ್ಲದಹೊಸೂರ ಪಡಿಯುಚ್ಚಿನಾ
ರುದ್ರಪ್ಪನೆಂಬುವನು ಶಿವಯೋಗನಿದ್ರಾತಿ
ಮುದ್ರಿತ ಮನೋಂಬುಜನ ಮಡಿವಾಳಗುರುವರನ ಸದ್ಭಕ್ತನಾಗಿರುವನು
ಚಿದ್ರಮಣನಡಿಗಾಣಲಿಚ್ಛೆಯಿಂ ಭಕ್ತಿಸುರ
ಸಾದ್ರ್ರಮಾನಸನಾಗಿ ಮನೆಯ ಜನರೊಡಗೂಡಿ
ಭದ್ರಮಯವಾದ ಗರಗದ ಮಠಕೆ ತಾನವನು ಸಂಭ್ರಮದಿ ನಡೆತಂದನು ॥೧೮॥

ಬಂದು ಗುರುಗಳಿಗೆರಗಿ ನಿಲೆ ನೀನದಾರೆನಲ್
ತಂದೆ ಕೇಳಯ್ ನಾನು ಪಡಿಯುಚ್ಚಿನಾ ರುದ್ರ
ನೆಂದುಸುರೆ ಮತ್ತದಾರೆನೆ ಮನೆಯ ಮಂದಿ ಬಂದಿಹುದೆನಲ್ ಪೋಗಿರೆನಲು ॥
ಗೊಂದೆಯ ನಿಕೇತನದಿ ಬಂದಿಳಿದು ರುದ್ರಪ ನು
ತಂದ ಸಾಮಗ್ರಿಯಿಂ ಗೈದ ಪಕ್ವಾನ್ನದಿಂ
ದಂದು ಶಿವಯೋಗಿಯಂ ತಣಿಗೊಳಿಸುತಾಬಳಿಕ ತಾನುಂಡು ರುದ್ರಪ್ಪನು ॥೧೯॥

ಗುರುವರನ ಬಳಿಗೆ ಬಂದಾ ಮಾತುಕತೆಯಾಡು
ತಿರುತಿ ಕೆಲ ಪೊಳ್ತು ಕಳೆಯುಲು ಮಹಾಜ್ಞಾನಿಗಳು
ಕರುಣದೊಡನಿಂತೊರೆದರಾತಂಗೆ ರುದ್ರಪ್ಪ ಇಂದಿರುವೆಯೋ ಪೋಪೆಯೋ ॥
ಗುರುವರನೆ ಮನೆಯ ಮಂದೆಲ್ಲರುತ್ಸಾಹದಿಂ
ದರುಶನಕೆ ಬಂದಕಾರಣದಿನಿಂದುಳಿದು ನಾ
ಳ್ಗಿಂದೆ ಪೋಗುವೆವೀಗ ಪೊಳ್ತಿಲ್ಲ ಪೋಗುವೊಡೆ ಗುರುವೆ ಕೇಳಮರತರುವೇ ॥ ೨೦॥

ಪೊಳ್ತಿಲ್ಲದಿದ್ರ್ದೊಡಂ ನೀನುಳಿಯಬೇಡಿಂದು
ಕಳ್ತಲೆಯುರಾತ್ರಿಯಾದೊಡು ಪೋಗು ನಿಮುಳ್ಮರಿ
ಗಳ್ತಿಯಿಂ ಪೇಳ್ವೆನಾನೆಂದಿಂತು ಗುರುಗಳೊರೆಯುಲು ಬಳಿಕ ರುದ್ರಪ್ಪನು ॥
ಎಳ್ತರದ ಮಹಿಮೆಯುಳ್ಳರ ಮಾತನಾವನುಂ
ಕೀಳ್ತರದ ಮಾತೆಂದು ತಿಳಿಯಬಾರದು ಮನದಿ
ಮಿಳ್ತುವಿನ ಗೆಲ್ದ ಮಹಿಮಾಕರನ ಮಾತಿದುವೆ ನಿಜವೆಂದು ಪೋದನವನು ॥ ೨೧॥

ಇಲ್ಲಿಂದ ಪೋಟಾರುತಾಸು ರಾತ್ರಿಗೆ ಪೊಸೂ
ರಲ್ಲಿಗೈತಂದು ಪೆರ್ಬಾಗಿಲದ ಬಿಯಗವಂ
ನಿಲ್ಲದಲೆ ತಗೆದೊಳಗೆ ಪೊಕ್ಕು ನೋಳ್ಪನಿತರೊಳು ಪೊಕ್ಕಿರ್ಪ ಕಳ್ಳರೋಡೆ ॥
ಎಲ್ಲರೆದೆ ರ್ಝಲ್ಲೆನಲು ನಡುಮನೆಗೆ ಬರುತಿರ
ಲ್ಕಲ್ಲಲ್ಲ ವಸ್ತುಗಳು ಚೆಲ್ಲವರಿದಿರೆ ಕಂಡು
ನಿಲ್ಲದಾ ರುದ್ರಪ್ಪನೀಕ್ಷಿಸಲ್ಕಾಸೊಂದು ಪೋಗಿಲ್ಲದುದ ಕಂಡನು ॥ ೨೨ ॥

ಏನು ಗುರುವಿನ ಮಹಿಮೆಯೇನು ಗುರುವಿನ ಕೃಪೆಯಿ
ದೇನು ಗುರುವಿನನೂನವಾದ ಕಾಲಜ್ಞಾನ
ವೇನು ಕಳ್ಳರಪೋಟವೇನು ಗುರುವಿನ ನೋಟವೇನಿದೆಂದೊಳಗೆ ತಿಳಿದು ॥
ಹೀನತಸ್ಕರವಶ್ಯವಾಗ ಪೊಡವೆಗಳನ್ನು
ತಾನೆ ಸದ್ಗುರುವೆಮ್ಮಧೀನಗೈಯ್ಯಲ್ಕೆವುಗ
ದೇನುವೊರೆಯದೆ ನಮ್ಮನೆಲ್ಲರನ್ನುಳಿಗೊಡದೆ ಕಳುಹಿಸಿದನಚ್ಚರಿಯಲಾ ॥ ೨೩ ॥

ಕಳ್ಳರಿಗೆ ಸಿಕ್ಕು ಪೋಗುವ ಸೊತ್ತು ತನ್ಮಹಿಮೆ
ಯುಳ್ಳ ಮಡಿವಳಯೋಗಿವರನನುಗ್ರಹದಿನಿಂ
ದೆಳ್ಳನಿತು ಪೊರಪೋಗದಿಲ್ಲಿಯೇ ಉಳಿದಿಹುದು ಗುರುವರನ ಸೊಮ್ಮಲ್ಲವೆ ।
ಸುಳ್ಳಿನಿತುಮಿದರೊಳಿಲ್ಲವು ನೂಳದೆನುತಾಗ
ಳೊಳ್ಳಿತರ ಗುರುವರರ ದರುಶನಕೆ ರುದ್ರಪನು
ಬೆಳ್ಳಿಬಂಗಾರವನು ತೆಗೆದುಕೊಂಡೆಲ್ಲರೊಡನೈದಿದನು ಗರಗಕಾಗ ॥ ೨೪ ॥

ಇಮ್ಮಡಿಸಿದಾ ಭಕ್ತಿಯಿಂದ ರುದ್ರಪನಂದು
ದಿಮ್ಮಿದರ ಗುರುವರ್ಯರಡಿದಾವರೆಗೆ ನಮಿಸಿ
ಜುಮ್ಮೆಂದು ಪೊಂಪುಳಿಗಳೇಳೆ ಕುಳಿತೆಲ್ಲವಂ ಪೇಳಿ ಬಿತ್ತಿಂತೆಂದನು ॥
ಸೊಮ್ಮಿದೆಲ್ಲವು ನಿಮ್ಮದಿದು ಕೊಳ್ಳಿರೆಂದೆನುತೆ
ಹುಮ್ಮಸದಿ ಬೆಳ್ಳಿಬಂಗಾರವನು ಮುಂದಿಡಲು
ತಮ್ಮ ಕೇಳಿದು ಶಿವನ ಸೊಮ್ಮು ನಿಮ್ಮಲ್ಲಿರಲಿ ಶಿವನ ಕೃಪೆಯಿಂದುಳಿದುವು ॥ ೨೫ ॥

ಏದ ಗುರುವಿನ ಮಾತಿಗಂದು ರುದ್ರಪನು ಬಿಸ
ಪಂದವೆನುತಂ ತಾನು ಮುದಗೊಂಡು ಗುರುವಿನಂ
ತಂದ ಸಾಮಗ್ರಿಯಿಂ ತಣಿಗೊಳಿಸಿ ಮರುದಿನಂ ಬಾದನಾತ್ಮಗ್ರಾಮಕೆ ॥
ಮಂದಿಯೀವಾರ್ತೆಯಂ ಕೇಳಿಯಚ್ಚರಿದಾಳಿ
ಯಿಂದುಧರನಾಕೃತಿಯನೊಂದಿದನ ಗುರುವರನ
ಪಂದಮಹಿಮೆಯನಾಗಳಳ್ತಿಯಿಂ ಬಣ್ಣಿಸಿದರತಿಭಕ್ತಿಯೊಡನೆಲ್ಲರು ॥೨೬॥

ಒಮ್ಮೆ ಜಿಲ್ಲೆಯಧಾರವಾಡದಧಿಕಾರಿ ತಾ
ಸುಮ್ಮನೇ ಏನೊಂದು ನೆವದಿ ಗರಗಕೈದಿ
ನೆಮ್ಮುಗೆಯೊಳೀ ಮಠಕೆ ಬರೆ ದಿಗಂಬರನ ಮಡಿವಾಳಗ ರುವಿನ ನಿರುಕಿಸಿ ॥
ಹಮ್ಮಿನಿಂದಿದುವೊದಲು ಬಟ್ಟೆಯುಡಲಾಜ್ಞೆಗೊಡೆ
ಸುಮ್ಮನೇ ಗುರುವೇನುವೊರೆಯುದುಡೆ ಬಟ್ಟೆಯನು
ಹೆಮ್ಮೆಯಿಂ ಸಾಹೇಬನಾಗ ಕುದುರೆಯನೇರಿ ಕಣಗಳತಿ ದಾರಿಗೈದು ॥೨೭

ನೆರಳುತಂ ಪುಗುಳ್ಚೈದಿ ಬತ್ತಲೆಯೊಳಿರವೇಳ್ಪು
ಗುರುವೆ ನೀಂ ಕ್ಷಮಿಸೆಂದು ಮಣಿದು ಪೋಗಲ್ಕವನು
ಹರನರೂಪಂದಾಳ್ದ ಮಡಿವಾಳಶಿವಯೋಗಿಯಿಂತೆಂದನೆಲ್ಲ ಜನಕೆ ॥
ಪಿರಿಯಸಾಹೇಬನೆನ್ನೊತ್ತಲಾನಂ ಸೆರೆದೆ
ಹರನೊತ್ತೆ ಸಾಹೇಬನಂ ಸರಿದನವನುಮೆನೆ
ಧರೆಯೊಳಗೆ ಮನದಲ್ಲಿ ಭಾವಿಪೊಡೆ ಶೇರ್ಗೆ ಸವ್ವಾಶೇರವೇ ಪದ ದು ॥೨೮॥

ಭರದಿಂತು ಪೇಳ್ದ ಗುರುಮಡಿವಾಳಶಿವಯೋಗಿ
ವರರಂದಮಂ ಮನದಿ ಭಾವಿಸುತೆ ಜನರೆಲ್ಲ
ರರೆಮರುಳರಂತಾಗಿಯೇನೊಂದನರಿಯದಲೆ ಬೆರಗಾಗಿ ನಿಂದು ಬಳಿಕ
ಹರಹರ ಇದಚ್ಚರಿಯು ಸಾಹೇಬನೇನೊರೆದೊ
ಡುರು ಗುರುವದಕೊಡಂಬಡತಿರಲು ಸಾಹೇಬ
ಮರಳಿ ಬಂದೊರೆಯೆ ಮೇಣದಕಾದೊಡನುಮತಿಸಿ ಗುರುವಿರ್ದನಿಂತೆಂದರು ॥೨೯॥

ಪಿರಿಯುಸಾಪೇಬನುಂ ನೆರಳುತಂ ತಿರುಗಿ ಬಂ
ದೆರಗಿ ಮೊದಲಂತೆ ಗುರುವರ ದಿಗಂಬರತೆಯಿಂ
ದಿರುವುದಿಂತೆಂದು ಪೇಳ್ವಡೆ ತನಗದೇನೊಂದು ವಿಪದವಡಸದೊಡೊರೆವನೇ ॥
ಒರೆದನಿತರೊಳು ಮೊದಲು ತನಗಾದ ವಿಪದವದು
ಸರಿಯುದಿರಲವನೆಂತು ಪೋಗುವನು ಬಗೆವೊಡೀ
ಧರೆಯೊಳಗೆ ಬ್ರಹ್ಮವರ್ಚಸದ ಮುಂದಧಿಕಾರವೆನಿತಿರ್ದೊಡೇಂ ಮೆರೆವುದೇ ॥೩೦॥

ಭೌತಿಕದ ಕ್ಷಣಿಕವಪ್ಪಧಿಕಾರವೆನಿತೊ ತಾಂ
ಸಾತಿಶಯುಮೆನಿಸಿರ್ದೊಡದು ಮಹಾತ್ಮ ಪ್ರಭಾ
ವಾತಿಶಯುದೆದುರು ಶೋಭಿಸುವದೇನಜಗಜನ್ಯಾಯುದಂತದು ಪೋಲದೇ ॥
ಭೂತಲದಿಶಾತಲನಭಸ್ಥಲಗಳೆಲ್ಲವ
ನ್ನೀ ತೆರದಿ ವ್ಯಾಪಿಸಿದ ದೊಡ್ಡಿತದ ಕಳ್ತಲೆಯು
ದ್ಯೋತಮಾನಾರ್ಕನುದಯಿಸಲವನ ಮುಂದದುವೆ ತೋರ್ಕುಮೋನೆಂದೆನಲ್ಕೆ ॥೩೧॥

ತನಿನಿದ್ರೆಯೊಳಗಿರ್ದವಂಗೆ ತನ್ನಂಗದರಿ-
ವಿನಿಸಾನುವಿಲ್ಲಮೆಂದೊಡೆ ಬಳಿಕ ತನುವಿಮೇ
ಲಣ ಬಟ್ಟೆಯುರಿವಿರ್ಪುದೆಂಬುದೆತ್ತಣವಾತದಾ ಮಾಳ್ಕೆಯಿಂ ಮತದೊಳು ॥
ಘನತರ ಶಿವಯೊಗನಿದ್ರೆಯೋಳು ಮನ ಮುಳುಗಿ
ತನುಕಾರ್ಯ ಭಾನವಿಲ್ಲದಲಿರ್ಪ ಮಡಿವಾಳ
ಮುನಿ ಮಾನನೀಯುನಿಗೆ ನಿಜದಿಸಂಬರತೆಯುರಿವೆನಿತಿಹುದು ನಿರ್ಲಿಪ್ತಗೆ ॥೩೨॥

ಉಪರತಿಯುವಸ್ಥೆಯುಂ ಪೊಂದಿರ್ದು ಸತತ ಜಗ
ದುಪಕಾರಗೋಸುಗಂ ಲೀಲೆಯಿಂ ಸಂಚರಿಸು
ವುಪಮಾವ್ಯತೀತ ಮಹಿಮಾತಿಶಯುವನು ತಾಳ್ದ ಮಡಿವಾಳಶಿವಯೋಗಿಯು ॥
ಗುಪಿತದಿಂದೊಂದು ದಿನಮುರೊಗೆ ಬರಲನಿಬ
ರಪಸದರು ಕಾಣುತೀತನ ದಿಗಂಬರತೆಗತಿ
ಕುಪಿತರಾಗುತವೋರ್ವನಿಂದವನ ತಲೆಯ ಮೇಲ್ ಝಗಝಗಿಪ ಕೆಂಡನಿಡಿಸೆ ॥೩೩॥

ಸಾಧ ಮಾಸದ ಬಿಸಿಲನುತಾಪವೊಂದು ಕಡು
ಬಾಧೆಗೊಡುತಿರ್ಪ ಕೆಂಗೆಂಡವೆರಡಿವುಗಳಲಿ
ಬಾಧೆ ತನಗಿನಿತಿರದೆ ಶಾಂತಿಯಿಂ ಪೋಗುತಿರಲದ ಗಂಡೋರ್ವನಾಗ
ಸಾಧುವರ್ಯನ ತಲೆಯು ಮೇಲಿಂದ ಕೆಂಡವಂ
ಮೇಧಾವಿಯವನಿರದೆ ತೆಗೆಯೆ ಕಾಣುತೆ ಮಹಾ
ಗಾಧ ಮಹಿಮನು ನೋಡುತಿದ್ದವಂ ತಾನೆಂರ್ವನೀಗ ತೆಗೆದವ ನೀನೆಲೈ ॥೩೪॥

ನೀವೀರ್ವರೇನು ಗಂಡಸುತನ ಮಾಡಿದಿರಿ
ಭಾವವಿರ್ದಂತೆ ನಿಮಗಭವನೊಲಿದಿಪ್ಪವ
ನ್ನೀವನೆಂದುಸುರಿ ಮಡಿವಾಳಶಿವಯೋಗಿವರ್ಯ ನಿಜ ಮಠಕೆ ಬರುತಿರ್ದನು ॥
ಈ ವರ್ತಮಾನವನ್ನೂರವರು ಕೇಳಿದು
ರ್ಭಾವಿಕನ ಕಾರ್ಯಕ್ಕೆ ಕೊರಗಿಯಾ ನೀಚನಿಗೆ
ಸಾವಿಗಳಹುದು ಮೇಣ್ ಕುಲನಾಶವಪ್ಪುದೈ ತಪ್ಪದೆಂದೆನುತಿರ್ದರು ॥೩೫॥

ಖಂಡಪರಶುವರೂಪಗೊಂಡಿರುವ ಸುಮಹಿಮೋ
ದ್ದಂಡನುರುಗುರುವರನ ಮಂಡೆಯೊಳಗಂಡಲೆವ
ಕೆಂಡವನಿಟ್ಟ ಪುಂಡನಖಂಡವಂಶವದು ಕೆಂಡಕ್ಕೆ ಗುರಿಯಾದುದು ॥
ಮಂಡೆಯುತ್ತಣದಿಂದ ಕೆಂಡವಂ ತಗೆದವನ
ಖಂಡ ವಂಶವು ಭೂಮಿಮಂಡಲದೊಳೀಗಳು
ಮಂಡನಪ್ರಾಯಮಾಗಿರೆ ಗುರುವಿನವಕೃಪೆಯು ಕೃಪೆಯುಮೆರಡೇಗೈವವು ॥೩೬॥

ರಾಗದೊಳು ಯೋಗಿಪನನಾಗಮದ ವಿಧಿಯಂತೆ
ಭೋಗ ಮೋಕ್ಷಾಪೇಕ್ಷಿ ಪೂಜಿಸಿದ ಬಳಿಕಮಾ
ಯೋಗಿಮಣಿಯೊತ್ತಿನೊಳು ತನ್ನಿಷ್ಟವಸ್ತುವಂ ಬೇಡುತಿಹುದನವಶ್ಯವು ॥
ಬಾಗದೆರಗದೆ ಭಕ್ತಿಯೋಗವಂ ತೋರಿಸದೆ
ಗೂಗೆಯುದು ಸೂರ್ಯನಂ ಜರಿವಂತೆಪೋಲಾವ
ನಾ ಗುರೂತ್ತಮನನತಿಗಳೆವನಾ ದುರ್ಮತಿಯು ಶಾಪವಂ ಕೇಳ್ವುದೇಕೆ ॥೩೭॥

ಪಿಂದೆ ಜೀವನ್ಮುಕ್ತನಹ ಜನಕ ರಾಜರ್ಷಿ
ಯೊಂದು ಕಾಲಂ ಬೆಂಕಿಯಲ್ಲಿಡಲು ಮತ್ತೆ ಬೇ
ರೊಂದು ಕಾಲಂ ಬೇಸೆಯುಣ್ಪನೊಳಗಿರುತಿರಲ್ಕೆರಡಡಿಯ ದುಃಖ ಸುಖಕೆ ॥
ನೊಂದು ಮುದವೊಂದಿರದೆ ತಾನೆಂದಿನಂತಿರ್ದ
ನೆಂದು ಪೇಳ್ವಂತಿಂದು ತಲೆಯ ಮೇಲಣ ಬೆಂಕಿ
ಯಿಂದ ಗುರುವರನು ಮಡಿವಳನು ಶಿವಯೋಗಿಮಣಿ ದಂದುಗಕ್ಕೊಳಗಾದನೇ ॥೩೮॥

ಒಂದು ದಿವಸಂ ಮುದೇನೂರ ಕರಿಗೌಡನೆಂಬವಂ
ಅಂದವಾಗಿರ್ಪ ಕನ್ನಡದ ನುಡಿ ಗಟ್ಟಿಗನು
ಬಂದು ಗುರುವಿನ ಪಾದಕಭಿವಂದಿಸುತೆ ನಿಂದು ನಿಜಗುಣಾರ್ಯನ ಪದಗಳ ॥
ಚೆಂದವೆನಿಸುವ ತಾಳಗತ್ತಿಗನುಸರಿಸಿ ಮನ
ಬಂದ ರಾಗದೊಳವನು ಹಾಡೆ ಗುರು ಕೇಳಿಯಾ
ನಂದದಿಂದೆದ್ದು ತಾಳ್ಗತ್ತಿಸನುಸರಣದಿಂ ಕುಣಿಯುತೊಡಗಿದನಾರ್ಯನು ॥೩೯॥

ರಾಗ ರಸಮಯವಾದ ಪದವ ಕರಿಗೌಡನನು
ರಾಗದಿಂ ಹಾಡುವನಿತಕ್ಕೆ ಗುರು ಶಿವಮಹಾ
ಯೋಗಿ ತಣಿಗೊಂಡು ನೆರೆ ಕುಣಿಕುಣಿದು ದಣಿದನಾ ಪರಮಲೀಲಾಮೂರ್ತಿಯು ॥
ಈಗೆನ್ನ ಕುಣಿಸಿದುದು ಕರಿಗೌಡ ನಿನ್ನ ಪದ
ರಾಗ ರಸತಾಳವದು ನಿಜಗುಣಾರ್ಯನ ಮಹಾ
ಯೋಗಿವರ್ಯನ ಜ್ಞಾನವೆಂತುಟೋ ತಿಳಿಯದೆಂದನುಪಮನು ಬಣ್ಣಿಸಿದನು ॥೪೦॥

ಕಂಕರೀ ಬ್ರಹ್ಮಯ್ಯನೆಂಬ ಶರಣನು ತನ್ನ
ಕಂಕರಿಯು ಬಾರಿಸುತೆ ಶರಣರ ಚರಿತ್ರವನು
ಕಿಂಕರತೆಯೊಡಗೂಡಿ ಪಾಡಿ ಭಕುತರು ಕೊಟ್ಟ ಹಣದಿಂದ ದಾಸೋಹವ ॥
ಘೋಂಕಸೇ ಗೈವವನ ನಿರಹಂಕೃತಿಯ ಕಂಡು
ಶಂಕರನು ನಿಜರೂಪವನ್ನುಳಿದು ಧರೆಗಿಳಿದು
ಕಂಕರೀ ಬ್ರಹ್ಮಯ್ಯನೆಡೆಗೆ ಬರುತಿರಲವನ ಕಂಕರೀವಾದನಕ್ಕೆ ॥೪೧॥

ಮೆಚ್ಚಿ ತಲೆದೂಗುತ್ತ ತೋಸೆವುತ್ತ ಬಳಿಕವನು
ಜೆಚ್ಚರನೆ ಕುಣಿಯಲಾರಂಭಿಸಲು ಬ್ರಹ್ಮಯ್ಯ
ನೆಚ್ಚರಿಲ್ಲದೆ ಬಾರಿಸಿದೊಡವನು ಕುಣಿವುತಿರೆ ಮುತ್ತಿದರು ಜನರೆಲ್ಲರು ||
ಹುಚ್ಚು ತಲೆಗೇರಿ ಬಾರಿಪ್ಪದ ಕುಣಿವುದರೆರಡ
ರಿಚ್ಛೆಯುಚ್ಚಳಿಯುದಿರ್ದುದು ಪೊಳ್ತು ಪೋಗ
ಲಚ್ಚರಿಗೊಂಡ ಪುರಜನರಿರುಳುಮಾಗಿ ಬೆಳಗಾದೊಡಂತಾಗಲು ||೪೨||

ಬೆಳಗಾದ ಮೇಲ್ ಶಿವನು ಸೋಲ್ತು ಕುಣಿವುದನುಳಿದು
ಬಳಿಕ ನಿಜರೂಪದಿಂದಿರೆ ನೋಡಿ ಬ್ರಹ್ಮಯ್ಯ
ನೆಳೆವೆರೆಯು ತಲೆಯುನಿಗೆ ಕಾಯಕದ ಹಣವಿತ್ತು ಪೋಗು ನಾಂ ಬಿಡೆನೆಂದನು ||
ತಿಳಿಯೆ ನಿನ್ನಯು ತಾಳಗತ್ತಿಗುರೆ ಕುಣಿದೆನಗೆ
ತಳುವದಲೆ ಕೂಲಿಯುಂ ಕುಡುವುದೆನೆ ನೀನುಮುಳಿ
ರೊಳಗೆ ಮನೆ ಮಾಡಿದೊಡೆ ಕುಡುವೆನೆನೆ ಸೋಲ್ತುಭವ ಹಣಗೊಟ್ಟು ಪೋದನಾಗ||೪೩||

ಕಂಕರೀ ಬ್ರಹ್ಮಯ್ಯನಿವನ ಶರಣನ ಕೈಯು
ಕಂಕರೀ ವಾದ್ಯದಿಂಚರ ಕೇಳಿ ಸಂತಸದಿ
ಶಂಕರನು ಕುಣಿದು ಕಾಯಕದ ಹಣವನ್ನಿತ್ತು ಪೋದನೆಂಬುವ ಗೇಳ್ದೆವು ||
ಲೆಂಕನೆನಿಸಿರುವ ಕರಿಗೌಡನೀ ಹಾಡಿಂಗೆ
ಭೋಂಕನೇ ಶಿವಯೋಗಿ ಕುಣಿದು ದಣಿಯದೆ ನಿರಾ
ತಂಕದಿಂದಿರ್ಪುದಂ ಪ್ರತ್ಯಕ್ಷಮಾಗೀಕ್ಷಿಸಿದೆವೆಂದು ಜನರೆಂದರು ||೪೪||

ನಿಚ್ಚನಿಚ್ಚದೊಳು ನಿಜಗುಣನ ಸುರುಚಿರಪದವ-
ನುಚ್ಚರಿಸುವದರಿಂದ ಕರಿಗೌಡನುರೆ ಹಾಡುತಿರ
ಲಚ್ಚರಿಯು ಜನಸಮುಚ್ಚಯಕ್ಕೊದಗೆ ಮಹಿಮೋಚ್ಚಯನು ಶಿವಯೋಗಿಯು ||
ಇಚ್ಛೆಯಿಂ ಕೇಳುತಿರಲದರ ಸವಿಯಾತಂಗೆ
ಹೆಚ್ಚು ಪೋಲಾಸೆಸಗಿ ಬಳಿಕಂ ಮನವ ಮಿಗೆ
ಮೆಚ್ಚಿಸಿದನೆಂದೊಡಾ ಪದದಿಂಪು ಪೊಂಪದಿನಿತುಂಟೆಂದು ಪೇಳಲರಿವು ||೪೫||

ಇಂತಿರ್ದ ಕರಿಗೌಡನೊಂದು ದಿನವಾ ಗುರುವಿ
ನಂತಿಕಕ್ಕೈತಂದು ಪದಕೆರಗಿ ಕೈಮುಗಿವು
ತಿಂತೆಂದನೆಲೆ ಜೀಯ ಅವಧಾರು ಜನ್ಮಪವನೆನ್ನದೊಂದಿಹುದ ಬಯಕೆ ॥
ಅಂತಕಾಂತಕರೂಪ ನಿನ್ನಂತ್ಯಕಾಲ ವಿಧಿ
ಮುಂತೆ ಸಾಗಿಪ ಮುದೇನೂರೊಳಪ್ಪದು ಮತವು
ಸಂತಸದಿ ನೀನಪ್ಪುಗೈದೂಡೆನಗೊಪ್ಪಿಗೆಯಕಭಯಗೊಡು ಕರುಣಾಳುವೆ ॥೪೬॥

ಎಂದ ಮಾತಿಗೆ ಮಹಾನಂದದಿಂ ಶಿವಯೋಗಿ
ಯೆಂದನೆಲೆ ಕರಿಗೌಡ ನಿನ್ನೂರಿನೊಳಗೊಂದು
ಸುಂದರ ಸಮಾಧಿಯನ್ನೆಸಗು ನಡೆ ಬರ್ಪೆನಾನೆಂದೊಡವನೇಂ ಸುಕೃತಿಯೋ ॥
ಅಂದು ಕರಿಗೌಡನಾನಂದದಿಂದೂರಿಗೈ
ತಂದು ಬಂಧುರ ಸಮಾಧಿಯ ಗೈವುತಾಬಳಿ
ಕೊಂದು ದಿನವಾಳಿಂಗೆ ಪತ್ರವನ್ನಿತ್ತು ಗುರುವರನ ಕರೆಯಟ್ಟಿದನು ತಾ ॥೪೭॥

ಆಳನಟ್ಟದೆ ನಾನೆ ಪೋಪಪೇಳ್ಕಾಗಿತ್ತು
ಬಾಳ ಮಾತೇಂ ನಾನೆ ತಪ್ಪುಮಾಡಿದೆನೀಗ—
ಳಾಳು ಮುಟ್ಟದ ಮುನ್ನ ನಾನೆ ಪೋಗುವೆನೆಂದು ಕರಿಗೌಡನತಿ ವೇಗದಿ ॥
ಪೇಳಲೇಂ ಬರ್ಪನಿತರೊಳಗಾಳು ತಾನು ತಂ
ದೋಲೆಯುಂ ಕೊಟ್ಟುದಂ ಕೇಳಿ ಕರಿಗೌಡ ನಾಂ
ಬಾಳನೆಂದೊಳಗೊಳಗೆ ಮಿಡುಮಿಡನೆ ಮಿಡುಕಿ ಬಳಿಕಾ ಯತಿಯ
ಕಾಣ್ಬ ಮುನ್ನ ॥೪೮॥

ಇತ್ತಮಾಳಿತ್ತೋಲೆಯುಂ ನೋಡಿ ಸತ್ತಮನು
ಚಿತ್ತದೊಳು ಕರಿಗೌಡನಿತ್ತಬಾರದೆ ಮದೋ
ನ್ಮತ್ತನಾಗುತ್ತಾಳಿನಿಂದೆನ್ನ ಕರೆಯಲಟ್ಟಿದನೇನ ಪೇಳ್ವನಿತರೋಳ್ ॥
ಉತ್ತರದಿ ಕರಿಗೌಡನೈತಂದು ಗುರುವಿಗೆರ
ಗುತ್ತೆನ್ನಯಪರಾಧವನು ಬೇಗ ನೀಂ ಮನ್ನಿ
ಸುತ್ತೀಗ ಬಿಜಯಗೈಯೆಂದವನು ಬೇಡುತಿರೆ ಮಾನನಿಧಿ ಶಿವಯೋಗಿಯು ॥೪೯॥

ಕೇಳು ಗೌಡಾ ಎನ್ನ ಬರವಮಾಡಿಗೊಳ್ವುದ
ಕ್ಕಾಳನಟ್ಟಿದೆ ದಾರಿವಪ್ಪಿದೆಯೊ ನೀನೀಗ
ಹೇಳಲೇಂ ನೀನು ಮೊದಲೊಕ್ಕಲಿಗನೆನಿಸಿದವನೊಕ್ಕಲಿಗನಾದೆ ಕಡೆಗೆ ||
ಬೀಳುಗಳೆದೆಯೋ ಜಗದ ನೀತಿಯಂ ತಿಳಿಯದಿ
ನ್ನೇಳು ನಡೆ ನಿನ್ನೂರ್ಗೆ ನಾಂ ಬಾರೆ ನೀನೆಸಗಿ-
ಪಾಳವಹವಾಗಿಹ ಸಮಾಧಿಯೊಳು ಕಾಯೊಂದನಂ ಹೂಳದಂ ನೀನೆಯೆಂದು ||೫೦||

ಏವ ಮಾತಿಗೆ ಮುಂದೇನೂರ ಕರಿಗೌಡ ನಾಂ
ಮಂದಮತಿಯಾದೆನೆಂದಂದು ದುಗುಡಂಗೊಂಡು
ಬೇದೊಡಲನಾಗಿ ತನ್ನೂರಿಗೈತಂದು ಗುರುವರನೊರೆದ ಮಾಳ್ಕೆಯಿಂದ ||
ಚೆಂವಮಾಗಿಹ ಸಮಾಧಿಯೊಳೊಂದು ಕಾಯನ್ನು
ತಂದಿಟ್ಟು ಸದ್ಗುರುವೆ ರಕ್ಷಿಸೆಂದೆರಗಿ ಮುದ
ದಿಂದ ತಾಂ ಕೂಡಿದೂರ್ವರಿಂದಿ ಜಯಜಯವೆನಲು ಮುಚ್ಚಿದನು ಬಿಡದರ್ಚಿಸಿ ||೫೧||

ಒಂದುದಿನವಾ ಮಠದ ಚಿಕ್ಕಮರಿದೇವ ತಾ
ನೊಂದು ಬೆಕ್ಕಿನ ಸಣ್ಣಮರಿಯೊಡನೆ ಬಿನದ
ದಿಂದಿರುತೆ ಮಠದ ಮುಂದಣ ಹರಿವ ಹಳ್ಳದಾ ಮಡುವಿನೊಳಗದನೊಗೆಯಲು ||
ಅಂದು ನೀರೊಳಗೆ ಮರಿಮುಳುಗುತೇಳುತ್ತ ಭಯ
ದಿಂದಲೊದ್ದಾಡುತಿರ್ಪುದ ಕಾಣುತಿತರರೈ
ತಂದು ಕಾರುಣ್ಯ ತಾರುಣ್ಯಯುತ ಮಡಿವಾಳಗುರುವರಂಗೊರೆದರವರು ||೫೨||

ಜಾತಭೂತವ್ರಾತ ಘನದಯಾವೃತವೊಳಗೆ
ಪ್ರೀತನಾಗಿಪ್ಪ ಮಡಿವಾಳಶಿವಯೋಗಿ ತಾ
ನೋತು ಗುರುನಾಮವನ್ನುಚ್ಚರಿಸುತವಸರದಿ ಬಂದು ಹಳ್ಳದ ದಂಡೆಗೆ ||
ಶೀತವಾವರಿಸಿ ಮುಳುಗೇಳ್ವ ಮರಿಯನ್ನು ಗುರು
ನಾಥನೀಕ್ಷಿಸಿ ಬಳಿಕ್ಕಜ್ಜ ಬಾಬಾ ಎಂದು
ಪ್ರೀತಿಯಿಂ ಕರೆಯಲೀಜುತ್ತೆ ನಡುಗುತ್ತಮದು ತಡೆಗೈದುದಾ ಕ್ಷಣದೊಳು ||೫೩||

ಚಿಕ್ಕಮರಿದೇವ ಕೇಳ್ ಸಿಕ್ಕ ಪ್ರಾಣಿಗಳಲ್ಲಿ
ತಕ್ಕ ದಯವಿರವೇಳ್ಕು ಕಕ್ಕಸದ ವೃತ್ತಿಯದು
ರಕ್ಕಸನ ವೃತ್ತಿಗಾಸ್ಪದವಕ್ಕುಮದರಿಂದ ದಯವೇ ಧರ್ಮದ ಮೂಲವು ॥
ಲೆಕ್ಕವಿಲ್ಲದ ಸುಗುಣಸಮುದಾಯಕೆಲ್ಲಕ್ಕೆ
ಮಿಕ್ಕು ಯೆಂದೆನಿಸಿ ಸಲೆ ಸೌಖ್ಯವನ್ನೀವುದಕೆ
ಪಕ್ಕಾದ ಭೂತದಯವರಿಯಲದು ಮುಕ್ಕಣ್ಣನೊಲುವೆಗೆ ನಿದಾನವಹುದು ॥೫೪॥

ಇಂತೊರೆದುದಂ ಕೇಳಿ ಚಿಕ್ಕಮರಿದೇವನೋ
ರಂತೆ ನಾನಿನ್ನುಮೇಲೆಂದುಮಿಾ ರೀತಿಯ
ನ್ನೆಂತುಮೆಸಗೆನು ದೇವಗುರುದೇವ ಎಂದವರಿಗೆರಗಿ ಪಂಥವ ಗೈಯಲು ॥
ಶಾಂತಮರಿದೇವ ನೀನಿದರ ಪ್ರಾಯಶ್ಚಿತ್ತ
ಕಿಂತು ಪನ್ನೊಂದು ಭೂರುದ್ರರಿಗೆ ಭೋಜನವ
ಮುಂತೆಸಗುನೀನೆನಲ್ಕದರಂತೆ ಮರಿದೇವನೆಸಗಿವನು ಗಣತೃಪ್ತಿಯ ॥೫೫॥

ಇದರವೋಲಾರಾದೊಡಘವನೆಸಗಿದೊಡೆ ಮೇಣ್
ಪದುಳದಿಂ ಸುಕೃತಸಂಪಾದನವನೆಸಗುವಡೆ
ಸದಮಲರ ಮಡಿವಳರ ಮಠದೊಳಾವಾಗಳುಂ ಗಣತೃಪ್ತಿ ನಡೆದಿರ್ಪುದು ॥
ವಿದುರಮಣಿಯುಹ ಯೋಗಿಮಡಿವಳರ ಸಂಗದಿಂ
ಪದೆದವರ ಬೋಧದಿಂದಾ ದೆಸೆಯೊಳೆತ್ತಲುಂ
ಪದುಳದಿಂ ಸದ್ಧರ್ಮ ಸಮುಪಕೃತಿ ಸತ್ಕರ್ಮಗಳು ನಡೆವುತಿರ್ದುವಮಮಾ ॥೫೬॥

ಕಾಲಭೈರವನೆ ಭೂವುದ್ಧರಣಕಾರ್ಯಕ್ಕೆ
ಲೀಲೆಯಿಂದವತರಿಸಿ ನವಿಲ್ಗುಂದ ಪತ್ತನದಿ
ಮೇಲಾದ ರುಕ್ಮಕಾರನ ಕುಲದೊಳುದ್ಭವಿಸಿ ನಾಗಲಿಂಗಪ್ಪನೆಂಬ ॥
ಭೂಲಸಿತ ನಾಮದೊಡವೆರೆದು ತಾಂ ಸನ್ಮಹಿಮ
ಶಾಲಿಯಾಗುತ್ತೆ ಸಂಚಾರವೆಸಗಲ್ಕೊಂದು
ಕಾಲದೊಳು ಗದಗಕ್ಕೆ ಬರಲವನ ಬರವರಿದು ಮಡಿವಾಳಶಿವಯೋಗಿಯು ॥೫೭॥

ಸ್ವಮಠದ ಕವಾಟವನು ಹಾಕಿಯರ್ಗಳವೆಳೆದು
ಸುಮಹಿತಾತ್ಮರು ಮಲಗಲೇಗೈದರಿಂತೆನು
ತ್ತಮಮಮಾರಿಗುಂ ತಿಳಿಯದಾಯ್ತ್ಯಸೆ ಬಳಿಕಮಾ ನಾಗಲಿಂಗಪ್ಪನವನು ॥
ಸ್ವಮನದೊಳು ಮಡಿವಳನ ಕಾಣಲಿಚ್ಛಿಸಿ ಭರದಿ
ವಿಮಲಾತ್ಮನವನ ಮಡಿವಳನ ಮಠಕೈತರ್ಪಿ
ಸಮಮವದು ಮುಚ್ಚಿರಲು ನಾಗಲಿಂಗಪ್ಪನೊಳಗಿರ್ಪರಂ ಕರೆದನು ॥೫೮॥

ತಾನುಚ್ಚ ರವದೆ ಪಿಂಗದಲಿ ಕರೆಕರೆದೊಡಾ
ನೇನೊರೆವೆ ನೊಳಗಾರು ಮಾರ್ದನಿಯು ಗುಡದೊಡಂ
ಮೌನದಿಂದಿರದವನು ಮತ್ತೆ ಮತ್ತೊದರಿದೊಡೆ ಗುರುವರನು ದನಿಗುಡುತಿರೆ ॥
ಆ ನುಡಿಯು ಕೇಳಿ ಮಡಿವಾಳ ತೆಗೆ ಬಾಗಿಲವ
ನೀನೀಗಳಾರು ನೀಂ ನಾಗಲಿಂಗನು ನಾನ-
ದೇನುಂಟು ನಿನ್ನ ಕಜ್ಜವದಿಲ್ಲಿ ಪೆಸರಾರು ಬಂದಂತೆ ದಾರಿ ಹಿಡಿದು ॥೫೯॥

ಎಂದೊಡಂ ಹಠವಿಡಿದು ಕರೆ ಕರೆದು ಮಡಿವಾಳ
ಅಂಧ ನಿನ್ನಕ್ಷಿಯಂ ನೆಕ್ಕುವೆನು ಕಣ್ಬಕ್ಕ-
ಮಂಧರಿಲ್ಲವೆ ಜಗದೊಳವರ ಕಣ್ಣಂ ನೆಕ್ಕಿ ಕಡು ಪೋಗು ಕಂಗಳನ್ನು ॥
ಎಂದಿಂತು ಪ್ರಶ್ನೋತ್ತರಂಗಳುಂಟಾದೊಡಾ
ಪಿಂದಿರುಗಿ ಪೋಗದಾ ನಾಗಲಿಂಗಪನು ಹಠ
ದಿಂದ ತೆಗೆ ಕದವನೆಂದೊದರುತಿರೆ ಬೇಸತ್ತು ಗುರುವು ಕದವನು ತೆಗೆಸಲು ॥೬೦॥

ಏಪೇಳ್ವೆ ನಾಗಲಿಂಗಪ್ಪನೊಳಪುಗಲೊಡನೆ
ತಾವೀರ್ವರುಂ ಪರಸ್ಪರ ದರ್ಶನದೊಳೊಗೆದ-
ಶಿವ ಸುಖ ಸಂಪತ್ತಿಯಂ ಪಡೆದುದಂ ಪೇಳಲರಿದರಿದುದಾ ಕಾಲದಿ ॥
ಆ ವಿರತಮಣಿಯು ಕಣ್ಣಾಣಲಾದುದು ಬಳಿ
ಕ್ಕಾವಗಂ ಸಾಂಕೇತಿಕೋಕ್ತಿಪ್ರಸಂಗದಿಂ
ಶಿವಿದಾನಂದದಿಂದಿರ್ದು ಬಳಿಕಂ ನಾಗಲಿಂಗಪ್ಪನೊರೆದನಿಂತು ॥೬೧॥

ಮಡಿವಾಳ ಕೇಳು ನೀಂ ಮುಂದೆ ನಡೆ ಪಿಂದೆ ನಾ
ನಡೆತರ್ಪೆನೆಂತೆಂದು ನಾಗಲಿಂಗಪನು ಮು
ನ್ನುಡಿಯ ನುಡಿದಾತನಡಿದಾವರೆಗೆ ಪೊಡಮಟ್ಟು ಪೊರಟುಪೋದನು ನಿಲ್ಲದೆ ॥
ಸಡಗರದೊಳಿವರೀರ್ವರೊಡನಾಟವಂ ಭಾವಿ
ಪೊಡೆ ಸಮಕ್ಷಂ ನೋಡಿವರಿಗೆನಿತೊ ಸಮ್ಮೋದ
ವಡಸಿರಲ್ಪೇಳ್ಕುಮಿಂತಿದನೀಗಳೂಹಿಸಲ್ಕಾರಿಗಾದೊಡು ಬಪ್ಪುದೇ ।೬೨॥

ಒಂದು ದಿವಸಂ ಹೊಸಳ್ಳಿಯ ಬೂದಿಸ್ವಾಮಿಗಳು
ಚಂದದಿಂ ಸಂಚರಿಸುತೀ ಗರಗದೂರಿಗೈ
ತಂದು ಮಂಚದ ಮೇಲೆ ಮಲಗಿರ್ಪ ಮಡಿವಳರ ಬಾಯೊಳಗೆ ಬಾಯನಿಟ್ಟು ॥
ತಿಂದುಳಿದ ಖಂಡಶರ್ಕರೆಯ ಶಕಲವ ಹಾಕಿ
ಸಂದುಬಿಡದಂತವನ ತೆಕ್ಕೆಯೊಳಗೌಂಕಿವನು
ತಂದೆ ಗುರು ಬಂಧು ಬಳಗವದೆನಗೆ ನೋಡಿರೆಂದಪ್ಪಿ ಕೊಂಡಾಡುತಿರಲು ।೬೩॥

ಆಗಳಾ ಗುರುವರರು ಕೇಳು ಬೂದ್ಯಾ ಎನ್ನ
ನೀಗ ನೀನೀ ಮಂಚದತ್ತಣಿಂ ಕೆಡವಿಯೋ
ಬೇಗ ಬಿಡು ಸರಿ ಪಿಂದೆ ನೀ ಕಿವುಡ ನಾಂ ಕುರುಡನೆಂದು ಮರ್ಮೋಕ್ತಿಯಾಡಿ ॥
ಆಗಳಂದಣದೊಳೀಯಯ್ಯನಂ ಕುಳ್ಳಿರಿಸಿ
ಸಾಗಿರೆಂದಾ ಬೋವಿಗಳಿಗುಸುರಲೆಲ್ಲರೀ
ಜೋಗಿಯಂ ಶಿಬಿಕೆಯೊಳಗಿಟ್ಟುಕೊಂಡೊಯ್ದರೀ ಗುರುವರ್ಯನಾಜ್ಞೆಯಂತೆ ॥೬೪॥

ಶೂಲಪಾಣಿಯು ರೂಪದಾಳ್ದಿಳಾಮಂಡಲವ
ಪಾಲಿಸಲ್ಕವತರಿಸಿಗೆಲ್ಲ ಮಹಿಮಾಂಕಿತರ
ಲೀಲೆ ತಾನಿಂತುಟಂತುಟು ಪೇಳಲರಿದರಿದು ಸ್ವಚ್ಛಂದ ವೃತ್ತಿಯಿರಲು ॥
ಲೀಲೆ ಮಿಗೆ ಬಾಯಿಂದ ಸಕ್ಕರೆಯ ನಿಡುವುದೇಂ
ಮೇಲೆ ಬೀಳ್ದೊತ್ತೊತ್ತಿ ಪಿಡಿವುದೇನಾ ಬಳಿಕ
ಮೇಲೆನಿಸಿ ಲಲ್ಲೆಗರೆವುದಿದೇನಿದೆಲ್ಲವಿದು ಬಾಲರಂತವರಾಟವು ೬೫॥

ಬಾಲಕಾವಸ್ಥೆಯದು ಮೇಣ್ ಪಿಶಾಚಾವಸ್ಥೆ
ಮೆಲೆನಿಸುವುನ್ಮತ್ತನಂತವಸ್ಥೆಯುಮೆಂದು
ಲೀಲೆಯಿಂದೊಡಗೂಡಿದೀ ಮೂರವಸ್ಥೆಗಳು ತತ್ವವೇತ್ತರಿಗಪ್ಪುವು ॥
ಬಾಲಕಾವಸ್ಥೆ ಮುಳುಗುಂದ ಶಿವಯೋಗಿಗನು
ಕೂಲಿಸಿತ್ತುನ್ಮತ್ತತನದವಸ್ಥೆ ಮತ್ತೊಂದು
ಭೂಲಸಿತವೆನಿಸುವೆಮ್ಮಿಗನೂರ ಜಡೆಯಪ್ಪನವರಿಗೆರಡಿರ್ದುವು ॥೬೬॥

ಮತ್ತೋರ್ವೆಯುಗಡಿಯೆಂಬೂರ ಶೇಷಾಚಲದ
ಸತ್ತಮನು ಬ್ರಾಹ್ಮಣರಸ್ವಾಮಿ ಘನಶಿವತತ್ವ
ವೇತ್ತನಹ ಮಡಿವಾಳಗುರುವರ್ಯನನುಪಮನ ಘನತರ ಮಹತ್ವವನ್ನು ॥
ಚಿತ್ತವಲರಲು ಕೇಳಿ ತದ್ದರ್ಶನಕೆ ಗರಗ
ದತ್ತ ಬಂದೋರ್ವನಿಂ ತನ್ನ ಬರವಂ ತಿಳುಹ
ಲುತ್ತಮನು ಗುರುವರನು ಮಠಕೆ ಬರಲೇನುಂಟದೂರೊಳಗೆ ಪೋಪುದೆಂದ ॥೬೭॥

ಸಾಧುವರ್ಯನ ಮಹಾಗಾಧ ಮಹಿಮೆಗೆ ಮೆಚ್ಚಿ
ಬೋಧಿಸಿದ ನುಡಿಯನ್ನು ಸಾಧುವೆಂದರಿದೊಳಗೆ
ಶ್ರೀಧವನ ಭಕ್ತನಾ ಸ್ವಾಮಿ ತನ್ಮಠಮಹಾದ್ವಾರದೇಹಳಿಗೆ ನಮಿಸಿ ॥
ಮಾಧವನ ಸೇವೆಗಾ ಗರಗದೂರೊಳು ಪೋಗೆ
ಮೇಧಾವಿ ನಿಜಗುರುವಿಗಾ ಬ್ರಾಹ್ಮಣರು ತಾವು
ಸಾಧು ಮರ್ಯಾದೆಯಂ ಮಾಡಿ ಕಳುಹಿದರೆಂದೋಡೀ ಗುರುವನುಗ್ರಹವದು॥೬೮॥

ಇಲ್ಲಿಗೇತಕೆ ಬರ್ಪೆ ಯೂರೊಳಗೆ ಪೋಗೆಂಬ
ಸೊಲ್ಲಿನಾಶಯದಂತೆ ಬ್ರಾಹ್ಮಣರ ಗುರುವು ತಾ
ನೆಲ್ಲರಿಂ ಬಹುಮಾನವಂ ಧನಮುಮಂ ಪೊಂದಿ ಶಿವಯೋಗಿವರನ ಮಠಕೆ ॥
ನಿಲ್ಲಸ್ತೈತಂದವರ ಪೊಲ್ಲಡಿಗೆ ವಣೆದು ನತಿ
ವಲ್ಲಭನೆ ನಿನ್ನ ಮಹಿಮೋನ್ನತಿಯ ಪೊಗಳಲಳ
ವಿಲ್ಲ ಮೃದುಪಲ್ಲವಪ್ರತಿಮಲ್ಲ ಪದತಲ್ಲಜನೆ ಎಂದು ನುತಿಸಿ ಪೋದ ॥೬೯॥

ಇಂತು ಸಂತಸದಿಂದನಂತ ಭಕ್ತರಿಗೆ ವೇ
ದಾಂತದ ರಹಸ್ಯಮಂ ಶಿವಧರ್ಮತತ್ವಮಂ
ಸಂತತಂ ನೀತಿಯಂ ಬೋಧಿಸುತೆ ಗುರುವರ್ಯನಿರಲೊಂದು ದಿವಸದಲ್ಲಿ ॥
ಕಂತುವಿನ ಸಮರೂಪವಾಂತ ಯೌವನವಂತ
ಶಾಂತನೋರ್ವನು ತರುಣನಂತರಂಗದಿ ಭಕ್ತಿ
ಮುಂತಿರಲು ತಂದ ಕಾಯ್ ಕರ್ಪುರವ ಮುಂದಿಟ್ಟು ಪೊಡಮಟ್ಟನೀ ಗುರುವಿಗೆ||೨೦॥

ಕರುಣದಿಂದಾರು ಬಾ ಪೆಸರೇನದಾರಾವು-
ದೊರೆಯೆಂದು ಗುರುವರನು ಕೇಳಲವನಾನೀಗ
ಳಿರುವೆ ಹುಬ್ಬಳ್ಳಿಯೊಳು ಸಿದ್ಧನೆಂಬುವ ಪೆಸರು ಪುಟ್ಟಿದೂರ್ಬಿದರಕೋಟಿ ॥
ಗುರುವೆ ನಿನ್ನಯ ಸೇವೆಗೈದು ದುರ್ಭರ ಜನನ
ಮರಣಗಳ ಕೋಟಲೆಯ ಕಳೆದು ನಿತ್ಯಾನಂದ
ಭರದೊಳಿರವೇಳ್ಕೆಂದು ಮರೆಹುಗಲು ಬಂದಿಹೆನು ಪೊರೆಯೆನ್ನ ಕರುಣಾಳುವೆ ||೨೧॥

ನೀನೆನ್ನ ಸೇವೆಗೈವೆಯೊ ದಿಟವು ನೀನುಣಸ
ಕೇನು ಮಾಡುವೆ ಬಿಕ್ಕೆ ಬೇಳ್ಪೆನೆಮಗರ್ಥಮಂ
ನೀನೀಯುವೆಯೊ ಯಿಾವೆನೆನಲದಂ ಕೇಳಿ ಗುರುವಿಂತಾದೊಡಿರ್ಪುದಿಲ್ಲಿ ॥
ಚಿನುಮಯನ ಸೇವೆಯೊಳಗನುದಿನಂ ಸಿದ್ಧನಿರೆ
ಮನವೊಸೆದು ಗುರುವೊಂದುದಿನವವನ ಕರೆದು ತಾಂ
ಬಿನದದಿಂದೊರೆದನಿಂತೆಂತೆಂದೊಡಾನುಸುರ್ವೆ ಗುರುವರನು ಪರಿಕಿರ್ಪುದಂ ॥೨೨||

ಸಿದ್ಧಪ್ಪ ವಿರತಿ ಸುಜ್ಞಾನಂಗಳಿಂ ಮೊದಲೆ
ಸಿದ್ಧನಿಹೆ ಶತಜನ್ಮ ಸುಕೃತವೊಡವೆರಸಿರಲು
ಶುದ್ಧಮನವಿರ್ದೊಡಂ ಪಿಂದಣಾ ಸಂಸ್ಕಾರವಡಸಿ ಕೆಡಿಸುಗುಮಲ್ಲವೇ ॥
ಬುದ್ಧ ಜೀವನ್ಮುಕ್ತನೆಂದೆತ್ತಲುಂ ಸುಪ್ರ
ಸಿದ್ಧನಾಗುವೆ ಪೋಗು ಹುಬ್ಬಳ್ಳಿಗೆಂದು ಮೋಹ್
ಬುದ್ಧಿವಾದವನೊಂದನರುಪುವೆನು ನಿನ್ನ ಮೊಗ ತಿಗಗಳಂ ತೊಳಕೊಂಡಿರಯ್||೨೩||

ಎಂದಾತನಂ ಪರಸಿ ಬೀಳ್ಕೊಡಲು ಸಿದ್ಧಪನು
ಸುಂದರರದ ಹುಬ್ಬಳ್ಳಿಗೈತಂದು ಮಡಿವಾಳ
ತಂದೆಯಾಶೀರ್ವಾದದಿಂದ ಸಿದ್ಧಾರೂಢನೆಂದು ಪೆಸರ್ವಡೆದಿರ್ದನು ।।
ಅಂದವನ ಪೊಸಜಸವು ಸುತ್ತಲುಂ ಪರಿಕಲಿಸೆ
ವಂದನಕೆ ದರ್ಶನಕೆ ಬರಹೋಹ ಜನತೆಯಾ
ನಂದಗೊಂಡೈದುತಿಹುದಾ ಕಾಲದಲ್ಲಿ ಬಳಿಕೀಗಳುಂ ಪೋಗುತಿಹುದು ॥೭೪॥

ಮುಂಚೆ ಸಂಚರಿಪ ಕಾಲದೊಳೋರ್ವ ಗುರುವರ್ಯ
ನಂಚಿತಾತ್ಮನು ಯೋಗಿಯಿಟಗಿಯೂರಿಗೆ ಬರಲು
ಪ್ರಾಂಚದುರುವಿರತನಪ್ಪನ್ನದಾನಿಸ್ವಾಮಿ ಮಡಿವಳರ ದರುಶನಕ್ಕೆ ।।
ಹೊಂಚು ಹಾಕುವ ರೋಣದೂರ ವೀರನಗೌಡ
ಮಿಂಚುಗುಣದಿಟಗಿ ಹೊನ್ನಪಗೌಡನಿವರೀರ್ವ
ರುಂ ಚದುರರೊಡನಿರಲು ಬಂದು ಕುಂಬಿಟ್ಟು ಮುಂದೆಸೆಯಿಂಬಿನೊಳು
ಕುಳ್ಳಿರೆ ॥೭೫॥

ಚೆನ್ನಿಗನು ವಿರತನಪ್ಪನ್ನದಾನಿಸ್ವಾಮಿ
ಯನ್ನು ನಿರುಕಿಸಿ ತಾನು ಮಡಿವಾಳ ಶಿವಯೋಗಿ
ನಿನ್ನಪಾರಂಪರಿಕ ವಿರತರಂದದೊಳಾತ್ಮ ದೌಸ್ಥ್ಯತ್ಯವನ್ನಾನುವೆ ।।
ಇನ್ನು ನಿನಗಾನೈಹಿಕಾಮುಷ್ಮಿಕ ಜ್ಞಾನ
ವನ್ನು ಬೋಧಿಪೆನೆಂದನುಗ್ರಹದಿನರುಪಿ ಮೇಣ್
ತನ್ನ ಮಸ್ತಕದ ಟೊಪ್ಪಿಗೆಯನ್ನು ತಗೆದವನ ಮಸ್ತಕದ ಮೇಲೆ ತಾನು ।।೭೬।।

ಇರಿಸಿ ನೀನಿದನೆಂದುಮೋಸರಿಸದಿರಿಸು ಮೇಣ್
ನರರತ್ನಮುಕುಟವಿದು ನಿನಗಪ್ಪುದಿದರಿಂದ
ಪರಮ ಶುಭಪೆಂದುಸುರಿ ಪರಸ್ಕಿನಿಜಮಠಕೆ ಪೋಗೆಂದವನ ಬೀಳ್ಕೊಟ್ಟನು ।।
ಗುರುವರನನುಗ್ರಹವನಪ್ಪನ್ನದಾನಿಸ್ವಾಮಿ
ಪಿರಿತಾಗ್ರಹಿಸಿಸಂದು ಪ್ರೀತಿಯುಂ ಪಡೆದು ಕಡು
ಧರಣಿಮಂಡಲವ ಪಾವನಗೈವನೆಂದೋಡಿ ಶಿವಮಡಿವಳರ ಮಹಿಮೆಯನೆ ॥೭೭॥

ಅಕ್ಕರದಿ ಪಕ್ಕದೊಳಗಿಕ್ಕಿ ಮಿಗೆ ರಕ್ಕಿಸಿದ
ಮಕ್ಕಳನು ಧಿಃಕರಿಸಿ ಮರೆದು ತಾನೊಂದು ಕಡೆ
ಕಕ್ಕುಲತೆದೋರದಿರ್ಪ ತಾಯಿಯುಂಟೇನಿಲ್ಲವಿಳೆಯೊಳಗೆ ನೋಳ್ಪೊಡವಳು ||
ಮಿಕ್ಕ ಮಾತೇಂ ನೀನು ವಿಶ್ವಕ್ಕೆ ತಾಯಿ ನೀ
ನಕ್ಕು ಗಿರಿಜಾದೇವಿ ಮಕ್ಕಳೆನಿಸಿದ ಜನರ
ನಕ್ಕರತೆಯಂ ತೊರೆದು ಕಡು ಪೊರೆದಿಹುದೆ ಪೊರೆ ಜನನಿ ಮಂಗಲದ ಮನೆ
ಭವಾನಿ ||೭೮||

ಶ್ರೀ ಶಿವಾದ್ವೈತಪರ ವಿದ್ಯಾನವದ್ಯಾತಿ
ವೈಶದ್ಯವಿದ್ಯೋತಮಾನನ ಮಹಾಲಿಂಗ
ದೇಶಿಕಶಿಖಾಮಣಿಯ ಪಾಣಿಕಂಜಾತಸಂಜಾತನು ಕವೀಶದೂತಂ ||
ಆ ಸದಾಶಿವಕವಿಯು ಘನಸದಾಶಿವನ ಯೋ
ಗೀಶನ ವಿಪಾಶನ ನಿರಾಶನುರುಮುಡಿವಾಳ
ದೇಶಿಕನ ಚರಿತದೊಳನೇಕ ಮಹಿಮೆಯ ಪೇಳ್ದ ಹದಿಮೂರನೆಯ ಸಂಧಿಯು ||೭೯||

**ಅಂತು ಸಂಧಿ ಹದಿಮೂರಕ್ಕಂ ಪದಂಗಳು ೭೯ ಮಂಗಳಂ**

**ಶ್ರೀ ಶ್ರೀ**

## ೧೪ನೆಯ ಸಂಧಿ

ಸೂಚನಾ—ಮಡಿವಾಳ ಶಿವಯೋಗಿ ಮಾಳ್ಪ ಕೃತಿಯಿಂದ ಮುಂ
ದಡಿಸಿ ಬರುತಿರ್ಪಾಗುಹೋಗುಗಳನೆಲ್ಲವಂ
ಬಿಡದವನ ಸಹಜ ಸದ್ಗುಣಗಳಂ ಸಹಜಮಾದಾ ಕೃತಿಯು ಪೇಳ್ವೆನಿಲ್ಲಿ॥

ನರಸುರಾಸುರನತನು ನಾನಾ ಜಗತ್ಕರನು
ನಿರುಪಮನು ನಿರ್ಗುಣನು ನೀರಜಾತಾಕ್ಷಸಖ-
ನುರಗಹಾರನು ನಮದಸೂನ ಸುಖಕರನು ನೆರೆ ಸೇವುಪುಳ್ಳರ್ಗೊಲಿವನ್ನೆ ॥
ಪರತರನು ಕೊಸಲಕಣ್ಣುಳ್ಳವನು ನೋನುವರಿ
ಗಿರಿದಿಷ್ಟಪನು ಭವಾಬ್ಧಿಗೆ ನೌಕೆಯುಹನು ಸುರು
ಚಿರಗುಣಾಢ್ಯನು ಸದಾನಂದಾಬ್ಧಿ ಪರಿಹರಿಸಲೇನಃ ಪತಂಪರೆಯನು ॥೧॥

ಮಡಿವಳೇಶ್ವರರ ತನುವಿಂಗೆ ಮುಪ್ಪಡಸಿ ಕ
ಣ್ಣುಡುಗಿ ನೆರೆಯುಡರಿ ಕೆನ್ನೆಗೆ ಸುಕ್ಕು ಬಿಡದೇರಿ
ದೊಡು ತಾವು ಜನಕೆಲ್ಲ ಮಾಳ್ಪ ಸದ್ಬೋಧವನು ಸಂತತಂ ಬಿಡಲಿಲ್ಲವು ॥
ಸಡಗರದ ಪೂಜಾರ್ಪಿತಾನುಭವಗಳನಿವ
ರ್ಕಡುನೇಹದಿಂ ಗೈವುತಿರಲೊಂದು ದಿವಸದೊಳು
ಮೃಡಮೂರ್ತಿಮಡಿವಾಳ ಶಿವಯೋಗಿ ಮಠದಮರಿದೇವರುಗಳಂ ಕರೆವುತೆ ॥೨॥

ನಿಳಯ ನಿಳಯಕೆ ಪೋಗಿ ತರುತಿರ್ಪ ಕಜ್ಜಾಯ
ಗಳು ನಿಮಗೆ ಸಾಕನಿತು ಬರ್ಪುವೇನಿಲ್ಲವೆನ
ಲುಳಿವುವೆನಲಿನ್ನವುಗಳನ್ನೊಣಗಿಸಿಡಿರಯ್ಯ ಗಳಿಗೆ ಹರವಿಗಳ ತುಂಬಿ ||
ಬಳಿಕ ಮರಿಗಳು ಗುರುಗಳೊರೆದಂತೆ ಮಾಡಲವ
ರೊಳಗೋರ್ವ ಸಿದ್ಧಲಿಂಗಾಖ್ಯನೆಂಬವನು ಗುರು
ಗಳ ಪಾದಸೇವೆಯೊಳಗನವರತಮಿಹನು ಮೋಣವನೂರು ಮೈಸೂರವು ॥೩॥

ಆತನತಿ ಭಕ್ತಿಯಿಂ ಮಾಳ್ಪ ಸೇವೆಗೆ ಮೆಚ್ಚಿ
ಪ್ರೀತಿಯಿಂ ಗುರುವರನು ಮಡಿವಾಳ ಶಿವಯೋಗಿ
ಮಾತು ಮಾತಿಗೆ ತೋಂಟಸಿದ್ಧಲಿಂಗಾ ಎಂದು ಕರೆವುತಿರ್ದನು ಬಿಡದಲೆ ॥
ಈ ತೆರದ ಭಕ್ತಿಯೊಡವೆರೆದ ಮರಿದೇವನಾ
ಪೂತವೆನಿಸಿದ ಹಬ್ಬ ಹುಣ್ಣಿವೆಗಳಲ್ಲಿ ತಾ
ನೋತು ತಂದಿರ್ದ ಹೋಳಿಗೆಗಳನ್ನೊಣಗಿಸುತೆ ಗಳಿಗೆದುಂಬಿಡುತಿರ್ದನು ॥೪॥

ಒಣ ಒಣಗಿಸಿಟ್ಟ ಕಜ್ಜಾಯಗಳನೂರಜನ
ಗಣವು ಗುರುರಾಯನಿವನೇಗೈವನರಿದರಿದು
ತ್ರಿಣಯನನೆ ಬಲ್ಲನೆಂದೆನುತಿರ್ದರವರೆಲ್ಲರಾ ಬಳಿಕ ಕೆಲದಿನದಲಿ ॥
ಚಣಚಣಕೆ ಗುರುವರನು ಬಂದು [illegible]
[illegible] ತಿನಿಸಿತು [illegible] ದೊಡು ತಾನುಂಡು
ತಣಿಗೊಳದೆ ಮತ್ತೆ ತಾ ಎನೆ ನೀಡೆ ತುತ್ತೊಂದೆ ಮಾಡುವರು ಯೋಗಿವರರು ॥೫॥

ಇದನೂರಜನರೆಲ್ಲ ನೋಡಿ ಭಯಚಕಿತರಾ
ಗಿದು ದೊಡ್ಡಿತದಗದವು ಗುರುಪಿಂಗೆ ಸಮನಿಸಿತು
ಸದಯ ಹೃದಯನಿಗೆತ್ತಣೊದಗಿದುದಗದವು ಪೇಣದು ಲೋಕದುತ್ಪಾತವೊ ॥
ಹದುಳವಿಲ್ಲದ ಮನದೊಳಿಂತು ಚಿಂತಿಸೆ ವೃಷ್ಟಿ
ಯದು ಪೋಗಿ ಬೆಳೆಯೊಣಗಿ ನೀರುಡುಗಿ ಪೊಳೆ ಬತ್ತಿ
ಸ ದುರಂತವಾಗಿ ಮುಂದೆರಸು ಮೂರ್ತಿಗಳಲಿ ಬಿದ್ದುದಕಟಕಟ ಬರವು ॥೬॥

ಮಳೆ ಪೋಗಿ ಬೆಳೆಯೊಣಗಿ ಜನ ಜೀವನಕೆ ಕಾಳು
ಗಳುಮೆಲ್ಲಿ ಸೆರೆ ಮುಕ್ಕು ಸಿಗದೆ ಹಸಿವಿನ ತಾಪ
ದಳಲಿಂದ ಬಸವಳಿದು ಬೆಂದು ಬೆಂಡಾಗಿ ಜನಗಳು ತೌಡು ಸೊಪ್ಪುಗಳನು ॥
ಮಳ ಮಳನೆ ನುಂಗಿ ಕರುಳುಬ್ಬಿಯಸುವಳಿಯಲಿಳೆ
ಯೊಳಗೆತ್ತಲುಂ ಹೆಣಗಳುರುಳುರುಳಿ ವಾಣ್ಯಾಗ್ರಣ
ದಳತಿಯಿಲ್ಲದ ನಾಯುನರಿಯು ಪದ್ದವಿನ ಬಾಯ್ಗಳಿಗೀಂದು ತುತ್ತಾದುವು ॥೭॥

ಈ ಬರಕೆ ಡೌಗಿ ಬರವೆಂದೆಲ್ಲರೊರೆವರಿದು
ಪ್ರಾಬಲ್ಯದಿಂದೆಲ್ಲರನು ಕೊಂದುದ್ಯೈ ಕ್ರಿಸ್ತ
ನಾ ಬಳಿದ ಪದಿನೆಂಟು ನೂರರೆಪ್ಪತ್ತೇಳರಬ್ದದೊಳು ತಲೆದೋರಿತು ॥
ಈ ಬಂದ ಬರಗಾಲ ಗಂಡೂರ ಶಿವಯೋಗಿ
ಯಾ ಬಕುತರೆಲ್ಲರುಂ ಮನದೊಳಗೆ ಯೋಚಿಸಿದ
ರೀ ಬರದ ಸೂಚನೆಗೆ ಮತ್ತೆ ಮತ್ತೆಯು ಗುರುಗಳುಂಡರದು ತಿಳಿಯಲಿಲ್ಲ ॥೮॥

ಬರಗಾಲವನು ಸೂಚಿಸಲು ತಂದ ಕಜ್ಜಾಯಗಳ
ನಿರದೊಣಗಿಸುತೆ ಗಳಿಗೆ ಹರವಿಗಳ ತುಂಬಿಸಿದ
ರರರೆ ತಿಳಿಯದೆ ಪೋದುದೀಗಳವುಗಳನಿಲ್ಲಿ ಬರಗಾಲದಿಂ ಬಳಲುವ ॥
ಪರಿಪರಿಯ ಜನಕಿತ್ತು ಕಳುಹುವನು ಯೋಗಿಯಾ
ದರದಿಂದಲೆನಲಿವರ ಕಾಲಜ್ಞತೆಯ ಮೇಣು
ಕರುಣಾಕಟಾಕ್ಷವ ನಾನೆಂತು ಬಣ್ಣಿಸಲಿ ಮಂದಮತಿಯು ॥೯॥

ಒಣಗಿಸಿದ ರೊಟ್ಟಿಗಳನೆಣಿಕೆಯಿಲ್ಲದ ಜನ
ಕ್ಕುಣಲಿತ್ತೊಡವು ಸವೆಯದಕ್ಷಯಗಳಾಗುತಿರ
ಲಣಿಯರಂ ಜನರುಂಡು ಬರಗಾಲವಂ ಕಳೆದರೆಂದೊಡವನೇಂ ಮಹಿಮನೋ ॥
ಒಣಮಾತಿನಿಂದೇನು ತ್ರಿಣಯನಾಕೃತಿಯ ಧಾ
ರಿಣಿಯುದ್ಧರಿಸಬಂದ ಶಿವಯೋಗಿ ಕ್ಷಾಮದೊಳ
ಗಣ ಜನರ ಕಾವುದೇನಚ್ಚರಿಯಿದೆಂದು ಮನವೊಸೆದವನ ಬಣ್ಣಿಸಿದರು ॥೧೦॥

ಬೇರೊಂದು ಕಾಲದೊಳು ಸಾರ ಶಿವಯೋಗಿಗತಿ-
ಸಾರ ರುಜೆಯಿಂದಲಸಿವಾರ ಶೌಚೋಪಾಧಿ
ಮಿಾರಿ ಬಳಿಯಲು ದಣಿದು ತನುವು ತನುವಾಗುತಿರಲಾ ಬೇನೆ ಗುಣವಾದುದು ॥
ಊರೊಳಗೆ ಸುತ್ತಲುಂ ಮಾರಿಕೆಯ ಬೇನೆಯದು
ಸೇರಿ ಸಾವಿಗೆ ಜನರು ಮೂರಹೋದರು ಬಳಿಕ-
ಮೂರ ಜನರಿಂತೆಂದರೀ ಗುರುವಿನತಿಸಾರವೀ ರುಜವ ಸೂಚಿಸಿದುದು ॥೧೧॥

ಮುಂದಾಗು ಹೋಗುಗಳನೊಂದುಳಿಯದಂತೆ ಬಾ
ಯಿಂದೊರೆಯದಾತ್ಮ ಕೃತಿಯಿಂದ ಸೂಚಿಪ ಮಹಾ
ನಂದಮಯ ಮಡಿವಾಳ ಶಿವಯೋಗಿಯೊಳು ಜನರ ನಂಬುಗೆಯದಿಂಬಿಡಿದುದು
ಎಂದಿನಂದದಿ ಜನರು ಬಂದು ಮಠದೊಳು ಭಜನೆ
ಯಿಂದೆ ಸೇವೆಯ ಗೈದು ದರುಶನಕೆ ಬರಹೋಹ
ಮಂದಿಯನ್ನುಪಚರಿಸಿ ಕಳುಹಿಕೊಡುತಿರ್ದರೆನಲೀತನೊಳು ಭಕ್ತಿಯೆನಿತೋ ॥೧೨॥

ಗುರುವರನ ಪ್ರೇಮಕ್ಕೆ ಪಾತ್ರನಯ್ಯಾ ಸ್ವಾಮಿ
ಮರಿದೇವನವನು ಮುಂಜಾವದೊಳಗೇಳ್ದು ಪರಿ
ಪರಿಯಿಂದಲುದಯರಾಗವ ಪಾಡಿ ಶಿವನುತಿಯನೆಸಗಿ ಬೆಳಗಾದ ಮೇಲೆ ॥
ಸರಸರನೆ ಊರೊಳಗೆ ಮೊಸರು ತಿರಿತಂದಿಟ್ಟು
ಗುರುವಿನಾ ಮೂತ್ರ ಪಾತ್ರವನು ನಿಷ್ಠೀವನದ
ಕಿರುಬಟ್ಟಲವ ಚೆಲ್ಲಿ ಬೆಳಗಿ ತಂದಿಟ್ಟು ಗುರುವಿಂಗೆ ಗುಡಗುಡಿಯ ಕೊಟ್ಟು ॥೧೩॥

ಕಣ್ಣುಗಾಣದ ಗುರುವರೇಣ್ಯನಂ ಕರವಿಡಿದು
ಚಿಣ್ಣನಂದದಿ ಶೌಚದುಜ್ಜುಗಕೆ ಕರೆವುಯ್ದು
ಮಣ್ಣೊಡನೆ ನೀರಿನಿಂ ಹಸ್ತ ಪಾದವ ತೊಳಿಸಿಯಾಸನದಿ ಕುಳ್ಳಿರಿಸುತೆ ||
ಬಣ್ಣದಾ ಗುಡಗುಡಿಯುವನ ಕೈಗಳವಡಿಸು
ತುಣ್ಣವಾ ಪೊಳ್ಪು ಬರೆ ವಿಸಿಸಿ ಪೂಜೆಯು ಗೈಸಿ-
ಯುಣ್ಣವಾಲು ಬೋನವನು ನೀಡಿ ಮಲಗಿಸುವನಿದು ನಿತ್ಯ ನಿಯಮುವವಗೆ ||೧೪||

ತಾನೂರಿನೊಳಗುಂಡು ತಿರಿತಂದ ಕಜ್ಜಗಳ-
ನಾನುತ್ತೆ ಮಠಕೈದಿ ಮಧ್ಯಾನ್ಹಕಾಲದೊಳು
ದೀನಜನರತಿಥಿಗಳುಮಾರಾದೊಡವರನೆಲ್ಲರನುಣಿಸಿ ಸಂಜೆಯೊಳಗೆ ||
ಸಾನುರಾಗದಿ ಕಸವನುಡುಗಿ ದೀವಿಗೆಗಳನು-
ಮಾನವಿಲ್ಲದೆ ಮುಟ್ಟಿಸುತೆ ಸಂಜೆಯೊಳಗಣತಿ
ಮಾನನೀಯನ ಗುರುವಿನೂಳಿಗವ ಗೈದೂರ ಜನರೊಡನೆ ಭಜನವೆಸಗಿ ||೧೫||

ಗುರುವರನ ಲಿಂಗಾರ್ಚನಾರ್ಪಿತವ ಮಾಡಿಸು
ತ್ತಿರದೆ ಮೇಲ್ವಾಸಿಕೆಯೊಳೊರಗಿಸುತೆ ಗುರುವರನ
ಚರಣಸೇವೆಯನೆಸಗಿ ತಾನುಂಡು ಬಳಿಕವನು ಮಲಗುವನು ನೇಮದುತೆ ||
ಗುರುವರ್ಯನಾತನೆಸಪೂಳಿಗವ ಕಂಡವನ
ನಿರದೆ ಕರುಣಾಪಾಂಗ ಪಾತ್ರನು ಮಾಡಿ ಬಹು
ತರದನುಗ್ರಹದಿಂದೆ ತಣಿಗೊಳಿಸಿದನು ಯೋಗಿ ಸುವಿರಾಗಿ ಸದನುರಾಗಿ ||೧೬||

ಹುಬ್ಬಳ್ಳಿ ಮಾರುದ್ರ ಪರಕಾಳಿ ಶಿವಪುತ್ರ
ರಿಬ್ಬರುಂ ಪೇಣು ವೀರಯ್ಯ ಭಿಷ್ಟನಗೌಡ
ರಿಬ್ಬರಿವರೆಲ್ಲರುಂ ಮುಖ್ಯ ಮರಿದೇವನಹ ಸಿದ್ಧಲಿಂಗನಿಗೆಂಪರು ||
ಅಬ್ಬರದಿ ಮುಪ್ಪು ತಾನುಬ್ಬಿ ಗುರುವರನೊಡಲ
ನೆಬ್ಬಬ್ಬ ಮುಸುಕುತಿಹುದದರಿಂದ ಕೇಳು ನೀ
ನೊಬ್ಬನಾದರು ಜವದೊಳುಪದೇಶವನು ಕೊಂಡು ಸೌಖ್ಯದಿಂದಿರಬೇಹುದು ||೧೭||

ಅಂದವನಿಗವರೆಂದುದಂ ಯೋಗಿ ಮನದೊಳಗೆ
ತಂದು ತೋಂಟದ ಸಿದ್ಧಲಿಂಗಶಿಷ್ಯೋತ್ತಮನ
ನೊಂದು ದಿವಸಂ ಕರೆದು ಸಿದ್ಧಲಿಂಗಾ ಕೇಳು ನೀನೆನ್ನ ಯೂಳಿಗವನು ॥
ಸಂದ ಭಕ್ತಿಯೊಳಿಂದುವರೆಗೆ ಮಾಡಿರುವೆಯುದ
ರಿಂದ ನಿನಗುಪದೇಶಗೈವೆ ಸುಮುಹೂರ್ತದೊಳು
ಬಂದ ಗಣರಿಗೆ ನೀನು ಮಾಲದಿಯು ಪ್ರಸ್ತವನು ಮಾಡಿಸೆಂದೆನೆ ಮನವೊಲಿದು ॥ ೮॥

ಕೆಲದಿನಂ ಗಳೆಯೆ ರಾಮನಗೌಡನನ್ನು ಕರೆ
ದೆಲವೊ ಕೇಳಿಂದು ಶುಭದಿವಸ ಬಂದಿಹುದು ನೀ
ನೊಲವಿನಿಂದಲಿ ಗಣಾರಾಧನೆಯನೆಸಗು ತೋಂಟದ ಸಿದ್ಧಲಿಂಗಾರ್ಯಗೆ ॥
ಮಲರಹಿತ ಲಿಂಗಾಂಗದುಪದೇಶಗೈವನಿ
ರ್ಮಲ ಕಾರ್ಯವಿಂದಿರ್ಪುದೆನೆ ರಾಮಗೌಡ ತಾ
ನೆರಗಿ ಗುರುವರನೊರೆದ ಮಾಳ್ಕೆಯಂತೆಲ್ಲವಂ ಪಾಕಸಿದ್ಧತೆ ಗೈಯ್ಯಲು ॥೧೯॥

ಮರಿದೇವನಹ ಸಿದ್ಧಲಿಂಗನಂ ಮಿಂದಿಸಿ ತಾ
ನಿರದೆ ತನ್ನೆದುರಾಸನದೊಳು ಕುಳ್ಳಿರಿಸಿ ಗುರು
ಪರಸಂಗಲಿಂಗದಳ ಕುಳಗಳನು ನವಲಿಂಗಗಳ ಸಕೀಲವನೆಲ್ಲವ ॥
ಮರಿದೇವನುತ್ತಮಾಂಗದೊಳು ಕರವಿರಿಸಿ ತಾ
ನರುಹಿದನು ಕರತಲಾಮಲಕಮಪ್ಪಂದದಿಂ
ಚರವರರು ಸರ್ವರುಂ ಕೂಡಿ ಜಯಜಯವೆಂದು ಜಯಘೋಷವನು ಮಾಡಲು ॥೨೦॥

ಮುದದಿನಂತೇವಾಸಿಯಹ ಸಿದ್ಧಲಿಂಗನಿಗೆ
ಪಮುಳದಿಂದುಪದೇಶಗೈದು ಮಡಿವಳಯೋಗಿ
ಸವಿಯ ಹೃದಯದಿ ತಾನು ಭಕ್ತರಿಗೆ ಸದ್ಬೋಧಗೊಡುತಿರ್ದನನವರತವು ॥
ಸದುಬಕುತಿ ಮಿಗೆ ಬಂದು ಜೋಡಮುಟ್ಟು ತಮ್ಮೊಡರ
ಹೃದಯದಿಷ್ಟವ ಸೂಚಿಸುವರೆಡರ ಗಳೆದು ಮೋಕ್ಷ
ಹೃದಯದಿಷ್ಟಾರ್ಥವನು ಕೊಟ್ಟುಕಳುಹುವರಮುಮ ಶಿವಯೋಗಿ ಮಡಿವಾಳರು ॥ ೨೧॥

ಇವರ ಬಣ್ಣವು ಕರಿದು ಮೇಲೆತ್ತರಾಳು ಮೇ
ಣಿವರ ಫಾಲವು ವಿಶಾಲವು ಸೇರೆಗಣ್ಣುಗಳು
ಮಿವರೆದೆಯು ಪಲಕ ಪರಿಣಾಹಯುತವಾಗಿಹುದು ರಾವವದು ಗಂಭೀರವು ||
ಇವರ ಬಾಹುಗಳಜಾನು ಬಾಹುವಾಗಿರುತಿಹ
ವಿವರ ಶಕ್ತಿಯು ಶಕ್ತಿಧರನಂತೆ ಪ್ರೋಲಿರ್ಪು
ದಿವರವಯುವಂಗಳೆಲ್ಲಿಂತಿರ್ಪುವೆಂದೊಡಿದು ಸೂಚಿಪುದು ಸೌಭಾಗ್ಯವ ||೨೨||

ಮುನ್ನಮಿವರೊಳನೇಕ ಸುಗುಣಗಣವಿರುತಿರ್ದೊ
ಡಿನ್ನವಂ ಪೇಳಲೆನಗಳವಲ್ಲ ದಾದೊಡಂ
ನನ್ನಿಯಿಂ ಹಲಕೆಲವನುಪವರ್ಣನವನೆಲ್ಲವಂ ಕೇಳುವುದು ಭಕ್ತಿಯುತರು ||
ಸನ್ಮತಿಗೆ ಪಕ್ವಾದ ಜಗವನೇ ತೃಣಕೆ ಸಮ
ಮೆನ್ನುವತಿ ವೈರಾಗ್ಯದೊದವು ಮೇಣ್ ಕೀಳ್ ಮೇ
ಲೆನ್ನದಖಿಲ ಪ್ರಾಣಿಗಳೊಳು ಸಮತಾಬುದ್ಧಿ ನೆಲಸಿರ್ಪುದಾವಾಗಳೂ ||೨೩||

ಸಚ್ಚಿದಾನಂದಾದ್ವಯಾತ್ಮರೂಪನು ತಾನು
ಉಚ್ಚತರದುಪರತಿಯು ದಮ ದಯಾ ಶಮ ಸಮ
ಕೋಚ್ಚಯುವದನ್ಯರಂ ತನ್ನಂತೆ ಭಾವಿಸುವ ಬಗೆಯು ಪರಮೋಪಕೃತಿಯು ||
ಅಚ್ಚಳಿಯದಿರ್ಪ ಲಿಂಗಾಂಗಸಮರಸಸುಖವು
ನೆಚ್ಚಿರ್ಪದಿಗೆ ಮೆಚ್ಚಿ ಇಷ್ಟಾರ್ಥಗಳುವಿಕೆಯು
ಬಿಚ್ಚಿ ತೋರುವ ಸರಳ ಹೃದಯತ್ವಮೆಲ್ಲವುಂ ಶಿವಯೋಗಿಯೊಳುಮೆರೆವುವು ||೨೪||

ಅನ್ಯಧರ್ಮದ ಪುರಸ್ಕಾರವೆಂದುಂ ಮತ್ತ-
ಮನ್ಯ ಧರ್ಮದ ತಿರಸ್ಕಾರರಾಹಿತ್ಯಮುಂ
ಸನ್ಯರಲ್ಲಿ ವರೊಳಿಹವದರಿಂದ ತಡಕೋಡ ರಾಮಭಟ್ಟನು ಶಿಷ್ಯನು ||
ಧನ್ಯರಾಗಿಹ ಚಿದಂಬರರಿವರೊಳತಿ ತುಷ್ಟ
ನನ್ಯನೋರ್ವನು ಮುಸಲ್ಮಾನ ಧರ್ಮದ ಮಹಾ
ಪುಣ್ಯಪುರುಷನು ಚಮನಶಹನೆಂಬವನುಮಿವರ ಸಹವಾಸದೊಳಗಿರ್ದನು ||೨೫||

ಇಂತೆನಿತೊ ಪರಧರ್ಮಗಳು ಶಿಷ್ಯರಾಗಲಿವ
ರಂತನ್ಯ ಧರ್ಮವನು ಮನ್ನಿಸುವರೊಳರೆ ಧೀ
ಮಂತರೊಳಗೆಂದು ಜನವೈದೆ ಬಂಣಿಪೊಡೆ ಪೂರ್ಣಜ್ಞಾನಿಯಿವನಲ್ಲವೆ ||
ಶಾಂತಿ ಸಮ್ಯಗ್ಜ್ಞಾನಸಂಪದವು ವೈರಾಗ್ಯ
ವೆಂತಾದೊಡೈದುವವು ನಿರಭಿಮಾನವದೊಂದೆ
ಎಂತಹನಿಗಾದರದು ದೊರಕದೆಂದೊಡೆ ಮಹಾಗುರುವರನೊಳಿರುತಿಹುದದು ||೨೬||

ಖಂಡಪರಶುವೆ ಭೂಮಿಮಂಡಲದ ರಕ್ಷಣಕೆ
ತುಂಡವೈದನ್ನು ಬಿಸುಟೊಂದೆ ಮೊಗದಿಂದವನ
ಹಿಂಡವಂ ತಾಳಿ ತಾಂ ಬಂದನಂತಲ್ಲದೊಡೆ ಜಾವಳನಿಗೀ ಗುಣಗಳೆ ||
ಪಂಡಿತಾಗ್ರಣಿಯು ಮೇಣ್ ಪಂಡಿತರ ತಂಡವನು
ದಂಡಿಸುವ ಪಾಂಡಿತ್ಯದಿಂ ಮಂಡಿತನು ಧರಾ
ಮಂಡಲದೊಳುದ್ದಂಡ ಪಂಡಿತರುಮಾರಿಲ್ಲವೆಂಬ ಕೀರ್ತಿಗೆ ಪಾತ್ರನು ||೨೭||

ಭೋಗವಿದು ತಿಳಿಯೆ ಭವರೋಗವೆಂದರಿದು ಶಿವ
ಯೋಗ ಸಾಮ್ರಾಜ್ಯದಾನಂದ ಘನಭೋಗದನು
ಭೋಗದಿಂ ದುರ್ಭವವ ನೀಗಿ ಶಿವಲಿಂಗಸಂಯೋಗಸುಖದೊಳಗಿರ್ಪನು ||
ರಾಗವದು ದುರ್ಭವಕೆ ಬೀಜವೆಂದರಿದದರ
ತ್ಯಾಗವನು ಗೈದು ನಿಸ್ಪೃಹತೆಯೊಡಗೂಡಿ ತಾ
ನಾಗು ಹೋಗುಗಳನಾ ಶಿವಲಿಂಗಮುಖದಾಗು ಹೋಗುಗಳೆಂದರಿವನು ||೨೮||

ಸತ್ಯದಿಂ ಮಿಗಿಲು ತಪಮಿಲ್ಲೆಂದು ತಿಳಿದೊಳಗೆ
ನಿತ್ಯ ನಿತ್ಯಂ ಸ್ತುತ್ಯ ಸತ್ಯಮಂ ನುಡಿವರಿವ
ರತ್ಯುತ್ತಮರು ಯೋಗಿವರರಿಂದ್ರಿಯಗಳ ಜಯವತಿಶೌರ್ಯವೆಂದರಿವರು ||
ಮಿಥ್ಯೆಯದು ನರಕಕ್ಕೆ ಭಾಜನವು ಮೇಣ್ ಗತಿಗೆ
ವ್ಯತ್ಯಯವ ನೀವುದೆಂದರಿದಿಪ್ಪರಿವರು ಸ
ತ್ಯತ್ಯಯುವೆ ಜನಿಮೃತ್ಯುಹರವೆಂದು ತಿಳಿದದಂ ಸಂಪಾದಿಸಿರ್ಪರಿವರು ||೨೯||

ತುಚ್ಛವಹ ಮುನಿಸಿರಲು ಕಿಚ್ಚದೇತಕೆ ಬೇರೆ
ಸ್ವಚ್ಛ ಮಾನಸದಿಂದ ಬೇರೆ ತೀರ್ಥವದೇಕೆ
ಮಚ್ಚರವು ಲೋಭವೆರಡಿರುತಿರಲು ಬೇರೆ ರೌರವನರಕವೇಕೆ ಬೇಕು ||
ಅಚ್ಚಳಿಯದಿಹ ವಿರತಿಯೊಂದಿರ್ದೊಡಂ ಸಂಪ
ದಿಚ್ಛೆಯೇತಕೆ ಮಹಾಮೋಹವಿರೆ ಮೂರ್ಖತೆಯು
ಪೃಚ್ಛೆಯೇತಕ್ಕಹಂಕಾರದಿಂ ಬೇರೆ ದುರ್ಗತಿಯೇತಕೆಂದರಿವರು ||೩೦||

ಪಂಡಿತರ ಕೂಡ ವಾಗ್ವಾದವಮಾಡುವದೆನಿತು
ಚಂಡವಾಗಿರ್ದೊಡಾ ಕುದುರೆಯನ್ನೇರುವುದು
ಪುಂಡರಾದೀ ಮಹಾಯೋಗಿವರ್ಯರಿಗೆರಡು ಚಟಗಳಿವು ಸಹಜವಿಹವು ||
ತುಂಡದೊಳಗಖಂಡವಾದಾ ಬ್ರಹ್ಮವರ್ಚಸವು
ಮಂಡಿಸಿಹುದೀಗಳುಂ ಮುಪ್ಪಿನಾವಸ್ಥೆ ಬಂ
ದಂಡಲೆವುತಿರ್ದೊಡೆಂದೊಡೆ ಮಹಾಗುರುವರರ ವಿಜಿತೇಂದ್ರಿಯತ್ವವೆನಿತೊ ||೩೧||

ಪರರಿಗೆಂದುಂ ಕ್ಷೇಮವಿರಲೆಂಬ ಮಂತ್ರವ
ನ್ನಿರದೆ ಜಪಿಸುವರಿವರು ಪರರಿಗುಪಕಾರವನು
ನಿರುತ ಮಾಳ್ಪುದು ಪರರ ಕಷ್ಟವನು ಪರಿಹರಿಪುದೆರಡಿವರ ಹುಟ್ಟು ಗುಣವು ||
ಧರಣಿಯುದ್ಧೃತಿಗಾಗಿಯವತರಿಸಿ ಬಂದವರು
ಧರಣಿಜನಸದ್ಗತಿಗೆ ಲಿಂಗಮಂ ಪೂಜಿಪರು
ಧರಣಿಯೊಳಗಿಹ ಶರಣಜನರಿಗುಪದೇಶವನು ಮಾಡುವರು ದಿನದಿನದೊಳು ||೩೨||

ಕ್ರಿಸ್ತನ ಸಮಸ್ತ ಬಾಯಬಲ್ಲವನು ಮಹಮ್ಮದನ
ಶಸ್ತವಾಗಿಹ ಖುರಾಣವನು ತಾವೆಲ್ಲವಂ
ವ್ಯಸ್ತವಾಗುವ ತೆರದೊಳೋದಿಯರಿತವರಿವರು ಸರ್ವಭಾಷಾಭಿಜ್ಞರು ||
ಮಸ್ತಕದೊಳಮೈಕ್ಯದೊಳು ಲಿಂಗವನು ಧರಿಸು
ಹಸ್ತಹೃದಯದೊಳಗುದಯದೊಳು ಮಧ್ಯದೊಳಗರ್ಚಿ
ನಾಸ್ತಿವಿಂತ ಚಿತ್ತವುಳ್ಳವರಾಗಿ ವರ್ತಿಪರು ಪರಮಾರ್ಥತತ್ವವಿದರು ||೩೩||

ಈ ಸುಗುಣಮಂಡಿತರು ಪಂಡಿತಾಗ್ರಸರು ಪ್ರತಿ
ವಾಸರಂ ಮಡಿವಾಳಯೋಗಿಗಳು ಭಕ್ತರಿಗೆ
ವಿಂಸಲದ ಸದ್ಬೋಧವನು ಮಾಳ್ಪರಾದರನೊಳಂತೆನಲ್ವೇಳ್ವೆ ನಾನು ।
ಪಾಸವಾಗಿಹ ಮನೆಯ ಕಸವನೋಸರಿಸುತಂ
ಬೇಸರದೆ ಸಾರಣೆಯ ಕಾರಣೆಯ ಗೈವುತಂ
ಲೇಸುಮಿಗೆ ಶುಚಿಯಾಗಿ ಮಾಳ್ಪತೆರದಿಂದ ನೀವೆಲ್ಲರೀ ಚಿತ್ತಗೃಹವ ॥೩೪॥

ದುಷ್ಟ ದುರ್ವಾಸನೆಯ ಕಸವ ಗಳೆದಾಬಳಿಕ
ಕ್ಲಿಷ್ಟವಾಗಿಹ ಸದಾಚಾರ ಸಮ್ಮಾರ್ಜನೆಯ
ಸ್ಪಷ್ಟರೀತಿಯಿಂದಸಗಿ ಸದ್ಧ್ಯಾನವೆಂಬ ಕಾರಣೆಯನಾರೆ ರಚಿಯಿಸುತ್ತೆ ॥
ಶ್ರೇಷ್ಠವಾಗಿಹ ಮನೋಗೇಹವನು ಶುಚಿಗೊಳಿಸಿ
ನಷ್ಟಗೊಳಿಸುವ ಭವವನತಿಗಳೆದು ಸಾಂಬನು
ತೃಷ್ಟಪದವನು ಪಡೆದು ನರಜನ್ಮಸಾರ್ಥಕತೆಯನ್ನೆಸಗಿ ಸೊಗವಡೆಯಿರಿ ॥೩೫॥

ಏಗಳುಂ ಸತ್ಸಂಗವನು ತ್ಯಜಿಸದಿರಿ ನೀವು
ರಾಗದಿಂದೇಕಾಂತದೊಳು ಧ್ಯಾನವನು ಮಾಡಿ
ರೇಗಳುಂ ಶಾಂತಿಪಾಠವ ನೀವು ಕಲಿಯಿರಯ್ ಶಾಸ್ತ್ರಜ್ಞಾನಂಬವಹುದು ॥
ಭೋಗ ಮೋಕ್ಷಗಳೆರಡನೊಂದುಮಡೆ ಶಿವಭಕ್ತಿ
ಯೋಗವನು ಪಡೆಯಿರಯ್ ಮುನ್ನ ಬಸವಾದಿಗಳ್
ಪೊಗವದು ಶಿವಭಕ್ತಿಯಿಂದ ಜಸವಂ ತಳೆದು ಶಿವನೊಳೇಕತೆ ಪಡೆದುದು ॥೩೬॥

ಪಾಪವನ್ನೆಳಸದಿರಿ ಕೋಪವನು ಬಳಸದಿರಿ
ತಾಪಸರ ಮಾನಸಕೆ ತಾಪವನು ಮಾಡದಿರಿ
ಶ್ರೀ ಪರಂಜ್ಯೋತಿಸ್ವರೂಪ ಲಿಂಗವ ನೀವು ಲೋಪವಿಲ್ಲದೆ ಪೂಜಿಸಿರಿ ॥
ಕಾಪುರುಷರೊಡನೆ ಸಲ್ಲಾಪಸಂಗವನುಳಿದು
ಭೂಪುಣ್ಯಪುರುಷರೊಡನಾಟವಾಡುತೆ ಸದೋ
ಮಾಪತಿಯ ನಾಮಸಂಕೀರ್ತನಂ ಗೈದು ಪಡೆಯಿರಿ ನೀವು ಪುರುಷಾರ್ಥವ ॥೩೭॥

ವಿಶ್ವವಿದು ನಶ್ವರವು ಶಾಶ್ವತವು ಶಿವಪದವು
ಪಶ್ವಾದಿಭೂತ ಸಮುದಾಯದೊಳಗತಿ ಮಮತೆ
ಯೀಶ್ವರಾರ್ಚನೆಯಲ್ಲಿ ನಿಷ್ಠೆ ನೆಲೆಗೊಳಬೇಕು ಪರರಿಗುಪಕೃತಿ ಗೈವನು ॥
ವಿಶ್ವತೋಮುಖ ಶಿವನ ಶರಣರ್ಕಳೊಳು ಭೂರಿ
ವಿಶ್ವಾಸವಿರಬೇಕು ಭಂಗುರವಿದಂಗವೆಂ
ದೀಶ್ವರಾರ್ಚನೆಯನ್ನು ತಳುವದೆಸಗುತ್ತೆ ನೀವು ಕಾಂಕ್ಷಿತಾರ್ಥವ ಪಡೆಯಿರಿ ॥೩೮॥

ಪರನಿಂದೆ ಪರಪೀಡೆಗಳನೆಂದುಮೆಸಗದಿರಿ
ಪರರಿಗುಪಕಾರವನ್ನಳವರಿತು ಮಾಡಿರಯ್
ಪರರೊಡನೆ ನೀವು ದ್ವೇಷಾಸೂಯೆಗಳನೆಂದುಮೆಸಗದಿರಿ ಸೊಗಪಡೆವಡೆ ॥
ಪರರು ನಿಮಗಪಕೃತಿಯ ಗೈದೊಡದನೀಕ್ಷಿಸದೆ
ಮರಳಿ ನೀವವರಿಗುಪಕಾರವನೆ ಮಾಡಿದೊಡೆ
ಭರದಿ ಸರ್ವಾತ್ಮನಪ ಹರನ ಕೃಪೆಯುಪ್ಪುದೆಂದಿಂತೊರೆದರಾ ಗುರುಗಳು ॥೩೯॥

ಸಾರಮಹಿಮಾಢ್ಯರೀ ಯೋಗಿಮಡಿವಳರು ಸ್ವಶ
ರೀರವನ್ನಡಸಿರುವ ಮುಪ್ಪಿನಿಂ ತಾವು ಬೇ
ರೂರಿಗೆಲ್ಲಿಯುಂ ಪೋಗದೀ ಗದಗದಲ್ಲಿಯೇ ತಾಣಗೊಂಡಿರುತಿರೆ ॥
ಮಾರಹರನಾಜ್ಞೆ ತನಗಾದುದಂ ಜ್ಞಾನದಿಂ
ಧೀರ ಮಡಿವಳರು ತನ್ನೊಳಗರಿದು ನೈಜಾವ
ತಾರದ ಸಮಾಪ್ತಿಯಂ ಗೈಯಲಿಚ್ಛಿಸಿ ಬಳಿಕಮಾರಿಗೊರೆಯದಲಿರ್ದರು ॥೪೦॥

ಎರಗಿದಾರಡಿಗೆ ಸುಮವೆನಿಸಿದಾ ಸರಸಿಜವು
ಭರದಿ ಮಕರಂದವನು ನೀಡುತಿಹುದೆಂದೊಡಿದ
ನರಿದು ಜಗದಂಬೆ ನಿನ್ನಡಿದಾವರೆಯೊಳಾನು ಸತತಮಾಂಡಿಪನಾಗಿಹೆ ॥
ಧರೆಯ ಜನನಿಯೆ ನೀನು ಕರೆದೆನ್ನ ಮುಂದಕ್ಕೆ
ಕರುಣಾರಸಸ್ವಾದು ಮಕರಂದವನ್ನಿತ್ತು
ಪೊರೆಯಲೆಂದನವರತಮಾನು ನಿನ್ನನ್ನು ಮೊರೆಹೊಕ್ಕಿರುವೆ ಮಾದೇವಿಯೆ ॥೪೧॥

ಶ್ರೀ ಶಿವಾದ್ವೈತಪರ ವಿದ್ಯಾನವದ್ಯಾಕೃತಿ
ವೈಶದ್ಯ ವಿದ್ಯೋತಮಾನನ ಮಹಾಲಿಂಗ
ದೇಶಿಕ ಶಿಖಾಮಣಿಯ ಪಾಣಿಕಂಜಾತಸಂಜಾತನು ಕವೀಶದಊತಂ ॥
ಆ ಸದಾಶಿವಕವಿಯು ಭೂಸದಾಶಿವನ ಯೋ
ಗೀಶನ ವಿಪಾಶನ ನಿರಾಶನುರುಮಡಿವಾಳ
ದೇಶಿಕನ ಚರಿತದೊಳಗವನ ಗುಣಗಳನೊರೆದ ಹದಿನಾಲ್ಕನೆಯ ಸಂಧಿಯು ॥೪೨॥

ಅಂತು ಸಂಧಿ ೧೪ಕ್ಕಂ ಪದಂಗಳು ೬೨೫ ಮಂಗಳಂ
ಶ್ರೀ ಶ್ರೀ

## ೧೫ನೆಯ ಸಂಧಿ

ಸೂಚನೆ:—ಗುರುವರೇಣ್ಯರು ಮಹಾಯೋಗಿ ಮಡಿವಳರು ಪರ
ತರನ ಹರನಾಜ್ಞೆಯಾಗಿಹುದೆಂದು ಭಕ್ತರನು
ಬರಮಾಡಿಕೊಂಡು ಸುರುಚಿರ ಸಮಾಧಿಯ ರಚನೆಗಾಣತಿಯನಿತ್ತರವರು ॥

ಮಾಜದನಿಶಂ ನಿನ್ನನರ್ಚಿಸಿದೆನೆಲೆ ದೇವ
ಮೂಜಗಕ್ಕೊಡೆಯ ನಿನ್ನನು ಬಿಡದೆ ಬಣ್ಣಿಸಿದೆ
ರಾಜಧರ ನಿನಗಾನು ನಮಿಸಿದೆನು ನಿನಗಿನಿತುಗೈದೊಡಂ ದಯುವದಿಲ್ಲ ॥
ಸೋಜಿಗವು ಮುನ್ನವೋರ್ವನು ಕಲ್ಲಿನಿಂದೊಗೆದ
ನಾಜಿಯೊಳಗೋರ್ವನುರೆ ಬಿಲ್ಲಿನಿಂದಂ ಪೊಯ್ದು
ರಾಜೀವನಯನೆಯೋರ್ವಳು ವನಿಕೆಯಿಂ ಬಡಿದಳದರಂತೆ ನಾಂ ಗೈಯ್ಯಲೋ ॥೧॥

ಬಂದೊರ್ವೆಯೀ ಗುರೂತ್ತಮರು ಗರಗದೊಳಿರ್ಪ
ಮಂದಿಯೊಳು ಪ್ರಮುಖನಾಗಿರುವ ಭಿಷ್ಟನಗೌಡ
ನಂದು ಕರೆದೆಮ್ಮದೀ ಲೋಕಯಾತ್ರೆಯು ಮುಗಿದುದೆನಲಾತನಿಂತೆಂದನು ॥
ತಂದೆಯೀಗಳೆ ಬೇಡ ಪತ್ತುಬರಿಸಂ ಬಾಳಿ
ವಂದಿಸುವ ಮಂದಿಯನ್ನುದ್ಧರಿಪ್ಪದೆನಲದ
ಕ್ಕೊಂದು ಮಾತನ್ನಾಡದಾನೊಪ್ಪಿಕೊಂಡಿರ್ಪೆ ನೀಂ ಬರೆದ ಮಿತಿ ತೋರಿಸು ॥೨॥

ಎಂದುದಂ ಕೇಳಿ ಯೆದೆಗುಂದಿ ಭಿಷ್ಟನಗೌಡ
ನಂದು ತಾಂ ಬರೆದಿಟ್ಟ ಲೇಖನವ ತೋರಲ್ಕೆ
ತಂದವಧಿ ಪೂರ್ಣವಾಗಲ್ಕೀಳು ದಿವಸಂಗಳುಳಿದಿರ್ದುವದನೀಕ್ಷಿಸಿ ॥
ಕಂದುಗೊರಲನ ಮೂರ್ತಿಯೆಂದನಾತಂಗೆ ಕೇ
ಳಿಂದಿಗೆಂಟನೆ ದಿನದೊಳಾವು ಲಿಂಗದೊಳಪ್ಪೆ
ವೆಂದೆನಲದಂ ಕೇಳಿ ಗೌಡ ತನ್ನಯ ವಚನವಂದು ಪೋದುದರಿಂದಲಿ ॥೩॥

ಪಾಡಳಿದು ನೆಲಕೆ ದೊಪ್ಪನೆ ಬೀಳೆ ಗುರುವರನು
ಗೌಡ ನಿನ್ನಯ ವಚನದಂತೆ ನೀನಿರು ಪೋಗು
ಬೇಡ ದುಗುಡವದಿನ್ನು ಮುಂದಣುಜ್ಜುಗದೊಳಿರು ಪೋಗೆಂದು ಬೆಸಗೈದನು ॥
ಗೌಡನಾ ಗುರುವರ್ಯನೊರೆದುದಂ ಕೇಳಿ ನೆರೆ
ಮೂಢನಂದದಿ ತಾನು ಭಯಗೊಂಡು ಮರುಮಾತ
ನಾಡದೆದೆಗುಂದಿ ಹೌವನೆ ಹಾರಿ ಬಳಿಕ ತಾಂ ನಿರುಪಾಯನಾದನವನು ॥೪॥

ಕೇಗಂಣಮೂರುತಿಯು ತನ್ನಂಘ್ರಿಭಕ್ತನಹ
ಹಂಗರಿಕಿಯಯ್ಯಪ್ಪ ದೇಸಾಯಿಯಂ ಕರಿಸಿ
ಲಿಂಗಭಕ್ತನೆ ಕೇಳು ನಾವೆಂಟು ದಿವಸಕ್ಕೆ ಲಿಂಗೈಕ್ಯವಂ ಪಡೆವೆವು ॥
ಲಿಂಗೈಕ್ಯದವಧಿ ವಾರ್ತೆಯ ಕೇಳಿದನಿತರೊಳು
ಕಂಗೆಟ್ಟು ದೇಸಾಯಿ ಯೆದೆಗುಂದಿ ಬಳಿಕ ತ
ನ್ನಂಗಭಾನವ ನೀಗಿ ದಂಗಾಗಿ ನಿಂದನವನೇಮೆಳ್ಳೆ ಗುರುಭಕ್ತಿಯ ॥೫॥

ಅಯ್ಯಪ್ಪನುತ್ತಮಾಂಗದ ಮೇಲೆ ಗುರುವರನು
ಕೈಯ್ಯನಿಟ್ಟೊಯ್ಯನೇ ಸಂತೈಸುತಿನ್ನುಮುಂ
ಗೈಯ್ಯಬೇಕಾಗಿರ್ಪ ನಿಜಸಮಾಧಿಯ ಕಾರ್ಯವನ್ನೆಸಗ ಪೋಗೆನ್ನಲು ॥
ಸುಯ್ಯಗಳೆದವನು ಬಳಿಕಾ ಸಮಾಧಿಯ ಕಾರ್ಯ
ಗೊಯ್ಯನೇ ನಡಕಟ್ಟಿ ಹಗಲುವಿರುಳುಂ ತಾನು
ವೈಯ್ಯಗೊಟ್ಟೊಡನೆ ಕಲ್ಗಚ್ಚುಗಳನೊದಗಿಸಲು ತೊಡಗಿದನು
ದೇಸಾಯಿಯು ॥೬॥

ಸುತ್ತ ಮುತ್ತಣ ಗ್ರಾಮದೊಳಗಿರ್ಪ ಕಲ್ಲುಗಳ
ಮೊತ್ತವನು ತರ್ಪುದಕೆ ವರಸಮಾಧಿಯ ರಚನೆ
ಗುತ್ತಮವದೆನಿಸಿರುವ ಗದ್ದುಗೆಯ ನಿರ್ಮಿತಿಗೆ ದ್ವಿಸಹಸ್ರ ರೌಪ್ಯಗಳನು ॥
ಒತ್ತರದೊಳಿತ್ತು ತಾನುಪ್ಪಾರರಂ ಕಳುಹ
ಲತ್ತವರು ಸಮ್ಮುದಂ ಬೆತ್ತು ಪೋಗುತ್ತೆ ಸುಮ
ಹತ್ತರ ಸಮಾಧಿಕಾರ್ಯದೊಳಗವರೆಲ್ಲರುಂ ತೊಡಗಿರ್ದರುಪ್ಪಾರರು ॥೭॥

ನರಿಸಿದ್ಧಲಿಂಗಪ್ಪ ಹಣಗಿ ಘಂಟೆಪ್ಪನುಂ
ಗುರುಭಕ್ತಿಯುತನು ಮಾರುದ್ರಪನು ಹುಬ್ಬಳ್ಳಿ
ಪರಕಾಳಿ ವೀರಪನು ದೇಶಪಾಂಡೆಯು ರಾಘವನು ತೊಡಗಿಯಿವರೆಲ್ಲರ ||
ಬರಮಾಡಿ ಗುರುವರ್ಯರವರಿಗೇದರು ನಾವು
ಪರಶಿವಾಧೀನರಾಗುವೆವೆಂಟು ದಿನದೊಳಗೆ
ವರಲಿಂಗದೊಳಗಾದ ಬಳಿಕ ಕ್ಷೌರವಗೈಸಿ ಮೈದೊಳೆದು ನೀವೆಲ್ಲರು ॥೮॥

ಭಸಿತಮಂ ಪೂಸಿ ಬಂಡಿಯ ಮೇಲೆ ಕುಳ್ಳಿರಿಸಿ
ವಸತಿಗೈಸದಲೆ ಬಿಡದಾ ದಿನವೆ ನೀವೆಲ್ಲ
ರೆಸಗಿದ ಸಮಾಧಿಯೊಳಗೀ ದೇಹವನ್ನಿರಿಸಿ ಜಯಘೋಷವಂ ಮಾಳ್ಪುದು ॥
ಒಸೆದಿಂತು ಗುರುವರರು ಬೆಸಸುತ್ತಿರಲ್ಕವರು
ತಿಸುಳಿಗನ ರೂಪವಿಡಿದೀ ಮಹಾತ್ಮರ ನುಡಿಯು
ಹುಸಿಯಲ್ಲವೆಂದೊಳಗೆ ತಿಳಿದಾಗಳಸವಸದಿ ಮುಂದಣಾಜ್ಞೆಗದೊಳಿಪರು ॥೯॥

ಮಡಿವಾಳ ಶಿವಯೋಗಿಯಡಿದಾವರೆಯ ಬಕುತಿ
ಯೆಡೆವಿಡದಲಾರಾರ ಚಿತ್ತದೊಳಗನವರತ
ವಡಿಯೂರಿ ನಿಂದಿರ್ಪುದವರ್ಗೆಲ್ಲರಿಗೆ ದೈವದಪರೋಲೆಗಳ ಬರೆಯಲು ॥
ಒಡನೆ ಪತ್ರವ ನೋಡಿದಾ ಭಕ್ತಿಯುತ ಜನರ
ಗಡಣವಂತಲ್ಲದಾ ಸುತ್ತಲೂರಿನ ಜನರು
ತಡಮಾಡದೈತರಲ್ಕಾ ಗರಗವದು ತುಂಬಿ ಕಿಕ್ಕಿರಿದುವೆಲ್ಲೆಡೆಯೊಳು ॥೧೦॥

ಮೆಲ್ಲೆದೆಯ ಶಿವಯೋಗಿ ಮಠವ ಮರಿದೇವರುಗ
ಳೆಲ್ಲರಂ ಕರೆದು ತಾನೋರೋರ್ವರಿಗೆ ಬೊಗಸೆ
ಯಲ್ಲಿ ರೂಪಾಯಿಗಳ ತುಂಬಿ ಕೊಟ್ಟಂತುಮಲ್ಲದೆ ತೆಂಗುಗಳ ನೀವುತೆ ॥
ಎಲ್ಲ ದೇವರ್ಕಳೊಳು ಬಲ್ಲಿದನಗಿರಿಸುತಾ
ವಲ್ಲಭನ ಯಜಿಸಿ ನೀವೆಲ್ಲರೀ ದುರ್ಘಟವ
ಗೆಲ್ಲುವನುಪಮ ಭಕ್ತಿಯುತರಾಗಿ ಬಾಳಿರೆಂದುಪದೇಶ ಗೈದನವನು ॥೧೧॥

ಬಂದಿರುವ ಪಟ್ಟಚರಮೂರ್ತಿ ಸದ್ವಿರಕ್ತರಿಗೆ
ಚೆಂದವಾಗಿಹ ಪಟ್ಟವಸ್ತ್ರಗಳ ಪಾತ್ರೆಗಳ
ನಂದವರು ತಮ್ಮ ಕೈಯಿಂದ ಕೊಟ್ಟನ್ಯ ಜಂಗಮರ ಸಂದೋಹಕೆಲ್ಲ ॥
ತಂದು ಪೊದೆಯುವ ಬಟ್ಟೆಯೊಂದೊಂದನಿತ್ತು ಹರಿ
ತಂದ ಬಡಹೆಮ್ಮಕ್ಕಳಿಗೆ ಶೀರೆಗಳ ಭಕ್ತ
ರಿಂದೆ ಬಿಡದಲೆ ಕೊಡಿಸಿ ತಾವು ಶಿವಸಂಸ್ಮರಣದಿಂ ಗುರುಗಳಿರುತಿರ್ದರು ॥೧೨॥

ಧರಣಿ ರಕ್ಷಣೆಗೋಸುಗವತರಿಸಿಬಂದ ಘನ
ಕರುಣಾಳು ಮಡಿವಾಳ ಶಿವಯೋಗಿ ನಿಜ ಕಳೇ
ಬರ ವಿಸರ್ಜನದ ಕೊನೆಯಲ್ಲಿಯುಂ ನಿಜದಾನ ಗುಣವ ಬಿಡದಿರ್ಪನಿವನು ॥
ನೆರೆದ ಜನರಿವನ ದೇಹದ ನಿರ್ವಿಕಾರತೆಯ
ನಿರುಕಿಸುತೆ ನಾಳೆಗಿವನೆಂತು ಲಿಂಗದೊಳಪ್ಪು
ದರಿದರಿದು ನೋಡಿರೆಂದೋರೋರ್ವರೊಳಗೊಳಗೆ ಮಾತನಾಡುತಲಿರ್ದರು ॥೧೩॥

ಹಂಗರಿಕಿ ದೇಸಾಯಿಯಯ್ಯಪ್ಪನಂ ಕರೆದು
ಮಂಗಳಾತ್ಮಕ ಸಮಾಧಿಯು ಕರ್ಮನಿರ್ಮಿತಿಯು
ಸಾಂಗವಾಗೀಗಳದು ಪೂರ್ಣವಾಗಿಪ್ಪುದೇನೆಂದು ಗುರುಗಳು ಕೇಳಲು ||
ತುಂಗ ಮಹಿಮಾಢ್ಯರೇ ! ನಿಮ್ಮಾಜ್ಞೆಯನ್ನುತ್ತ
ಮಾಂಗದೊಳಗಿರಿಸಿ ನಾನಾ ಸಮಾಧಿಯನೀಗ
ಪಿಂಗದೆಸಗಿರ್ಪೆನಿದೊ ಸಿದ್ಧಪಡಿಸಿಯೆಂದವನು ನಮಿಸಿ ವಿಜ್ಞಾಪಿಸಲ್ಕೆ ॥೧೪॥

ದೇಸಾಯಿ ಕೇಳು ನೀಂ ಚಿರಕಾಲದಲಿ ಬಾಳ್ವ
ಲೇಸನೀಯುವ ಭಕ್ತಿ ಮನಕೆ ಬಂದುದು ನಿನಗೆ
ಭಾಸುರಾತ್ಮನ ಶಿವನನುಗ್ರಹವು ಬಿಡದಾಗಲೆಂದು ಗುರು ಪರಸಿ ಮತ್ತೆ ॥
ಆ ಸಮಯದೊಳಗಿರ್ಪ ಭಕ್ತರನು ಕುರಿತು ಕರು
ಣಾಸಮುದ್ರನು ಪೇಳ್ದನೆಂತೆನಲು ಕೇಳಿರೆನ್ನೀ ಶಿವೈ
ಕ್ಯ ಸಮಯದಿ ನಾಲ್ವತ್ತು ಬರಿಸಕಾ ಸಿಂಧುಸುತನಾಗಿ ಒಕ್ಕುಂದದೊಳವತರಿಪೆನು
॥೧೫॥

ಒಕ್ಕುಂದದೊತ್ತಿನಾ ಪೊಳೆಯ ತಡಿಯೊಳಗವನು
ಲೆಕ್ಕವಿಲ್ಲದ ಗಣಕೆ ಪುರಿಗಡಬುನರುದುಪ್ಪ
ಸಕ್ಕರೆಯನಕ್ಕರಿಂದಿಕ್ಕಿ ತಣಿಪನು ಬಳಿಕ ಕೆಲಕಾಲ ಕಳೆದ ಮೇಲೆ ॥
ಅಕ್ಕರ್ಕ ಹೂಲಿಯೊ ನ ಹುಚ್ಚ ಮೂರುತಿಯು
ಒಕ್ಕುಂದದೊಳಗೆನ್ನ ಗದ್ದುಗೆಯ ಸ್ಥಾಪಿಸುತ
ಮುಕ್ಕೋರ್ವಸಡಗರದಿ ದಾಸೋಹವಿಡುವನೆಂದುಸುರಿದನು ಶಿವಯೋಗಿಯು ॥೧೬॥

ಲಿಂಗೈಕ್ಯವಾಗುವಾ ದಿನಗಳೊಂದೆರಡುಳಿಯೆ
ಲಿಂಗಪೂಜೆಯುಗೈದು ಲಿಂಗಾರ್ಪಿತವನುಳಿದು
ಲಿಂಗಸಂಸ್ಮರಣದೊಳಗಿರ್ಪ ಮಡಿವಳಯೋಗಿ ಬಂದ ಗಣಭಕ್ತ ಜನಕೆ ||
ಡಿಂಗರಿಗರಿಗೆ ತಾನು ಮೇಣಿತರ ಜನರಿಗುಂ
ಹಿಂಗದಲೆ ಭೋಜನವ ಮಾಡಿರೆಂದುಸುರಲವ
ರಂಗವಿಸಿ ನಮಿಸಿ ನೀವರ್ಪಿತವನೆಸಗದಿರಲುಣಲಾರೆವೆಂದೆಲ್ಲರು ॥೧೭॥

ಎಂದ ಭಕ್ತರ ಚಿತ್ತದಂದವಂ ತಿಳಿದು ತಾ
ವಂದು ಪರಕಾಳಿ ಮುರಿಗೆವ್ವನಂ ಕರೆ ಕಳುಹೆ
ಬಂದ ಮುರಿಗೆವ್ವನಿಗೆ ತಾಯೆ ನೀನಿಂದು ಪುಳಿಪಲ್ಲೆಯುಸಳಿಯ ಮುದ್ದಿಯ ॥
ತಂದು ಕೊಡು ನೀನೆನಲ್ಕಾ ತಾಯಿಯೆರಗಿ ಮನೆ
ಗಂದು ಬಂದೆಲ್ಲವಂ ಮಾಡಿಕೊಂಡೈತಂದು
ವಂದಿಸಲು ಗುರುವು ಸುಪದಾರ್ಥವನ್ನರ್ಪಿಸಲು ಬಳಿಕವುಂಡರು ಸರ್ವರು ॥೧೮॥

ಇತ್ತ ಗುರುವರ್ಯರವರಜ್ಞ ಜಾಬಾಯೆಂಬು
ವುತ್ತಮೋತ್ತಮುಮುಪ್ಪ ಗುರುನಾಮುದುಚ್ಚಾರ
ದತ್ತ ನಾಲಗೆ ತೊಡಗೆ ಮಂಚವನ್ನೇರಿ ಬಳಿಕದರ ಮೇಲ್ಪವಡಿಸಲ್ಕೆ ॥
ಮತ್ತೆ ಮಠದೊಳಗಿರುವ ಜನರ ಮೊತ್ತವದಾಗ
ಳೊತ್ತರದಿ ಶಿವಭಜನೆ ಶಿವಕೀರ್ತನಂಗಳನು-
ದಾತ್ತ ರವದಿಂದ ಬೆಳಗಾಗುವನ್ನಂ ಮಾಮಲೆಂಟನೆಯ ದಿನವು ಬರಲು ॥೧೯॥

ಗುರು ಪೇಳಿದೆಂಟನೆಯ ದಿನ ಬಂದುದಿಂದು ಗುರು
ವರನ ದರುಶನವಿಂದಿಗೆರವಪ್ಪುದಕಟಕಟ
ಗುರುದೇವನೈದ ಬಳಿಕಿನ್ನಾವುದೆಮಗೆ ಗತಿ ಗುರುವರ್ಯನಡಿಯಡಗಿತು ॥
ಗುರುವಿನುಪದೇಶವೆಮಗಿನ್ನೆಲ್ಲಿ ಶಿವಶಿವಾ
ಗುರುಕೃಪಾದೃಷ್ಟಿ ಯೆಮಗಿನ್ನೆಂದು ಬೀಳ್ವುದೋ !
ಗುರುವರನನಗಲಿಸುವ ದಿನವನ್ನು ನಾವೆಂತು ಕಳೆವುದೆಂದರು ಜನಗಳು ॥೨೦॥

ಸಿರಿ ಸರಸ್ವತಿ ಶಚಿಯು ಮೊದಲಾದ ಸುರವನಿತೆ
ಯರು ಗೌರಿ ನಿನ್ನಡಿಗೆ ಬೆಳಗುತಿಹರಾರತಿಯ
ನಿರದೆ ನಿತ್ಯಂ ಸಪ್ತಮಾತೃಕೆಯರರ್ಚಿಪರು ಕ್ಷೇತ್ರಪಾಲರು ನುತಿಪರು ॥
ಗಿರಿಜಾತೆ ಮೂದೇವರಿಗೆ ಮಾತೆ ಮಾದೇವಿ
ಪರಿಪೂತೆ ನಿನ್ನನಾನನವರತವರ್ಚಿಪೆನು
ಪೊರೆಯೆನ್ನ ಮರೆಯದಲೆ ಸುರವಿನುತೆ ವಿಖ್ಯಾತೆ ಗುಹಮಾತೆ ಪರಮಾತೆಯೆ ॥೨೧॥

ಶ್ರೀ ಶಿವಾದ್ವೈತ ಪರವಿದ್ಯಾಸಪದ್ಯಾತ್ಮಿ
ವೈಶದ್ಯ ವಿದ್ಯೋತಮಾನ ಮಹಾಲಿಂಗ
ದೇಶಿಕಶಿಖಾಮಣಿಯ ಪಾಣಿಕಂಜಾತ ಸಂಜಾತನು ಕವೀಶದೂತಂ ॥
ಆ ಸದಾಶಿವಕವಿಯು ಭೂಸದಾಶಿವನ ಯೋ
ಗೀಶನ ವಿಪಾಶನ ನಿರಾಶನುರುಮಡಿವಾಳ
ದೇಶಿಕನ ಚರಿತದೊಳು ಗುರುಸಮಾಧಿಯನೊರೆದ ಹದಿನೈದನೆಯ ಸಂಧಿಯು ॥೨೨॥

ಅಂತು ಸಂಧಿ ಹದಿನೈದಕ್ಕಂ ಪದಂಗಳು ೮೪೩ಕ್ಕಂ ಮಂಗಳಂ
ಶ್ರೀ ಶ್ರೀ

## ೧೬ನೆಯ ಸಂಧಿ

ಸೂಚನೆ — ಪೇಳಿದೆಂಟನೆಯ ಶುಭದಿನದ ಪ ಚ್ಚಿಂಜೆಯೊಳು
ಭಾಳಾಕ್ಷನವತಾರಗೊಂಡ ಗುರುವರ್ಯಮಡಿ
ವಾಳ ಶಿವಯೋಗಿ ಮಣಿಲಿಂಗದೊಳು ಬೆರೆದನವನೆಲ್ಲರುಘೆ
ಯುಘೆಯೆನ್ನಲು ।

ಕಾಯಜಾರಿಯೆ ಮೂರು ತಾಪದುರಿಯಿಂ ಬಳಲಿ
ಬೇಯುತಿಹೆನನವರತವಾರೆನಗೆ ದಿಕ್ಕಿಲ್ಲ
ಮೇಯ ಕರುಣಾಭರಣ ನಿನ್ನನೇ ಮರೆಹೊಕ್ಕೆನೀಗಳಿನದು ಕಾರಣಂ ॥
ಭೀಯನಾಗಿಸಿ ಮನಕೆ ಬಾಯಬಿಡುವಂತೆಸಪ-
ಪಾಯಕರವಾದ ತತ್ತಾಪವನು ಪರಿಹರಿಸಿ
ಕಾಯೊ ನೀನೆನ್ನ ದಯೆದೋರಿ ತ್ರಿಪುರಾರಿ ಭವಭೂರಿಭಯಸಂಹಾರಿಯೆ ॥೧॥

ಎಂಟನೆಯ ದಿನದ ಮುಂಜಾವದೊಳಗಾ ಜಗ
ತ್ಕಂಟಕವನತಿಗಳೆಯ ಬಂದ ಮಡಿವಳಯೋಗಿ
ಯುಂಟಾದ ಗಣಸಮೂಹಕೆ ಭೋಜನವ ಗೈಸಲೆಂದವನು ಮನದಂದು ತಾಂ ॥
ತೋಂಟದಾ ಸಿದ್ಧಲಿಂಗಾಖ್ಯ ಮರಿದೇವಮೋಣ್
ಬಂಟನಾದಯ್ಯಪ್ಪ ದೇಸಾಯಿ ಹಂಗರಿಕಿ
ಗಂಟೆಪ್ಪ ವೀರಯ್ಯ ಮೊದಲಾದವರ ಕುರಿತು ಪೇಳಿವನು ಮನದಂದವ ॥೨॥



ಶ್ರೀ ಜಗದ್ಗುರು ಮಡಿವಾಳ ಶಿವಯೋಗಿಗಳ ಸಮಾಧಿ, ಗರಗ



ಶ್ರೀ ಮಡಿವಾಳ ಶಿವಯೋಗಿಗಳ ಪಲ್ಲಂಗ, ಆವುಗೆ ಮತ್ತು ಬೆತ್ತ, ಗರಗ

ಇಂದು ಸಂಜೆಯೊಳು ಶಿವಲಿಂಗದೊಳಗೈಕ್ಯವಂ
ಪೊಂದುವೆವು ಮಧ್ಯಾಹ್ನಕಾರಾಧನೆಯನೆಸಗಿ
ಲೆಂದುಸುರಿ ಮತ್ತೆ ಗುರುರಾಯನವರಿಗೆ ಪಿಂದೆ ಪೇಳ್ದುದಂ ನೆಪ್ಪುಗೊಡಲು ॥
ತಂದೆ ನೀವಂದಂತೆ ಗೈವೆವೆಂದವರೆಲ್ಲ
ರಂದು ಭೋಜನ ಸಮಾರಂಭವನ್ನೆಸಗಿ ಮುದ
ದಿಂದ ಸರ್ವರು ಬಂದು ಪೊಡಮಟ್ಟು ಕುಳ್ಳಿರಲ್ ಗುರುರಾಯನಿಂತೆಂದನು ॥೩॥

ಇದುವೆ ಕಡೆಯುಪದೇಶವದು ಕಾರಣಂ ನೀವು
ಸದುಪದೇಶವಿದೆಂದು ನಂಬಿ ಕೇಳ್ದೊಡೆ ನಿಮಗೆ
ಸದಯ ಹೃದಯನ ಶಿವನ ಕೃಪೆಯಪ್ಪುದೆಂದೊಡಿದನನುರಾಗದಿಂ ಕೇಳ್ವುದು ॥
ಮೊದಲು ನಾನಾರೆಲ್ಲಿ ಪೋಪುದೇಗೈವುದೆಂ
ದುದಿತ ಸುವಿವೇಕದಿಂದೊಳಗರಿವುತಾಮೇಲೆ
ಹೃದಯದೊಳು ನಾನೇಕೆ ಪುಟ್ಟಿಬಂದಿಹೆ ಶಿವನೆ ಸಾಕೆಂದು ಬೇಳ್ಪುದವನ ॥೪॥

ಪುಟ್ಟಿರುವ ಜಂತುಗಳ ಸಮುದಾಯಕಾ ಸಾವು
ತಟ್ಟುವುದು ನಿಜವೆಂದು ತಿಳಿದು ಮನದೊಳು ಬಳಿಕ
ಪುಟ್ಟುಸಾವುಗಳೆರಡನಟ್ಟುವಡೆ ಮೊದಲು ಸದ್ಧರ್ಮವನೆ ಪರಿಪಾಲಿಸಿ ॥
ಕಟ್ಟಿಳ್ಕರಿಂದ ಮನಮುಟ್ಟಿ ನೀವೆಲ್ಲರೂ
ದಿಟ್ಟಿಮೂರನ ಭಕುತಿಯೊಂದರಿಂದಲಿ ಭವವು
ಕೆಟ್ಟುಪೋಪಂತೆ ಸಾಹಸವ ಗೈದೊಡೆ ನಿಮಗೆ ಘನಸುಖವದಳವಡುವುದು ॥೫॥

ಭಕುತಿಯೈದನೆಯ ಪುರುಷಾರ್ಥವೆಂದರಿವರಿವ–
ರಕಪಟಾತ್ಮರು ಕ್ರಿಯಾಜ್ಞಾನವೆರಡುಂ ಕೂಡಿ
ಭಕುತಿಯೊಳಗಿರ್ಪವದರಿಂದ ಮಿಗಿಲಹುದು ನಿರಹಂಕಾರ ಭಕ್ತಿಯೊಂದೆ ॥
ಅಕುಟಿಲಾತ್ಮರು ಪುರಾತನ ಶರಣರೆಲ್ಲರೀ
ಭಕುತಿಯಿಂದಲೆ ತಮ್ಮ ತಮ್ಮಿಷ್ಟವಂ ಪೊಂದಿ
ಯಕಳಂಕ ಚರಿತಭಾಜನರಾದರೆಂದೊಡೆಲ್ಲರು ಭಕ್ತಿಯುತರಾಗಿರಿ ॥೬॥

ಭಕ್ತಿಯಿಂದಲಿ ವಿಗತಿಸಂಪದವು ದೊರೆಗುವಾ
ಭಕ್ತಿಯಿಂ ಶಿವೈಕ್ಯಪದವುದಪ್ಪುದಿದು ನಿಜವು ಸಲೆ
ಭಕ್ತಿಯಿಂ ಸುಜ್ಞಾನಸಂಪತ್ತಿಯುಹುದು ವರಭಕ್ತಿಯಿಂದಿಹಭೋಗವು ॥
ಭಕ್ತಿಯಿಂದೈಸಿರಿಯು ಭಕ್ತಿಯಿಂ ವೈಸಿರಿಯು
ಭಕ್ತಿಯಿಂ ಸದ್ಗುಣಗಳೊದವು ನಿರಹಂಕಾರ
ಭಕ್ತಿಯಿಂ ಸಕಲೇಷ್ಟಸಿದ್ಧಿ ಬಗೆವೊಡೆ ಮಹಾಭಕ್ತಿಯೇ ನಿಖಿಲ ಜನನಿ ॥೭॥

ತಾಯಿಂದ ಪುಟ್ಟಿ ಪೋಣ್ ತಾಯಿಂದ ಬಳೆವುತಾ
ತಾಯನ್ನು ಪೊರೆವ ಮಕ್ಕಳ ಪಾಂಗಿನಂತೆಪ್ರೋ
ಲಾಯುವಾದ್ಯಷ್ಟಾಂಗಯೋಗ ಶಮ ದಮ ಮಹಾಕ್ಷಾಂತ್ಯಾದಿ ಸದ್ಗುಣಗಳು ॥
ಕಾಯಜಾರಿಯು ಭಕ್ತಿಯಿಂದುದಿಸಿ ಪೋಣ್ ಬಳೆದು-
ಪಾಯದಿಂದಲಿ ಭಕ್ತಿಯನ್ನು ರಕ್ಷಿಸ್ಪುವೆನ
ಲಾ ಯೋಗ್ಯಗುಣಗಳಿಗೆ ಜನನಿಯುಹ ಭಕ್ತಿಯೊಡಗೂಡಿ ಸುಖದಿಂ ಬಾಳಿರಿ ॥೮॥

ಭಕ್ತಿಯೆಂಬುದು ಮನೆಯ ಕಾಮಧೇನುವು ಶಿವನ
ಭಕ್ತಿಯೆಂಬುದು ಬಗೆಯೆ ಪಿತ್ತಲದ ಸುರತರುವು
ಭಕ್ತಿಯೆಂಬುದು ತನ್ನ ಮನೆಯ ಚಿಂತಾಮಣಿಯು ಭಂಗಾರದುತ್ತಮ ಖನಿ ॥
ಭಕ್ತಿಯೆಂಬುವದೊಂದೆ ಪೂರ್ಣಾ ಸತ್ಕ್ರಿಯೆಗೆ
ಭಕ್ತಿಯೆಂಬುವದೊಂದೆ ಅಂತರಜ್ಞಾನಕ್ಕೆ
ಭಕ್ತಿಯಿಂದು ಮುಕ್ತಿಗುಂ ರನ್ನ ಚಿನ್ನದ ಮುತ್ತಿನಾಭರಣವಪ್ಪುದಯ್ಯಾ ॥೯॥

ಎಂದು ತಾನುಪದೇಶಗೈದು ನಿಕರೊಳಗರ್ಕ
ನಂದು ಗುರುವರನ ಲಿಂಗೈಕ್ಯವನು ನಿರುಕಿಸದೆ
ಕುಂದಿ ಭುವನಾಂತರಕೆ ಪೇಳ ಪೋಪಂದದಿಂದಸ್ತಗಿರಿಯೊಳಗಿಳಿದನು ॥
ಸಂದು ಬಿಡದಂತೆಲ್ಲ ಮುಂದಿ ಸಂವಣಿಸಿ ನಿಲ
ಲಂದು ಮಡಿವಳಯೋಗಿ ಮಿಂದು ಭಸಿತಂ ದಳೆದು
ಕಂದುಗೊರಲನ ಪೂಜೆಯಂ ತೀರ್ಚಿ ಪೀಠದೊಳು ಬಂದು ಕುಳಿತಿಂತೆಂದನು ॥೧೦॥

ಆತನೈದಿರ್ಪನೇನೀತನೈತಂದನೇ
ನೋತಾತನೀತನೆಂದೆಲ್ಲರನ್ನಾಗಳೊ
ಳ್ಪ್ರೀತಿನಿಂದುಪಚರಿಸಿ ಕೇಳಲೆಲ್ಲರು ಗುರುವೆ ಬಂದಿಹರು ಜನರೆನ್ನಲು ||
ಮಾತದೇನೆನ್ನ ಪ್ರೀತಿಗೆ ಪಾತ್ರನಹ ಹೊಸಬ
ರಾತನೈತಂದೀಗಳೆಲ್ಲಿಹನು ಮಾರುದ್ರ
ನೋತು ಕೇಳಲ್ಕಾತನೈತಂದುದಿಲ್ಲೆಂದು ಪೇಳಲಾ ಗುರುವರ್ಯನು ॥೧೧॥

ಹಾಕಿದೋಲೆಯುದವಗೆ ಮುಟ್ಟಿಲ್ಲಮುದರಿಂದ
ಲೀ ಕಾಲಕವನು ತಾಂ ಬಾರದಿಹನಿನ್ನು ಮೇ
ಲಾಕಲಾದನಿಗೆನ್ನನುರುತರ ಸಮಾಧಿಯೊಳಗಿಟ್ಟೊಡಂ ತೋರಿಸುವುದು ||
ನೀ ಕರಿಸದವನನ್ನು ಬಡವನೆನ್ನುತೆ ನೀವು
ಜೋಕೆಯಿಂ ಮುಂದಕ್ಕೆ ಕರೆನ್ನ ದರುಶನವ
ಸಾಕನಿತು ಮಾಡಿಸಿರಿ ಮರೆಯದಿರಿ ನೀಮೆಂದು ಪ್ರೀತಿಯಿಂ ಪೇಳ್ದನವನು ॥೧೨॥

ಆ ಮಾತಿಗೆಲ್ಲರನುಮತಿಗುಡಲ್ಕಾಬಳಿಕ
ಶ್ರೀ ಮಹಾಮಹಿಮ ಶಿವಯೋಗಿ ಮಡಿವಳ ಗುರುವು
ಸೋಮಶೇಖರನ ಸದ್ಧ್ಯಾನದೊಳು ತೊಡಗಿ ಕುಳ್ಳಿರಲಿತ್ತಲೆಲ್ಲ ಜನರು ॥
ಶ್ರೀ ಮಹಾದೇವ ದೇವನಭವನ ಪರಶಿವನ
ನಾಮಸಂಕೀರ್ತನವ ಕೀರ್ತನವನೆತ್ತಲುಂ
ನೇಮದಿಂ ಮಾಡುತಿರಲಿತ್ತ ಶಿವಯೋಗಿ ತಾಂ ಬೆರೆದನಭವಧ್ಯಾನದಿ ॥೧೩॥

ಕುಂಡಲಿಯನೂರ್ಧ್ವಮಾಗಿರಿಸಿ ನಡುನಾಡಿಯೊಡ
ಗೊಂಡು ಶತಚಂಡಕರ ಸುಪ್ರಭಾಚಯವನೊಳ
ಕೊಂಡಖಂಡಿತ ಮಂಡಲತ್ರಯಾನುಪಮ ತೇಜಃಪುಂಜ ಶಿವಲಿಂಗವ ॥
ಕಂಡುಕೊಂಡಲ್ಲಿ ನಿಬ್ಬೆರಗಾಗಿ ಕುಳ್ಳಿರಲ್
ಮುಂಡೆಯುತ್ತಮದಿಂದ ಪ್ರಣವನಾದವದುದಿಸೆ
ತಂಡ ತಂಡದ ಮಂದಿ ಕೇಳುತಚ್ಚರಿವಟ್ಟು ವಂದಿಸಿದರಾ ಕಾಲದಿ ॥೧೪॥

ಓಂಕಾರನಾದವದು ಝೇಂಕರಿಸೆ ಶಿರದಲ್ಲಿ
ಶಂಕರಹಿತರು ಯೋಗಿಮಡಿವಾಳರು ನಿರ್ನಿಮೇ
ಷಾಂಕರಾಗುತ್ತ ನಾಸಾಗ್ರದೊಳು ನೋಟವನ್ನಿರಿಸಿ ಕುಳಿತಿರ್ದರವರು ॥
ಶಂಕರನೆ ಪ್ರತ್ಯಕ್ಷನವತಾರಿಯಲ್ಲಿವನು
ಶಂಕೆಯೇತಕೆ ಮಹಾಪ್ರಭುವೆ ತಾನಲ್ಲದೊಡೆ
ದೋಂಕಾರನಾದವೆಂತುದಯಿಪುದು ಶಿವ ಶಿವಾ ಎಂದು ಪೊಗಳಿದರೆಲ್ಲರು ॥೧೫॥

ಇತ್ತಮೆಲ್ಲಿಡೆಂಬೊಳಗೆ ಶಿವಭಜನೆ ನಡೆದಿರ
ಲ್ಕತ್ತ ಕೆಲವೆಡೆಯೊಳಗೆ ಮಂಗಳದ ವಾದ್ಯಂಗ
ಳೊತ್ತರದಿ ಮೊಳಗೆ ಜನರುತ್ತಮರು ಜಯಘೋಷವನ್ನೆಸಗುತಿರ್ದರಿರದೆ
ತತ್ತಪಸ್ವಿಗಳೇಕತಾನತೆಯುಂ ಬಲಿದಿರಲು
ಮತ್ತೆ ಭಕ್ತಿಯುಮತ್ತ ಜನರು ನಿಂದಲ್ಲಿ ಕೈ
ಯೆತ್ತಿ ಹಣೆಗೊತ್ತಿ ಕೊಂಡರು ಜನರ ಸಂದಣಿಯುಂ ಕಿಕ್ಕಿರಿದು ಕೂಡಿರುತಿರೆ ॥೧೬॥

ಒರೆವೆನೇನಾನಂದನಾಲಿವರ ಲೋಗಾಲಿ
ಮರಲು ಪಾಲ್ ಪಾಲೊಳಗೆ ನೀರು ನೀರೊಳು ಮತ್ತೆ
ಕಿರಣವದು ಕಿರಣದೊಳು ಮಿಂಚು ಮಿಂಚಿನೊಳು ಬೆರೆದೇಕರಸವಾದಂದದಿ ॥
ಗುರುವರರು ಶಿವಯೋಗಿ ಮಡಿವಾಳರು ಲಿಂಗದೊಳ
ಗರರೆ ಬಯಲಾದರವರಾ ಜನರು ಕಂಗೆಟ್ಟು
ಮರಮರನೆ ಮರುಗುತ್ತ ಜಯನಮಃ ಪಾರ್ವತೀಪತಿ ಹರಾ ಹರ ಎಂದರು ॥೧೭॥

ಲಿಂಗೈಕ್ಯರಾದೊಡಾ ಶಿವಯೋಗಿ ಮಡಿವಾಳ
ರಂಗವಿಳೆಗೊರಗದೇ ನೆಟ್ಟನೇ ಕುಳ್ಳಿರಲು
ಮಂಗುವಡೆದೆಲ್ಲರುಂ ಕಪ್ಪುರವ ಹಚ್ಚಿ ಸಾಷ್ಟಾಂಗ ಪ್ರಣಾಮವನ್ನು ॥
ಆಗವಿಸಿ ಮಾಡೆ ಒಳಿತಾ ಗರಗದೂರವರು
ತುಂಗಮಹಿಮರು ಮೊದಲು ಪೇಳ್ದಂತದಿಂದ ಕ್ಷೌ
ರಂಗೊಳಿಸಲುದ್ಯುಕ್ತರಾಗಿ ಕ್ಷೌರಿಕನನ್ನು ಬರಿಸಿ ಭದ್ರಾಕರಣವ ॥೧೮॥

ಮಾಡಿಸುತೆ ಸರ್ವಾಂಗಕೆಣ್ಣೆಯಂ ಪೂಸಿ ನಲಿ
ದಾಡಿ ಕದುಗಾದ ನೀರಿನಿಂದಲವನನ್ನೆರೆಯೆ
ಕೂಡಿರುವ ಪೂಜ್ಯವಿರತರು ಮೈಯನೊರಸೊವಸಿ ಭೂತಿಯಂ ಮೈಗೆ ಪೂಸಿ ॥
ನಾಡರಿಯೆ ಸರ್ವಾವಯವಗಳಲಿ ಪ್ರಣವಗಳ
ನಾಡೆ ಸಂಬಂಧವಂ ಮಾಡಿ ಸುಮಪತ್ರಗಳ
ಸೂಡಿ ಸಲೆ ಮಂಗಳಾರತಿಯನ್ನು ಪಾಡಿ ಪುಷ್ಪಾಂಜಲಿಯ ಗೈದರವರು ॥೧೯॥

ಭುವನದೊಳಗವತರಿಸಿ ಬಾಲಲೀಲೆಯ ಕಳೆದು
ಭುವನ ಪ್ರಸಿದ್ಧವಹ ಪಾಂಡಿತ್ಯಮಂ ತಳೆದು
ಭುವನವೆಲ್ಲವ ಚರಿಸಿ ಭುವನವನ್ನುದ್ಧರಿಸಿ ಮೆರೆದ ಮಡಿವಳಯೋಗಿಯು ॥
ಭುವನವರಿಯಲ್ಕೆ ಪದಿನೆಂಟು ನೂರೆರಡು ಶಕ
ದವಧಿಯುತ ಸಂವತ್ಸರದ ಮಾಘ ಮಾಸದುರು
ಧವಳೇತರದ ಪಕ್ಷದಾ ತದಿಗೆಯಲ್ಲಿ ಶಿವಲಿಂಗದೊಳಗವನು ಬಯಲಾದನು ॥೨೦॥

ತಾಯನಗಲಿರುವೆಲ್ಲ ಮಕ್ಕಳಂದದಿ ಮೇಣು
ತಾಯಿಯಂ ಕಳೆದಿರ್ಪ ಕರುವಿಂಡಿನಂತಿಳೆಗೆ
ತಾಯಿ ತಂದೆಯುಮಾದ ಶಿವಯೋಗಿಮಡಿವಳರನಗಲಿರುವ ಜನರೆಲ್ಲರು ॥
ಹೇಯವಾದಳಲಡಸಿ ತುತಿಸಿದರು ವರ ಮುನಿನಿ
ಕಾಯಸಂಗೇಯನನಪಾಯನಂ ಪರಿಹಸಿತ
ಮಾಯನಂ ಭುವನಕೆ ರಸಾನನಜೀವನಂ ಜೀಯನಂ ಗುರುರಾಯನಂ ॥೨೧॥

ಎಲ್ಲ ಜಗಕುಪಕೃತಿಯ ಗೈಯಲೆಂದೆಳಸಿ ನೀ
ನಿಲ್ಲಿ ಗುರುವಲ್ಲಮ ಪ್ರಭುವಿನಂತವತರಿಸಿ
ಬಲ್ಲಹನುಮೊಂದೆನಿಸಿ ಕುರುಡ ಕುಂಟರ ಪೆಳವರಿಷ್ಟಾರ್ಥವನ್ನಿತ್ತೆಯಯ್ಯ ॥
ಮೆಲ್ಲಿದೆಯನೆನಿಸಿಯುಂ ಕ್ಷುಲ್ಲಕರ ಬಲ್ಲಿದರ
ಸೊಲ್ಲನೆಲ್ಲಡಗಿಸಿದೆ ಮರೆಹೊಕ್ಕರಿಗೆ ನೀನು
ಸಲ್ಲಲಿತ ಧರ್ಮೋಪದೇಶದಿಂ ಪಾಲಿಸಿದೆಯಿಂದು ನೀನಗಲಿದೆಯಲಾ ॥೨೨॥

ಎಂದರೆಬರಳಲಿಂದ ಮರೆಯಿಡಲವರೆವರು ಬೇ
ರೊಂದು ತಾಣದೊಳುರ ನಾರಿಯರುವಾರತಿಯು
ತಂದು ಬೆಳಗುತೆ ನಿಂದು ಕಂಬನಿಯು ಸೂಸುವರು ಗುರುಮೂರ್ತಿಯನ್ನೀಕ್ಷಿಸಿ ||
ಅಂದೂರೊಳೆಲ್ಲಿಯುಂ ಗೊಂದೆವಳವಿಗೆಗಳುಂ
ಚೆಂದ ಚೆಂದದ ಮುಕುರ ತಳಿರತೋರಣಗಳುಂ
ಸಂದಿ ಸಂದಿಯು ಬಿಡದೆ ಕಣ್ಗೆ ಮಂಗಳವಾಗಿ ಸಿಂಗರದೊಳೆಸೆದಿರ್ದುವು ||೨೩||

ಸಿಂಗರಿಸಿ ಮೆರೆವ ವರ ರಥದ ಮಧ್ಯದೊಳು ಪರ
ಜಂಗಮಾಗ್ರಣಿಯಪ್ಪ ಮಡಿವಳರ ದೇಹಮಂ
ಕಂಗೊಳಿಸುವಂತೆ ಕುಳ್ಳಿರಿಸಿ ಕೆಲಬಲದೊಳಗೆ ಛತ್ರಚಾಮರವ ಪಿಡಿದು ||
ಡಿಂಗರಿಗರುಂ ಧಾಳಿಸುತ್ತಿರಲು ಮುಂದೆ ವಾ
ದ್ಯಂಗಳುಲಿಯುಲು ಜನರು ಜಯಘೋಷವನ್ನೆಸಗೆ
ಮುಂಗಡೆಯೊಳೆಡ ಬಲದೊಳೆನಿತೊ ದೀವಟಿಗೆಗಳುಮುರಿಯಲೂರೊಳಗೆ ರಥವು||೨೪||

ಬರೆ ಮೆರೆಯಿಸುತವಿರಳೊಳು ಸಮಾಧಿಯು ತಾಣ
ಕರರೆ ರಥವನು ತಂದು ಬಿಟ್ಟದರ ಮಧ್ಯದೊಳ
ಗಿರುವ ಮಡಿವಳಯತಿಯ ಶವವನ್ನು ಕೆಳಗಿಳುಹಿ ಪರಸಮಾಧಿಯ ಮಧ್ಯದಿ ||
ಇರಿಸಿ ವಿಧಿಯೆಂತಂತೆ ಯಜಿಸಿ ಪುಷ್ಪಾಂಜಲಿಯು
ನೆರಚಿ ಬಳಿಕಂ ಮಂಗಳಾರತಿಯು ಪಾಡುತ್ತೆ
ಮಿರುಗುವ ತ್ರಿಕೋಣೆಯೊಳಗಿಟ್ಟು ಘನತರ ದೃಷತ್ ಫಲಕವನು
ಮುಚ್ಚಲೊಡನೆ ||೨೫||

ಇತ್ತಮಪ್ಪಾ ತಂದೆ ಎಂದೋರ್ವನಾ ಹೊಸೂ
ರ್ಪತ್ತಾರ ಮಾರುದ್ರನೆಂಬನೆದೆಯೆದೆಯು ಬಡಿ
ವುತ್ತಮಳುತಂ ಬಂದು ಸುತ್ತಲುಂ ಮುತ್ತಿರುವ ಜನದಿ ತೂಪ್ಪನೆ ಬೀಳ್ದನು ||
ತತ್ತರಿಸಿ ಮೇಲೇಳುತಪ್ಪ ಅಪ್ಪಾ ಗುರುವೆ
ಯೆತ್ತ ಪೋದೆಯೊ ಯೆನಗೆ ದರುಶನವ ಕುಡದೆ ನೀ
ನಿತ್ತ ಬಾ ಯೆಂದೊದರೆ ಮುತ್ತಿರುವ ಜನರಿವನ ನೋಡುತ್ತಮಿಂತೆಂದರು ||೨೬||

ಹಿಂದೆ ಮಡಿವಳ ತಂದೆ ಪೇಳಿದವನಿವನೆ ಗಡ
ಬಂಗೊಡುತಂಗೆನ್ನ ದರುಶನವ ಮಾಡಿಸುವು
ದೆಂದು ಪೇಳ್ದಂತೆಸಪವೇಳ್ಕೆಂದು ಮುಖ್ಯ ಜನಂಪನ ಮುಂಪಕ್ಕೆ ಕರೆದು ||
ಚೆಂದದ ತ್ರಿಕೋಣೆಗಾನಿಸಿದ ಕಲ್ಲನು ತೆಗೆದು
ಮುಂದೆ ಬಾ ನೋಡೆಂದು ಗುರುವರನ ತೋರೆ ಮುದ
ದಿಂದವನು ನೋಡಿಯಾನಂತಾಶ್ರು ಸುರಿಯುತಿರೆ ಸೈಗೆಡೆದು ಪೊರಳಾಡಿದಂ ||೨೭||

ಆಮೇಲೆ ತತ್ತ್ರಿಕೋಣೆಯು ಮುಚ್ಚಿಪರೆಮುನ್ನ
ನೇಮದಂತಾನಿಸಿ ಸಮಾಧಿಯುಂ ನೆರೆ ಮುಚ್ಚಿ
ಪ್ರೇಮದಿಂ ಪುಷ್ಪಾಂಜಲಿಯನೆಸಗಿ ಜಯ ಜಯಾರಾವವನು ಗೈದು ಬಳಿಕ ||
ಶ್ಯಾಮಕಂಠನ ರೂಪವಾಂತ ಮಡಿವಳಯೋಗಿ
ಯಾ ಮಹಾರೂಪಮದು ಜಗದೊಳಿಂದಡಗಿಪುದು
ನಾಮವೊಂದೇ ಉಳಿವುದೆಂದು ತಲ್ಲಣಗೊಂಡು ಪೋದರೆಲ್ಲರು ಸದನಕೆ ||೨೮||

ಈಗ ಯೋಗಿಯ ಸಮಾಧಿಯ ಮೇಲೆ ಮಾಳ್ದ ಗ
ದ್ದುಗೆಯನರ್ಚಿಸಿ ನಿತ್ಯ ನೈವೇದ್ಯವನು ಮಾಡು
ವಾ ಗರಗದೂರವರು ಪ್ರತಿವರ್ಷವೀಗಳುಂ ಭಕ್ತಿಯಿಂ ವೆಚ್ಚಗೈದು ||
ಮಾಘಮಾಸದ ಕೃಷ್ಣಪಕ್ಷದಾ ತದಿಗೆಯೊಳ
ಗಾಗಿಸುವರಾ ತೇರಜಾತ್ರೆಯನ್ನೆಂದೊಡಾ
ಯೋಗಿಪತಿ ದೇಹವನ್ನೀಗಿದೊಡು ತನ್ಮಹಿಮೆ ಪೆರ್ಚುಗುಂ ಮೊದಲಿಗಿಂದ ||೨೯||

ಪದಿನೆಂಟು ನೂರದೆಪ್ಪತ್ತೆರಡು ಶಕದೊಳೊದ
ವಿದ ವಿಕೃತಿ ವತ್ಸರದ ಮಾರ್ಗದುರು ಶುಕ್ಲಪ
ಕ್ಷದ ತದಿಗೆಯಾ ತಿಥಿಯ ಸೋಮವಾಸರದೊಳೀ ವರಪುರಾಣವು ಮುಗಿದುದು ||
ಇದನಾರು ಭಕ್ತಿಯಿಂ ಬರೆದೋದಿ ಕೇಳುವರು
ಪದುಳದಿಂದವರ್ಗೆಲ್ಲರಿಗೆ ಹಿತರು ಸತಿ ಸುತರು
ಮದನಾರಿಕೃಪೆಯಿಂದೆ ಹಿರಿಯ ಸಿರಿ ಪೈಯ ಸಿರಿಯೊದಗುವುದು ದಿಟವರಿಯಿರಿ||೩೦||

ಸತತಭವತತ್ಪರತೆ ಪರರ ವಸ್ತ್ವಪಹರತೆ
ಸತತಮನ್ಯರ ನಿಂದೆ ಪರರಿಗಪಕೃತಿಯೊಂದೆ
ಸತತಮಿವರೊಡಗೊಂಡ ನರರ ನುತಿಯೊಳಕೊಂಡಡಹುದು ನಿರಯವದೆನ್ನುತೆ ||
ಶಿತಿಗಳನರೂಪ ಧೃತಿ ಶ್ರುತಿ ಶಿರೋವಿತತಿಗತಿ
ನುತಿವಡೆದ ವಿರತಿರತಿ ಶಿವಯೋಗಸಾಧುಮತಿ
ಕ್ಷಿತಿಯೊಳಿವನಾಂತ ಮುಕ್ತ್ಯಂಗನಾಪತಿಯ ಮಡಿವಳಯತಿಯ ನುತಿಗೈದೆನು ||೩೦||

ಗಿರಿಜಾತೆ ನಿನ್ನ ಪರಿಮಿತದ ಮಹಾತ್ಮ್ಯವನು
ಪರಿಪರಿಯ ಚಿತ್ರಾರ್ಥದೊಡವೆರೆದ ಸೂಕ್ತಿಯಿಂ
ದಿರದೆ ಬಣ್ಣಿಪರು ಕವಿವರರ ವರವಚನಗಳ ಸ್ವೀಕರಿಪೆ ತುಷ್ಟಳಾಗಿ ||
ಅರಿಯಲಾನವರಂತೆ ಜಾಣನಾಗದೊಡೆನ್ನ
ಪಿರಿಯ ಭಕುತಿಯುಮವೆರಸು ವಚನಗಳು ನಿನ್ನನ್ನು
ಹರಿಸಗೊಳಿಸಲಿಗುವಚ್ಚ ನದಿಗೂಡಿಡಲ್ಪ ನದಿಯುದಧಿಯಂ ತಣಿಪಂದದಿ ||೩೨||

ಶ್ರೀ ಶಿವಾದ್ವೈತಪರ ವಿದ್ಯಾನವದ್ಯಾತಿ
ವೈಶದ್ಯವಿದ್ಯೋತಮಾನನ ಮಹಾಲಿಂಗ
ದೇಶಿಕಶಿಖಾಮಣಿಯ ಪಾಣಿಕಂಜಾತಸಂಜಾತನು ಕವೀಶದೂತಂ ||
ಆ ಸದಾಶಿವಕವಿಯು ಭೂಸದಾಶಿವನ ಯೋ
ಗೀಶನ ವಿಪಾಶನ ನಿರಾಶನುರುಮಡಿವಾಳ
ದೇಶಿಕನ ಚರಿತ್ರದೊಳು ಲಿಂಗೈಕ್ಯಮಂ ಪೇಳ್ದ ಹದಿನಾರನೆಯ ಸಂಧಿಯು ||೩೩||

ಅಂತು ಸಂಧಿ ಹದಿನಾರಕ್ಕಂ ಪದಂಗಳು ೮೭೯ ಮಂಗಳಂ
ಶ್ರೀ ಶ್ರೀ

ಶ್ರೀ ಶಿವಯೋಗಿ ಮಡಿವಾಳೇಶ್ವರ ಪುರಾಣವು ಸಂಪೂರ್ಣವು.
ಶ್ರೀ